# ಹೊಸತು

ಸಾಮಾಜಿಕ, ಸೈದ್ಧಾಂತಿಕ, ಸಾಂಸ್ಕೃತಿಕ ಕ್ಷೇತ್ರಕ್ಕೆ




ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ

ಸಂ : 1001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ

ಇವರಿಂದ ..........
ಪ್ರೀತಿಯ ಅಣ್ಣ ಪ್ರಕಾಶನ
ನೆನಪಿನ ಕಾಣಿಕೆ

ಇವರಿಗೆ ..........
ಒಲವಿನ ತಂಗಿ ಭೂಮಿಕಾಳ
ಹುಟ್ಟುಹಬ್ಬದ ಸಂದರ್ಭ

ಹೊಸತು
ನವಕರ್ನಾಟಕ ಪ್ರಕಾಶನ

ಒಂದು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

(ಹೊಸತು ಪರವಾಗಿ)

ದಿನಾಂಕ 12-12-2002

ಪ್ರಕಾಶ
(ಉಡುಗೊರೆ ನೀಡುವವರ ಸಹಿ)

ಜೀವನದ ಎಲ್ಲ ಕ್ಷೇತ್ರಗಳ ಆಗು-ಹೋಗುಗಳನ್ನು ಗಂಭೀರ ವಿಶ್ಲೇಷಣೆಗೆ ಒಳಪಡಿಸುವ ತಿಂಗಳ ಪತ್ರಿಕೆ

## ಉಡುಗೊರೆಯಾಗಿ 'ಹೊಸತು ಚಂದಾ'

ಹಬ್ಬ - ಹರಿದಿನ, ಮದುವೆ, ಗೃಹಪ್ರವೇಶ,
ಹುಟ್ಟುಹಬ್ಬ ಇತ್ಯಾದಿ ಸಮಾರಂಭಗಳಲ್ಲಿ
ಚಂದಾ ಕೂಪನ್ ಉಡುಗೊರೆ ನೀಡಿ

ವಾರ್ಷಿಕ ಚಂದಾ ರೂ. 100 :: 3 ವರ್ಷಕ್ಕೆ ರೂ. 250 :: ಬಿಡಿ ಪ್ರತಿ ರೂ. 10 :: ಡೆಮಿ 1/4 :: ಪುಟಗಳು - 64

ಸಂ : 3001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ



ಇವರಿಂದ ..........

ಇವರಿಗೆ ..........

ಹೊಸತು
ನವಕರ್ನಾಟಕ ಪ್ರಕಾಶನ

ಮೂರು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

(ಹೊ



ಮೂರು ವರ್ಷದ ಚಂದಾದೊಂದಿಗೆ ಮೂರು ಪುಸ್ತಕಗಳು ಉಚಿತ ಹಾಗೂ ನವಕರ್ನಾಟಕ ಪ್ರಕಟಣೆಗಳ ಮೇಲೆ ಶೇ. 20ರ ರಿಯಾಯಿತಿ. ನಿಮ್ಮ ಚಂದಾ ನವೀಕರಿಸಿ. ಉಡುಗೊರೆ ನೀಡುವ ಮೂಲಕ ಹೊಸ ಗೆಳೆಯರನ್ನು ಪರಿಚಯಿಸಿ

'ಹೊಸತು ಚಂದಾ' ಉಡುಗೊರೆ ಕೂಪನ್‌ಗಳು ಬೆಂಗಳೂರು, ಮಂಗಳೂರು, ಮೈಸೂರು ಹಾಗೂ ಗುಲ್ಬರ್ಗಾ ನಗರಗಳಲ್ಲಿರುವ ನವಕರ್ನಾಟಕ ಪುಸ್ತಕ ಮಳಿಗೆಗಳಲ್ಲೂ ಲಭ್ಯ

ವಿವರಗಳಿಗೆ :
ಹೊಸತು
15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂ. ಪೆ. ಸಂಖ್ಯೆ 5159
ಬೆಂಗಳೂರು-560 001 ಫೋನ್ : 2203580/81/82 e-mail : nkp@bgl.vsnl.net.in.

# ಹೊಸತು

## ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ರವಿಕುಮಾರ್ ಅಜ್ಜೀಪುರ, ಶ್ರೀಹರಿ ದಿಲೀಪ್, ಹರಿಣಿ, ಬಿ. ವಿಲ್ಸನ್, ಮೋನಪ್ಪ, ಸತೀಶ್ ಯಲ್ಲಾಪುರ*

*ಮುಖಚಿತ್ರ : ಕೆ. ಪಿ. ಸ್ವಾಮಿ*

*ವಿನ್ಯಾಸ : ನವಕರ್ನಾಟಕ ವಿನ್ಯಾಸ*

*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

ತಮ್ಮ ನೆಲೆ ಸ್ಥಿರವಲ್ಲವೆಂಬ ಅರಿವು ಕಾಡುತ್ತಿರುವುದರಿಂದ ಮುಖ್ಯಮಂತ್ರಿ ಶ್ರೀ ಎಸ್. ಎಮ್. ಕೃಷ್ಣ ಅವರು ಹಾರಿ ಕಾರ್ಕೈಕ್ಕಲ್‌ಗೆ ಹೋಗಿ ಅಲ್ಲಿ ಯಾವುದೋ ಶನಿಯ ಪೂಜೆ ಮಾಡಿ ಹಿಂದಿರುಗಿದ್ದಾರೆ. ಇನ್ನೇನು ಕೃಷ್ಣ ಜಾಗ ಖಾಲಿ ಮಾಡುತ್ತಾರೆಂದು ಬಗೆದು ಹುಮ್ಮಸ್ಸಿನಿಂದ ತಮ್ಮ 'ಸೇವೆ' ಸಲ್ಲಿಸಲು ಸಿದ್ಧರಾಗಿದ್ದ ಬಂಗಾರಪ್ಪನವರಿಗೆ ಈಗ ಶನಿಯ ವಕ್ರನೋಟ ಕಸಿವಿಸಿ ಉಂಟುಮಾಡಿರಬೇಕು. ಬೆಂಗಳೂರಿನಲ್ಲೇ ಅಷ್ಟೊಂದು ಶನಿಗಳಿರುವಾಗ ಈ ಕಾರ್ಕೈಕ್ಕಲ್ ಶನಿಯದೇನು ವಿಶೇಷ ಮಾಹಾತ್ಮ್ಯ ಎಂಬುದನ್ನು ಕುರಿತು ಮುಂದೊಮ್ಮೆ ಕೃಷ್ಣ ಪ್ರವಚನ ನೀಡಿಯಾರು. ಹಾಗೆ ನೋಡಿದರೆ ಚೆನ್ನೈನಲ್ಲಿ ಕೂತಿರುವ ದಡೂತಿ ಶನಿಯನ್ನು ಒಲೈಸಿಕೊಳ್ಳಲು ಎಳ್ಳಿನ ದೀಪ ಹಚ್ಚಿದ್ದರೆ ನಮ್ಮ ಮುಖ್ಯಮಂತ್ರಿಯವರ ಮುತ್ಸದ್ದಿತನ ಹೆಚ್ಚು ಪ್ರಖರವಾಗಿ ತೋರಿಬರುತ್ತಿತ್ತು. ನ್ಯಾಯಾಲಯ ಮತ್ತು ಪ್ರಧಾನಿಗಳ ಸಮ್ಮುಖದಲ್ಲಿ ತೀರ್ಮಾನ ಮಾಡುವುದಕ್ಕಿಂತ ನೆರೆ ರಾಜ್ಯದೊಡನೆ ನೇರ ಮಾತುಕತೆ ಎಂದಿಗೂ ಸ್ವಾಗತಾರ್ಹವೇ. ನಮ್ಮ ದೇಶದ ಎಲ್ಲ ಕ್ಷೇತ್ರಗಳಲ್ಲೂ ಮೌಢ್ಯ ಶನಿ ಅಟ್ಟಹಾಸದಿಂದ ಮೆರೆಯುತ್ತಿರುವುದು ಪದೇ ಪದೇ ನಮಗೆ ಕುತ್ತು ತರುತ್ತಿದೆ. ಈವರೆಗೆ ಇದ್ದದ್ದು ಸಾಲದೆಂಬಂತೆ ರಾಷ್ಟ್ರಾಧ್ಯಕ್ಷರು ಮೌಢ್ಯದ ಹರಹನ್ನು ವಿಸ್ತರಿಸುತ್ತಿದ್ದಾರೆ. ಒಬ್ಬ ವಿಜ್ಞಾನಿ, ದೂರದರ್ಶಿ, ರಸಾಭಿಜ್ಞ ಎಂದೆಲ್ಲಾ ವರ್ಣಿಸಲಾಗುವ ಶ್ರೀ. ಕಲಾಂ ಇತ್ತೀಚೆಗೆ ರಾಷ್ಟ್ರೀಯ ಕೋಶದ ಖರ್ಚಿನಲ್ಲಿ ದೆಹಲಿಯಿಂದ ಪುಟ್ಟಪರ್ತಿಗೆ ಬಂದು ಹೋದರು. ಇದು ಖಂಡಿತ ಶ್ರೇಯಸ್ಕರವಲ್ಲ. ಸಾರ್ವಜನಿಕರಿಗೆ ಬೂದಿ ನೀಡಿ ಆಶೀರ್ವದಿಸುವ ಸಾಯಿ ಬಾಬಾ ಪ್ರೇರಣೆಯೋ ಎಂಬಂತೆ ಕಲಾಂ ಅವರು ಪುಟ್ಟಪರ್ತಿ ಭೇಟಿಯ ತರುವಾಯದಲ್ಲಿ ವಿಪರ್ಯಾಸದ ಒಂದು ಹೇಳಿಕೆ ನೀಡಿ ಭಾರತದಲ್ಲಿ ಶಾಂತಿಯ ರಕ್ಷಣೆಗಾಗಿ ನಾವು ಅಣ್ವಸ್ತ್ರ ಪ್ರಯೋಗ ಮಾಡಲು ಹಿಂಜರಿಯುವುದಿಲ್ಲವೆಂದು ಘೋಷಿಸಿದರು. ಅದ್ವಾನಿ ತಂಡಕ್ಕೆ ಇದರಿಂದ ಬಹಳ ಸ್ಫೂರ್ತಿ ದೊರೆತಿರಬಹುದು, ಆದರೆ ನಮ್ಮ ದೇಶದ ಶಾಲೆಗಳಲ್ಲಿರುವ ಪುಟ್ಟ ಮಕ್ಕಳ ಮನಸ್ಸಿನ ಮೇಲೆ ಇದರ ಪರಿಣಾಮವೇನೆಂಬುದರ ಪರಿವೆ ಅಧ್ಯಕ್ಷರಿಗೆ ಇರಬೇಕಾಗಿತ್ತು. ಇವರು ನಮ್ಮ ಮಕ್ಕಳಿಗೆ ಬೋಧಿಸುವ ಶಾಂತಿ ಮತ್ತು ರಾಷ್ಟ್ರಪ್ರೇಮದ ಪಾಠ ಇಷ್ಟು ಅವಗುಣಗಳಿಂದ ತುಂಬಿರಬಾರದಿತ್ತು.

ಕಾಶ್ಮೀರದ ಪ್ರಶ್ನೆಯನ್ನು ಅಂತರರಾಷ್ಟ್ರೀಯವನ್ನಾಗಿಸುವುದಿಲ್ಲವೆಂದು ಪ್ರಧಾನಿ ವಾಜಪೇಯಿಯವರು ಯಾವಾಗಲೂ ಹೇಳುತ್ತಿರುತ್ತಾರೆ. ಅವರ ಆಶೀರ್ವಾದ ಪಡೆದ ರಾಂ ಜೇಠ್ಮಲಾನಿ (ಈ ಹೆಸರನ್ನು 'ಮಲೂನಿ' ಮತ್ತು 'ಮಲೈನೀ' ಎಂದು ಓದಿಕೊಂಡರೆ ನಮ್ಮ ಅಭ್ಯಂತರವಿಲ್ಲ) ವಾಷಿಂಗ್‌ಟನ್ನಿನಲ್ಲಿ ಕ್ರಿಸ್ಟಿನಾ ರೊಕ್ಕಾ, ಪ್ರಿಸ್ಟಿನಾ ಪೊಕ್ಕಾ, ಮುಂತಾದ ಮೂರನೆಯ ದರ್ಜೆಯ ಅಧಿಕಾರಿಗಳನ್ನು ಸಂಧಿಸಿ ಕಾಶ್ಮೀರದ ಸಮಸ್ಯೆ ಬಗೆಹರಿಸಲು(?) ತಾವು ಕೈಗೊಂಡಿರುವ ಕ್ರಮಗಳನ್ನು ವಿವರಿಸಿ, ಒಪ್ಪಿಗೆ ಪಡೆಯಲು ದುಂಬಾಲು ಬಿದ್ದಿದ್ದಾರೆ. ರೊಕ್ಕಾ ಜೊತೆ ಕಾಶ್ಮೀರದ ಪ್ರಶ್ನೆ ಚರ್ಚಿಸುವ ಔಚಿತ್ಯವೇನು? ಅದನ್ನು ಮಾಡಲು ಜೇಠ್ಮಲಾನಿಗಿರುವ ಅಧಿಕೃತ ಸ್ಥಾನವೇನು? ತೆರೆಮರೆಯಲ್ಲಿ ವಾಜಪೇಯಿ ಸರ್ಕಾರ ಕಾಶ್ಮೀರದ ಬಗ್ಗೆ ಏನೇನು ಅಸಂಬದ್ಧ ಕ್ರಮಗಳನ್ನು ಕೈಗೊಳ್ಳುತ್ತಿದೆಯೋ ತಿಳಿಯುತ್ತಿಲ್ಲ. ನಮ್ಮ ಮಾಧ್ಯಮಗಳು ಈ ಬಗ್ಗೆ ಹೆಚ್ಚಿನ ಆಸಕ್ತಿ ತೋರುವುದು ಒಳ್ಳೆಯದು. ಐವತ್ತು ವರ್ಷಗಳ ಹಿಂದೆ ತಮ್ಮ ದೇಶ ಮಾಡಿದ ಕುತಂತ್ರವನ್ನು ಬ್ರಿಟನ್ನಿನ ವಿದೇಶಾಂಗ ಮಂತ್ರಿ ಈಗ ಉಲ್ಲೇಖಿಸಿ ಪಾಪಪ್ರಜ್ಞೆಯನ್ನು ಪ್ರಕಟಿಸಿಕೊಂಡಿದ್ದಾರೆ. ಈ ಹೇಳಿಕೆಯು ಸಮಕಾಲೀನ ಕುತಂತ್ರವೊಂದರ ಭಾಗವೇ ಎಂಬುದನ್ನು ನಮ್ಮ ದೇಶ ವಿಮರ್ಶಿಸಿಕೊಳ್ಳಬೇಕು.

ರಾಂ ಜೇಠ್ಮಲಾನಿಯಂಥವರನ್ನು ರಾಜ್ಯಸಭೆಗೆ ಆಯ್ಕೆ ಮಾಡಿ ಕಳಿಸಿದ ಕರ್ನಾಟಕ ಶಾಸನಸಭೆಯ ಪರಿಪಾಠವನ್ನು ಹಿಂದೆ ಪ್ರಮುಖ ಮಂತ್ರಿಯಾಗಿದ್ದ ಶ್ರೀ. ಸಿಂಧ್ಯಾ ಇತ್ತೀಚೆಗೆ ಮರುಕದಿಂದ ಸ್ಮರಿಸಿಕೊಂಡಿದ್ದಾರೆ. ಅಂದು ಇವರು ಬಾಯಲ್ಲಿ ಮುದ್ದೆ ತುರುಕಿಕೊಂಡಿದ್ದರೋ ಏನೋ, ಅದಕ್ಕೇ ಬಾಯಿ ಬಿಡಲಿಲ್ಲ. ತಮ್ಮ ನಾಯಕ ರಾಮಕೃಷ್ಣ ಹೆಗಡೆಯವರ ವಕೀಲರಾಗಿದ್ದ ಮಹಾಶಯನನ್ನು ಬೆಂಗಳೂರಿಗನನ್ನಾಗಿಸಿ ಆಮೇಲೆ ರಾಜ್ಯಸಭೆಗೆ ಕಳಿಸಿದ್ದು ಇಂದಾದರೂ ಸಿಂಧ್ಯಾ ಅವರಿಗೆ ನೆನಪಿಗೆ ಬಂದಿದ್ದು ಸ್ವಾಗತಾರ್ಹ. ಕರ್ನಾಟಕದ ಶಾಸನಸಭೆಯನ್ನು ಇನ್ನು ಮುಂದಾದರೂ ಅಶಕ್ತ ಪೋಷಕ ಸಭೆಯನ್ನಾಗಿಸದೆ ಜೇಠ್ಮಲಾನಿ, ವೆಂಕಯ್ಯ ನಾಯ್ಡು ಮುಂತಾದವರಿಗೆ ಬರಡುಭೂಮಿಯ ರಾಜಕೀಯ ಜೀವನದ ಅನುಭವ ಉಂಟಾಗುವಂತೆ ಮಾಡಲು ನಮ್ಮ ರಾಜ್ಯದ ಶಾಸಕರು ಮುಂದಾಗಬೇಕು.

**ದೇವ ಕಣಗಿಲೆ :**

ಮುಖಪುಟದಲ್ಲಿ ಕಂಗೊಳಿಸುತ್ತಿರುವ ದೇವಕಣಗಿಲೆ ಮರದ ಹೂಗುಚ್ಛ ಅಪರೂಪದ ನೋಟ. ಮರವು ಗಡಸು ಹೆಬ್ಬಂಡೆಗಳ ಮಧ್ಯೆ ನೀರಿಲ್ಲದೆಯೂ ಬೆಳೆದು, ಎಲೆಗಳೆಲ್ಲ ಉದುರಿ ಬೋಳಾಗಿದ್ದರೂ, ನವಿರಾದ ಕಂಪು ಸೂಸುವ ಸುಂದರ ಹೂಗೊಂಚಲುಗಳನ್ನು ಅರಳಿಸಬಲ್ಲುದು. ಬಿಳಿಯ ಹೂಗಳ ಎಸಳಿನ ಒಳಪದರದಲ್ಲಿ ಅರಿಶಿನ ಛಾಯೆಯುಳ್ಳ ಹಾಗೂ ರಕ್ತಚಂದನದ ಬಣ್ಣದ ಹೂಗಳುಳ್ಳ ಎರಡು ಜಾತಿಗಳಿವೆ. ಎಲೆ - ಹೂ ಕಿತ್ತಾಗ ಹಾಲಿನಂತಹ ಬಿಳಿಯ ಸೋನೆ ದ್ರವ ಜಿನುಗುತ್ತದೆ. ಮೆಕ್ಸಿಕೊ-ಗ್ವಾಟೆಮಾಲ ಇದರ ತವರಾಗಿದ್ದು ಪೋರ್ಚುಗೀಸರು ೧೭ನೇ ಶತಮಾನದಲ್ಲಿ ಗೋವೆಯ ಮೂಲಕ ಭಾರತಕ್ಕೆ ತಂದಿರಬಹುದೆಂದು ಊಹಿಸಲಾಗಿದೆ. ಕನ್ನಡಿಗರು ಹೊಸ ಹೆಸರನ್ನಿಟ್ಟು ಸ್ವಾಗತಿಸಿದ್ದಾರೆ.




ಸಂಪುಟ-೪ ಸಂಚಿಕೆ -೫ ಡಿಸೆಂಬರ್ ೨೦೦೨

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in


## ಮತ್ತೆ ನ್ಯಾಯಾಲಯದತ್ತ ನೋಟ

ಸಂಪಾದಕೀಯ

**ಕ**ರ್ನಾಟಕವು ಅಕ್ಕಪಕ್ಕದ ಎಲ್ಲ ರಾಜ್ಯಗಳ ಜೊತೆಯಲ್ಲೂ ಒಂದಲ್ಲ ಒಂದು ವಿವಾದ ಏರ್ಪಡಿಸಿಕೊಂಡಿದೆ, ನದಿಗಳ ನೀರಿಗಾಗಿ ಕಿತ್ತಾಡುತ್ತಿದೆ, ಎಂದು ಹೇಳುತ್ತಾ ನಮ್ಮದು ಜಗಳಗಂಟಿ ರಾಜ್ಯವೆಂಬ ಅರ್ಥ ಬರುವ ಮಾತುಗಳನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಉಚ್ಚರಿಸಲಾಯಿತೆಂದು ವರದಿಯಾಗಿದೆ. ಬಗೆಹರಿದ ಪ್ರಶ್ನೆಗಳನ್ನು ಪದೇ ಪದೇ ಎತ್ತುವ ಪ್ರಯತ್ನವನ್ನು ನೆರೆ ರಾಜ್ಯಗಳು ಮಾಡಿದರೆ ಕರ್ನಾಟಕದ್ದೇನು ತಪ್ಪೋ ತಿಳಿಯದು. ಉದಾಹರಣೆಗೆ, ಮಹಾರಾಷ್ಟ್ರ ಇತ್ತೀಚೆಗಷ್ಟೇ ಎತ್ತಿದ ಗಡಿಯ ಪ್ರಶ್ನೆ. ಅಥವಾ, ಬಗೆಹರಿಸಲು ಇರುವ ಒಂದೇ ಮಾರ್ಗ ಮಾತುಕತೆ ಎಂಬುದು ತಿಳಿದಿದ್ದರೂ ಸಮಗ್ರವಾದ ಚರ್ಚೆ ಮಾಡಲು ತಮಿಳುನಾಡು ಸರ್ಕಾರ ನಿರಾಕರಿಸಿದರೆ ಕಾವೇರಿ ವಿವಾದ ಇತ್ಯರ್ಥವಾಗುವುದು ಹೇಗೆ ? ಹೀಗಿದ್ದಾಗ್ಯೂ, ನಮಗೆ ಜಗಳಗಂಟಿಗಳೆಂಬ ನಾಮಧೇಯ ನೀಡಲಾಗಿದೆ ! ಇದಕ್ಕೆ ಮುಂಚೆ ರಾಜ್ಯದ ಮುಖ್ಯಮಂತ್ರಿಗಳ ಬಗ್ಗೆ ಅವಹೇಳನಕರವಾದ ಟೀಕೆಯನ್ನು ನ್ಯಾಯಾಲಯವು ಮಾಡಿತ್ತೆಂಬುದನ್ನು ಜನ ಮರೆತಿರಲಾರರು.

ವಾಸ್ತವಿಕ ಸನ್ನಿವೇಶದ ಚಿತ್ರಣವನ್ನು ಅವಲೋಕಿಸಿ ಕಡಿಮೆ ಪ್ರಮಾಣದಲ್ಲಿ ಮಾತ್ರವೇ ನೀರು ದೊರೆಯಬಹುದೆಂಬುದನ್ನು ಮನಗಂಡು ಆ ನಿಟ್ಟಿನಲ್ಲಿ ಕಾವೇರಿ ನೀರಿನ ಪಾಲು ಪಡೆಯುವುದರ ಬದಲು ನ್ಯಾಯಾಲಯದ ಮೂಲಕ ಯಥೇಚ್ಛವಾಗಿ ನೀರು ಸುರಿಸಿಕೊಳ್ಳಬಹುದೆಂದು ಭಾವಿಸಿದ ಜಯಲಲಿತಾ ಪ್ರಧಾನಿಗೆ ಪತ್ರ ಬರೆದು ಮೂದಲಿಕೆಯ ಮಾತುಗಳನ್ನು ತುಂಬಿದ್ದು ಈಗ ಸರ್ವವಿದಿತ. ತನಗೆ ಕಾವೇರಿ ಪ್ರಾಧಿಕಾರದಲ್ಲಿ ನಂಬಿಕೆ ಉಳಿದಿಲ್ಲವೆಂದು ತಮಿಳುನಾಡು ಮುಖ್ಯಮಂತ್ರಿ ಹೇಳಿದಾಗ ಅದರರ್ಥ ನ್ಯಾಯಾಲಯದ ಬಗ್ಗೆ ಆಕೆಗೆ ಅಪಾರವಾದ ಶ್ರದ್ಧೆ ಇದೆಯೆಂದು ತಿಳಿಸುವುದೇ ಆಗಿತ್ತು. ''ಅನ್ಯಥಾ ಶರಣಂ ನಾಸ್ತಿ, ತ್ವಮೇವ ಶರಣಂ ಮಮ'' ಎಂದು ಹೇಳುತ್ತಾ ನ್ಯಾಯಾಲಯವನ್ನು ಉಬ್ಬಿಸಬಹುದೆಂಬ ಆಕಾಂಕ್ಷೆ ಆಕೆಯದು. ಆ ಬುದ್ಧಿವಂತಿಕೆಯ ತಂತ್ರಕ್ಕೆ ಮಣಿಯದೆ ವಸ್ತುನಿಷ್ಠವಾಗಿ ತೀರ್ಮಾನ ಕೈಗೊಳ್ಳುವುದು ನ್ಯಾಯಾಲಯಕ್ಕೆ ಸಾಧ್ಯವಿತ್ತು. ಆದರೆ ನ್ಯಾಯಾಲಯವು ಜಯಲಲಿತಾ ಅವರಿಗೆ ಛೀಮಾರಿ ಹಾಕಿ ಪ್ರಧಾನಿಗೆ ಬರೆದ ಪತ್ರದ ಒಕ್ಕಣೆಯನ್ನು ಬದಲಾಯಿಸಿಕೊಳ್ಳಲು ನಿರ್ದೇಶಿಸಿತು. ನಮ್ಮ ರಾಷ್ಟ್ರದ ಪ್ರಧಾನಿಗೆ ತನ್ನ ಮರ್ಯಾದೆಯನ್ನು ರಕ್ಷಿಸಿಕೊಳ್ಳಲು ಸಾಧ್ಯವಿಲ್ಲವೆ ? ಅದಕ್ಕೆ ನ್ಯಾಯಾಲಯ ತಲೆ ಹಾಕಬೇಕೆ ? ನ್ಯಾಯಾಲಯದ ಆದೇಶದಂತೆ ''ಪ್ರಧಾನಿಯಲ್ಲಿ ನನಗೆ ನಂಬಿಕೆ ಇದೆ'' ಎಂದು ಜಯಲಲಿತಾ ಹೇಳಿಬಿಟ್ಟರೆ ನಂಬಿಕೆ ಘನೀಭೂತವಾದೀತೆ ?

ಕಾವೇರಿ ನೀರಿನ ಹಂಚಿಕೆಯ ಮೊಕದ್ದಮೆಯನ್ನು ಆಲಿಸುವಾಗ ನ್ಯಾಯಾಲಯವು ಕೇಂದ್ರಸರ್ಕಾರಕ್ಕೆ ಒಂದು ನಿರ್ದೇಶನ ನೀಡಿದೆ. ಗಂಗಾ ಮತ್ತು ಕಾವೇರಿ ನದಿಗಳನ್ನು ಜೋಡಿಸಲು ಸೂಕ್ತ ಕ್ರಮಗಳನ್ನು ಆರಂಭಿಸಬೇಕೆಂಬುದು ಆ ನಿರ್ದೇಶನ. ಹೀಗೆ ಏಕಾಏಕಿ ಆಜ್ಞೆ ನೀಡುವುದು ಎಷ್ಟರಮಟ್ಟಿಗೆ ಸರಿ ಮತ್ತು ಅಂತಹ ತೀರ್ಮಾನ ಕೈಗೊಳ್ಳುವುದು ನ್ಯಾಯಾಲಯದ ಪರಿಧಿಗೆ ಸೇರಿದೆಯೆ ? ನದಿಗಳನ್ನು ಜೋಡಿಸಬೇಕೆಂದು ಈಗಾಗಲೆ ತೀರ್ಮಾನವಾಗಿಬಿಟ್ಟಿದೆ, ಏನಿದ್ದರೂ ಅದಕ್ಕಾಗಿ ಸರ್ಕಾರ ಕ್ರಮ ಕೈಗೊಳ್ಳುವುದು ಮಾತ್ರ ಬಾಕಿ ಇದೆ, ಎಂಬಂತೆ ನ್ಯಾಯಾಲಯವು ನಿಲುವು ತಾಳಿದೆ. ಹಾಗೆ ಜೋಡಿಸುವುದು ತಾಂತ್ರಿಕವಾಗಿ ಸಾಧ್ಯವೆ, ಹಾಗೆ ಮಾಡಹೊರಟರೆ ಪರಿಸರದ ಹಾನಿ ಉಂಟಾಗಬಹುದೆ, ಎಷ್ಟೋ ಕಡೆಗಳಲ್ಲಿ ಜನರಿಗೆ ಪುನರ್ವಸತಿ ಸೌಕರ್ಯ ಮಾಡಬೇಕಾಗಬಹುದೆ, ಅವರನ್ನು ಸ್ಥಳಾಂತರಿಸಲು ಬೇರೆಡೆ ಜಾಗ ಇದೆಯೆ, ನದಿಗಳನ್ನು ಜೋಡಿಸಿದರೆ ಗಂಗಾ ಬಯಲಿನಲ್ಲಿ ಯಾವ ಮುಗ್ಗಟ್ಟೂ ಉಂಟಾಗುವುದಿಲ್ಲವೆ, ಕಾವೇರಿಗೆ ಗಂಗಾ ನೀರಿನ ಬದಲು ಕೇವಲ ಸ್ವಲ್ಪ ಬೊಗ್ಗಡ ಹರಿದು ಬರುವಂತಾದರೆ ಏನು ಮಾಡಬೇಕು, ಎಂಬಿತ್ಯಾದಿ ಪ್ರಶ್ನೆಗಳನ್ನು ಆಮೂಲಾಗ್ರವಾಗಿ ಪರಿಶೀಲಿಸದೆ ನದಿಗಳ ಜೋಡಣೆಯ ಯೋಜನೆಯನ್ನು ಕೈಗೆತ್ತಿಕೊಳ್ಳಬಾರದು. ಹಲವು ರಾಜ್ಯಗಳ ಶಾಸನ ಸಭೆಗಳು ಮತ್ತು ಕೇಂದ್ರದ ಲೋಕಸಭೆ ಇದನ್ನೆಲ್ಲಾ ಚರ್ಚಿಸಿ ಮುಂದಿನ ಹೆಜ್ಜೆ ಹಾಕಬೇಕು. ನ್ಯಾಯಾಲಯವು ಲಘುವಾಗಿ ಪರಿಗಣಿಸಿ ''ಯೋಜನೆಯನ್ನು ಕೈಗೆತ್ತಿಕೊಳ್ಳಿ'' ಎಂದು ನುಡಿಯುವುದು ಅದರ ಅಧಿಕಾರ ವ್ಯಾಪ್ತಿಯನ್ನು ಮೀರಿದಂತಾಗುವುದಿಲ್ಲವೆ ?

ಇದೇ ಅಕ್ಟೋಬರ್‌ನ ಕಡೆಯ ದಿನದಂದು ಸರ್ವೋಚ್ಚ ನ್ಯಾಯಾಲಯದ ಹನ್ನೊಂದು ಸದಸ್ಯರ ಪೀಠವು ಸಂವಿಧಾನದ ೩೦(೧)ನೆಯ ನಿಬಂಧವನ್ನು ಕುರಿತಂತೆ ಮಹತ್ವದ ತೀರ್ಪೊಂದನ್ನು ನೀಡಿದೆ. ಅದು ಅಲ್ಪಸಂಖ್ಯಾತರು ತಮ್ಮ ಆಯ್ಕೆಯಂತೆ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ನಡೆಸುವುದಕ್ಕೆ ಸಂಬಂಧಿಸಿದ್ದು. ಆ ಪ್ರಕರಣದ ಸಂದರ್ಭದಲ್ಲಿ ಬೇರೆ ಕೆಲವು ಪ್ರಮುಖ ಪ್ರಶ್ನೆಗಳನ್ನು ಈಗ ವಿಶ್ಲೇಷಿಸಲಾಗಿದೆ. ೧೯೯೩ರಲ್ಲಿ ಏಳು ಸದಸ್ಯರ ಪೀಠವು ನೀಡಿದ್ದ ತೀರ್ಪು ಈವರೆಗೆ ಜಾರಿಯಲ್ಲಿತ್ತು. ಆ ತೀರ್ಪಿನ ಪ್ರಕಾರ ಶಿಕ್ಷಣ ಸಂಸ್ಥೆಗಳು ವಂತಿಗೆ ಎತ್ತಕೂಡದೆಂಬ ನಿಯಮವಿತ್ತು, ತಾಂತ್ರಿಕ ಹಾಗೂ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳ ಪ್ರವೇಶಕ್ಕೆ ನಿಗದಿತವಾದ ಒಂದು ಪ್ರಮಾಣವನ್ನು ವಿಧಿಸಲಾಗಿತ್ತು, ಶುಲ್ಕ ವಿಧಿಸುವಲ್ಲಿ ಎರಡು ಶ್ರೇಣಿಗಳನ್ನು ಕಲ್ಪಿಸಿ, ಅರ್ಧದಷ್ಟು ವಿದ್ಯಾರ್ಥಿಗಳಿಗೆ ಅಂಕಗಳ ಆಧಾರದ ಮೇಲೆ ಕಡಿಮೆ ಮೊತ್ತದ ಶುಲ್ಕವನ್ನು ನಿಗದಿಗೊಳಿಸಲಾಗಿತ್ತು. ಆ ಏಳು ಸದಸ್ಯರ ಪೀಠದ ತೀರ್ಪು ಕಳೆದ ಒಂದು ದಶಕದಿಂದ ನಮ್ಮ ರಾಷ್ಟ್ರದಲ್ಲಿ ಜಾರಿಯಲ್ಲಿದ್ದು, ಅದೇ ಸಂವಿಧಾನಾತ್ಮಕ ವಿಧಾನವೆಂದು ಕಾನೂನಿನ ಪಂಡಿತರು ಭಾವಿಸಿದ್ದರು. ಈಗಿನ ಹನ್ನೊಂದು ಸದಸ್ಯರ ಪೀಠವು ಹಿಂದಿನ ತೀರ್ಪನ್ನು ಅಸಂವೈಧಾನಿಕವೆಂದು ತಳ್ಳಿಹಾಕಿ ಸಂವಿಧಾನದ ನಿಬಂಧಕ್ಕೆ ಹೊಸ ವ್ಯಾಖ್ಯಾನ ನೀಡಿದೆ. ಅಂದರೆ, ಒಂದು ದಶಕದ ಕಾಲ ನಮ್ಮ ದೇಶದಲ್ಲಿ ಅಸಂವೈಧಾನಿಕ ಕ್ರಮವು ಜಾರಿಯಲ್ಲಿತ್ತು ಎಂದರ್ಥ. ಕಾನೂನಿನ ಕಗ್ಗಂಟನ್ನು ಈಗ ತಾನೆ ಬಿಡಿಸಿ ಹೇಳಲಾಗಿದೆ ಎಂದೂ ನಾವು ಭಾವಿಸಬೇಕು. ಈಗಿನ ತೀರ್ಪನ್ನು ಬದಲಾಯಿಸಬೇಕಾದರೆ ಹದಿಮೂರು ಸದಸ್ಯರ ಇನ್ನೊಂದು ಪೀಠ ಅಸ್ತಿತ್ವಕ್ಕೆ ಬಂದು, ಅದು ಸಂವಿಧಾನದ ನಿಬಂಧದ ಅರ್ಥವನ್ನು ಮರುವ್ಯಾಖ್ಯಾನ ಮಾಡಿ ಹೇಳಬೇಕಾಗುತ್ತದೆಯೆಂದು ಕಾನೂನು ಪಂಡಿತರು ತಿಳಿಸುತ್ತಾರೆ. ಹನ್ನೊಂದು ಸದಸ್ಯರ ಈಗಿನ ಪೀಠವು ತರಾತುರಿಯಲ್ಲಿ ಮೊಕದ್ದಮೆಯನ್ನು ಆಲಿಸಿ ತೀರ್ಪು ನೀಡಿದ್ದಕ್ಕೂ ಆ ಪೀಠದಲ್ಲಿದ್ದವರು ಯಾರೋ ನಿವೃತ್ತರಾಗಲಿದ್ದುದಕ್ಕೂ ಸಂಬಂಧವಿಲ್ಲದಿಲ್ಲವೆಂದು ರಾಜೀವ ಧಾವನ್ ಅಭಿಪ್ರಾಯಪಟ್ಟಿದ್ದಾರೆ. ಅದೇನೇ ಇರಲಿ, ನಮಗೆ ಇರುವ ಒಂದೇ ಸಂವಿಧಾನಕ್ಕೆ ಒಂದೊಂದು ಕಾಲಕ್ಕೆ ಒಂದೊಂದು ಅರ್ಥ ಮತ್ತು ಒಬ್ಬೊಬ್ಬರ ಪ್ರಕಾರ ಒಂದೊಂದು ಅರ್ಥ ಎಂಬುದಂತೂ ನಿಜ. ಆದರೆ ಆ ಅರ್ಥಗಳೇ ಆಯಾಕಾಲಕ್ಕೆ ನಮ್ಮ ದೇಶದ ಕಾನೂನು ಎಂಬ ಮಾನ್ಯತೆ ಪಡೆದಿರುತ್ತವೆ. ಸಂವಿಧಾನದ ಅರ್ಥವು ಗಣಿತಶಾಸ್ತ್ರದಷ್ಟು ನಿಖರವಾಗಿಲ್ಲದೆ ಇರಬಹುದು, ಆದರೆ ಅದರ ಅರ್ಥವ್ಯಾಪ್ತಿಯು ಇಷ್ಟೊಂದು ಹಿಗ್ಗಿಸುವಿಕೆಗೆ ಅಥವಾ ಕುಗ್ಗಿಸುವಿಕೆಗೆ ಗುರಿಯಾಗಬಹುದೆಂಬುದನ್ನು ನೆನೆದರೆ ಆಶ್ಚರ್ಯವೆನಿಸುತ್ತದೆ. ಈ ಅರ್ಥದಲ್ಲಿ ನಮ್ಮ ಸಂವಿಧಾನದ ನಿಬಂಧಗಳು ಬಾದರಾಯಣನ

ಬ್ರಹ್ಮಸೂತ್ರಗಳಷ್ಟೇ ಕಠಿಣವಾದವು; ಒಬ್ಬೊಬ್ಬ ಆಚಾರ್ಯರೂ ತಮಗೆ ಸರಿ ಕಾಣುವಂತೆ ಭಾಷ್ಯ ಬರೆದು ಅದೇ ಸೂತ್ರಾರ್ಥವೆಂದು ತರ್ಕಿಸಬಹುದು. ಆದರೆ ಒಂದು ವ್ಯತ್ಯಾಸ ಉಂಟು. ಅದೇನೆಂದರೆ, ಆಚಾರ್ಯರನ್ನು ತರಾಟೆಗೆ ತೆಗೆದುಕೊಳ್ಳಬಹುದು. ಅದಕ್ಕೆ ಭಿನ್ನವಾಗಿ, ನ್ಯಾಯಪೀಠದ ಸದಸ್ಯರು ಯಾರನ್ನು ಬೇಕಾದರೂ ಟೀಕಿಸಬಹುದು, ಆದರೆ ಬೇರೆಯವರಾರೂ ಅವರನ್ನು ಟೀಕಿಸುವಂತಿಲ್ಲ. ನ್ಯಾಯಾಲಯದ ಶ್ರೇಷ್ಠತೆಯನ್ನು ಕಾಪಾಡಿಕೊಳ್ಳಲು ಇದು ಅವಶ್ಯಕವೆಂಬ ಮಾತನ್ನು ಆಗಾಗ್ಗೆ ಜ್ಞಾಪಿಸಲಾಗುತ್ತಿರುತ್ತದೆ. ಕರ್ನಾಟಕದ ಉಚ್ಚ ನ್ಯಾಯಾಲಯದ ಕೆಲವು ನ್ಯಾಯಮೂರ್ತಿಗಳು ಮೈಸೂರಿನಲ್ಲಿ ಭಾಗಿಗಳಾಗಿದ್ದರೆನ್ನಲಾದ ಪ್ರಸಂಗವನ್ನು ತನಿಖೆ ಮಾಡುವುದು ಕೂಡ ಈ ಶ್ರೇಷ್ಠತೆಯನ್ನು ರಕ್ಷಿಸಿಕೊಳ್ಳುವ ಸಲುವಾಗಿ ಎಂಬುದನ್ನು ಕಾನೂನು ಪಂಡಿತರು ಅಲ್ಲಗಳೆಯುವಂತಿಲ್ಲ.

ಸಂವಿಧಾನದ ೩೦(೧)ನೆಯ ವಿಧಿಯ ಈಗಿನ ಅರ್ಥದಂತೆ ಶಿಕ್ಷಣ ಸಂಸ್ಥೆಗಳನ್ನು ನಡೆಸುವುದು ಒಂದು ಉದ್ಯೋಗ; ಆದ್ದರಿಂದ ಸ್ವಲ್ಪಮಟ್ಟಿನ ಲಾಭ ಮಾಡಿಕೊಳ್ಳುವುದು ತಪ್ಪಲ್ಲ. ''ಸ್ವಲ್ಪಮಟ್ಟಿನ'' ಎಂಬುದು ಅನಿರ್ದಿಷ್ಟವಾದ್ದರಿಂದ ಪರಿಣಾಮವು ನೆಟ್ಟಗಿಲ್ಲದೆ ಹೋಗಬಹುದು. ಜೊತೆಗೆ, ಸರ್ಕಾರದಿಂದ ಅನುದಾನ ಪಡೆಯದಿರುವ ಶಿಕ್ಷಣ ಸಂಸ್ಥೆಗಳ ಮೇಲೆ ಸರ್ಕಾರದ ಹತೋಟಿ ತೀರಾ ಗೌಣವಾಗಿರಬೇಕೆಂದು ಈಗಿನ ತೀರ್ಪು ಸೂಚಿಸಿದೆ. ಸರ್ಕಾರವು ಶಿಕ್ಷಣ ಕ್ಷೇತ್ರದಿಂದ ಕ್ರಮೇಣ ಹಿಂದಕ್ಕೆ ಸರಿಯುತ್ತಿರುವ ಇಂದಿನ ಸನ್ನಿವೇಶದಲ್ಲಿ ಈ ತೀರ್ಪಿನ ಹೊಡೆತ ಬಲವಾಗಿ ಬೀಳುವುದು ಆರ್ಥಿಕವಾಗಿ ಹಿಂದುಳಿದಿರುವವರ ಮೇಲೆ. ಉಚ್ಚ ಶಿಕ್ಷಣವು ಅಂತಹವರಿಗೆ ಇನ್ನು ಮುಂದೆ ನಿಜಕ್ಕೂ ಮರೀಚಿಕೆಯಾಗಲಿದೆ. ಮುಕ್ತ ಮಾರುಕಟ್ಟೆಯ ನೀತಿಯು ಶಿಕ್ಷಣವನ್ನು ಈಗಾಗಲೆ ಒಂದು ಸರಕನ್ನಾಗಿ ಮಾರ್ಪಡಿಸಿದೆ. ಇಂದಿಗಿಂತಲೂ ಹೆಚ್ಚಿನ ಮಟ್ಟದಲ್ಲಿ ನಾವದನ್ನು ಮುಂದಿನ ದಿನಗಳಲ್ಲಿ ನೋಡುತ್ತೇವೆ. ಸಂವಿಧಾನಕ್ಕೆ ಇಂದು ನೀಡಲಾಗಿರುವ ಅರ್ಥದ ಪ್ರಭಾವ ಈ ದಿಕ್ಕಿನಲ್ಲಿ ಇನ್ನೂ ಪ್ರಖರಗೊಂಡರೆ ಆಶ್ಚರ್ಯವಿಲ್ಲ. ವಿಶ್ವ ಬ್ಯಾಂಕಿನ ಆಶಯಗಳು ಕಾರ್ಯಗತಗೊಳ್ಳುವ ದಿನಗಳು ಹತ್ತಿರ ಬರುತ್ತಿವೆಯೆಂಬ ಎಚ್ಚರ ಸಾರ್ವಜನಿಕರಿಗೆ ಇರಬೇಕು.

ಇದೆಲ್ಲದರ ಹಿನ್ನೆಲೆಯಲ್ಲಿ ೧೯೭೦ರ ಒಂದು ಘಟನೆಯನ್ನು ನೆನಪಿಗೆ ತಂದುಕೊಂಡು ಅಂದಿನ ಚರ್ಚೆಯನ್ನು ಪುನರಾರಂಭಿಸ ಬೇಕಾದ ಕರ್ತವ್ಯ ನಮ್ಮ ಲೋಕಸಭಾ ಸದಸ್ಯರಿಗಿದೆ. ಅಂದು ಆಸ್ತಿಯ ಹಕ್ಕಿನ ಬಗೆಗಿನ ಚರ್ಚೆಯಲ್ಲಿ ಸಂವಿಧಾನದತ್ತವಾದ ಮೂಲಭೂತ ಹಕ್ಕುಗಳ ವ್ಯಾಪ್ತಿಯನ್ನು ಕುರಿತಂತೆ ವಿಸ್ತಾರವಾದ ಬೌದ್ಧಿಕ ಘರ್ಷಣೆ ನಡೆಯಿತು. ಇಂದು ಕೇಶವಾನಂದ ಭಾರತಿ ಮೊಕದ್ದಮೆಯನ್ನು ಉದ್ಧರಿಸುವಂತೆ ಅಂದು ಗೋಲಕನಾಥ ಮೊಕದ್ದಮೆಯನ್ನು ಉದ್ಧರಿಸುತ್ತಿದ್ದರು. ಆ ತೀರ್ಪಿನಲ್ಲಿ ಸರ್ವೋಚ್ಚ ನ್ಯಾಯಾಲಯವು ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳ ಉಲ್ಲೇಖವಿರುವ ಭಾಗಕ್ಕೆ ತಿದ್ದುಪಡಿ ತರಲು ಲೋಕಸಭೆಗೆ ಹಕ್ಕಿಲ್ಲವೆಂದು ಸಾರಿತ್ತು. ಈ ತೀರ್ಪನ್ನು ನಿರಾಕರಿಸಲು ಶ್ರೀ. ನಾಥ್ ಪೈ ಲೋಕಸಭೆಯಲ್ಲಿ ಒಂದು ಮಸೂದೆಯನ್ನು ಮಂಡಿಸಿದ್ದರು. ಅವರ ನಿರ್ಣಯದ ಸಾರಾಂಶ ಸ್ಥೂಲವಾಗಿ ಹೀಗಿತ್ತು: ಪ್ರಜೆಗಳಿಂದ ಚುನಾಯಿತರಾದ ಮತ್ತು ಆ ಕಾರಣದಿಂದ ಪ್ರಜೆಗಳ ನಿಜವಾದ ಪ್ರತಿನಿಧಿಗಳಾದ ಲೋಕಸಭಾ ಸದಸ್ಯರಿಗೆ, ತನ್ಮೂಲಕ ಲೋಕಸಭೆಗೆ, ಸಂವಿಧಾನದ ಬೇರೆಲ್ಲಾ ಭಾಗಗಳನ್ನು ತಿದ್ದುವ ಹಕ್ಕಿರುವಂತೆ ಮೂಲಭೂತ ಹಕ್ಕುಗಳನ್ನು ಪ್ರತಿಪಾದಿಸುವ ಭಾಗವನ್ನು ತಿದ್ದುವ ಹಕ್ಕೂ ಇದೆ. ಸಂವಿಧಾನದಲ್ಲಿ ಸೂಚಿತವಾಗಿರುವ ಗುರಿಯನ್ನು ಮುಟ್ಟಬೇಕಾದರೆ ಮತ್ತು ಸಮಾಜವಾದವನ್ನು ಅಸ್ತಿತ್ವಕ್ಕೆ ತರಬೇಕಾದರೆ ಅಂತಹ ನಿರ್ಣಯದ ಅಂಗೀಕಾರ ಅತ್ಯಗತ್ಯ. ನ್ಯಾಯಾಲಯವು ಕೊಡದ್ದನ್ನು ಶಾಸನ ರೂಪದಲ್ಲಿ ಕೊಡುವ ಸಾಧ್ಯತೆ ಇರುವುದು ಜನಪ್ರತಿನಿಧಿಗಳಿಗೆ ಮಾತ್ರ.

ಜನಪ್ರತಿನಿಧಿಗಳು ತಮ್ಮ ಕೈಗೆ ತಾವೇ ಬೇಡಿ ತೊಡಿಸಿಕೊಂಡು ಕೂರುವುದು ಸರಿಯಲ್ಲ; ಏಕೆಂದರೆ, ಆಗ ಸಂವಿಧಾನದಲ್ಲಿ ನಮೂದಿಸಲಾದ ಆಕಾಂಕ್ಷೆಗಳನ್ನು ಸಾಧಿಸುವ ಕರ್ತವ್ಯವನ್ನು ನಿಭಾಯಿಸಲು ಸಾಧ್ಯವಾಗದಾಗುತ್ತದೆ. ಉದಾಹರಣೆಗೆ, ಮೊದಲೇ ಉಲ್ಲೇಖಿಸಿದ ಶಿಕ್ಷಣ ಕ್ಷೇತ್ರವನ್ನು ನೋಡಬಹುದು. ಎಲ್ಲರಿಗೂ ಶಿಕ್ಷಣ ದೊರಕಿಸಿಕೊಡಬೇಕಾದ ಸರ್ಕಾರವು ಶಿಕ್ಷಣವನ್ನು ಮಾರುಕಟ್ಟೆಯ ಸರಕನ್ನಾಗಿ ಮಾರ್ಪಡಿಸಲು ಒಪ್ಪಿಗೆಯನ್ನು ನೀಡಬಹುದೆ? ಪ್ರಗತಿಗೆ ನ್ಯಾಯಾಲಯವಾಗಲಿ ಲೋಕಸಭೆಯಾಗಲಿ ಅಡ್ಡಿ ಬರಬಾರ ದೆಂಬುದು ನಾಥ್ ಪೈ ಅವರ ವಾದವಾಗಿತ್ತು. ಅವರ ನಿರ್ಣಯ ಪೂರ್ಣ ಚರ್ಚೆಗೆ ಬರದೆ ಹಾಗೆಯೇ ಉಳಿದುಹೋಯಿತು. ಸಂವಿಧಾನವನ್ನು ದೃಷ್ಟಿಯಲ್ಲಿಟ್ಟುಕೊಂಡು ಲೋಕಸಭೆ ಕಾರ್ಯಪ್ರವೃತ್ತವಾಗಬೇಕೆಂದು ಹೇಳುವಾಗ ಸಂವಿಧಾನದಲ್ಲಿ ಸೂಚಿತವಾಗಿರುವ ಗುರಿ ದೇಶದ ಗುರಿ ಎಂಬ ಇಂಗಿತ ಅಡಕವಾಗಿದೆ. ಅದನ್ನು ಸಾಧಿಸಬೇಕಾದರೆ ಹಲವಾರು ನೂತನ ಪದ್ಧತಿಗಳು ಜಾರಿಗೆ ಬರಬೇಕು ಮತ್ತು ಅವಕ್ಕೆ ಪ್ರತಿರೋಧ ಒಡ್ಡುವ ಬೇರೆ ಪದ್ಧತಿಗಳು ರದ್ದಾಗಬೇಕು. ನ್ಯಾಯಾಲಯ ಮತ್ತು ಲೋಕಸಭೆಯ ನಡುವೆ ಸಾಮರಸ್ಯ ವಿರಬೇಕಾದ್ದು ಸಂವಿಧಾನದ ಆಕಾಂಕ್ಷೆಗಳನ್ನು ಪೂರೈಸುವ ಸಲುವಾಗಿ. ಈ ಸಂಬಂಧದಲ್ಲಿ ಏನಾದರೂ ಗೊಂದಲವಿದ್ದರೆ ಅದಕ್ಕೆ ಪರಿಹಾರ ನೀಡಬೇಕಾದ ಜವಾಬ್ದಾರಿ ಜನಪ್ರತಿನಿಧಿಗಳಿಗಿದೆ. ಅದು ನ್ಯಾಯಾಲಯಕ್ಕೂ ತಿಳಿದಿದೆಯೆಂದು ನಿರೀಕ್ಷಿಸುವುದು ಸಹಜವಾಗಿದೆ.

ಜಿ. ಎನ್. ಮೋಹನ್ [signature]

---

**ಸಂವಿಧಾನದ ಅನುಚ್ಛೇದಗಳು**

೨೯. (೧) ಭಾರತದ ರಾಜ್ಯ ಪ್ರದೇಶದಲ್ಲಿ ಅಥವಾ ಯಾವುದೇ ಭಾಗದಲ್ಲಿ ವಾಸವಾಗಿರುವ ನಾಗರಿಕರು ಅಥವಾ ಯಾವುದೇ ಭಾಗವು ತನ್ನದೇ ಆದ ಭಾಷೆ, ಲಿಪಿ ಅಥವಾ ಸಂಸ್ಕೃತಿಯನ್ನು ಹೊಂದಿದೆಯೋ ಅದು ತನ್ನ ಹಕ್ಕನ್ನು ಸಂರಕ್ಷಣೆ ಮಾಡಿಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.

(೨) ರಾಜ್ಯದ ನಿರ್ವಹಣೆಯಲ್ಲಿರುವ ಅಥವ ರಾಜ್ಯದ ಧನ ಸಹಾಯವನ್ನು ಪಡೆಯುತ್ತಿರುವ ಯಾವುದೇ ಶೈಕ್ಷಣಿಕ ಸಂಸ್ಥೆಯೊ, ಮತ, ಧರ್ಮ, ಕುಲ, ವಂಶ, ಜಾತಿ, ಭಾಷೆ ಅಥವಾ ಯಾವುದೇ ಒಂದು ಕಾರಣದಿಂದ ಯಾವ ನಾಗರಿಕನಿಗೂ ಪ್ರವೇಶವನ್ನು ನಿರಾಕರಿಸಕೂಡದು.

೩೦. (೧) ಎಲ್ಲಾ ಅಲ್ಪಸಂಖ್ಯಾತರೂ, ಮತಧರ್ಮದ ಆಧಾರದಿಂದಾಗಲಿ, ಭಾಷೆಯ ಆಧಾರದಿಂದಾಗಲಿ ತಮಗೆ ಇಷ್ಟ ಬಂದಂತೆ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸಿಕೊಳ್ಳುವ ಮತ್ತು ಆಡಳಿತ ನಡೆಸಿಕೊಳ್ಳುವ ಹಕ್ಕನ್ನು ಹೊಂದಿರತಕ್ಕದ್ದು.

(೨) ಶೈಕ್ಷಣಿಕ ಸಂಸ್ಥೆಗಳಿಗೆ ರಾಜ್ಯವು ಸಹಾಯಧನ ಕೊಡುವಾಗ ಅಲ್ಪಸಂಖ್ಯಾತರೆಂದಾಗಲಿ ಅಥವಾ ಭಾಷೆಯ ಮೇಲಾಗಲಿ ಅಥವಾ ಮತಧರ್ಮದ ಮೇಲಾಗಲಿ ಅವುಗಳಿಗೆ ತಾರತಮ್ಯ ಮಾಡಕೂಡದು.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೩೦೨

## ಪತ್ರಗಳು

'ಪುಸ್ತಕ ಪ್ರಿಯ ಶೇಷಗಿರಿ ಮಾಸ್ತರರು' ಲೇಖನ ನನ್ನ ಮನಸ್ಸಿಗೆ ತುಂಬಾ ಆನಂದ ನೀಡಿತು. ಸದಾ ಟಿ.ವಿ. ಮುಂದೆ ಹಾಗೂ ಬೇಡದ ಹವ್ಯಾಸಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿರುವ ನಮ್ಮ ಶಿಕ್ಷಕ ಸಮಾಜದಲ್ಲಿ ಇಂತಹ ವ್ಯಕ್ತಿಗಳು ನಿಜಕ್ಕೂ 'ಮರುಭೂಮಿಯ ಓಯಸಿಸ್' ಇದ್ದಂತೆ. ತಾನು ಓದುವ ಹವ್ಯಾಸ ಇಟ್ಟುಕೊಂಡಿರುವುದರ ಜೊತೆಗೆ ಅಂತಹ ಓದುಗರ ಸಂತತಿಯನ್ನು ಈ ಸಮಾಜ ದಲ್ಲಿ ಉಳಿಸಲು ಸಾಧನೆ ಕೈಗೊಂಡಿರುವ ಅವರ 'ಪುಸ್ತಕ ಭಂಡಾರ'ದ ಕಾರ್ಯ ಯೋಜನೆಗೆ ಯಶಸ್ಸು ದೊರೆಯಲಿ. ಶೇಷಗಿರಿ ಮಾಸ್ತರರ ವ್ಯಕ್ತಿತ್ವಕ್ಕೆ ಈ ಲೇಖನ ಅಕ್ಷರಶಃ ಸತ್ಯ ಎಂದು ಉದ್ಗಾರ ತೆಗೆಯದೇ ಬಿಡುವುದಿಲ್ಲ, ಆದ್ದರಿಂದ ಈ ರೀತಿ ಪ್ರಕಟಿಸಿದ್ದಕ್ಕೆ ಧನ್ಯವಾದಗಳು.

*ಚೇಲನಹಳ್ಳಿ* — *ಎಸ್. ಎನ್. ಮಲ್ಲಿಕಾರ್ಜುನ*

ನವೆಂಬರ್ ತಿಂಗಳ ಮುಖಪುಟ ಅತ್ಯಾಕರ್ಷಕ. ಶೇಷಗಿರಿ ಮಾಸ್ತರರ ಪುಸ್ತಕ ಪ್ರೀತಿ ಇಂದಿನ ಯುವ ಶಿಕ್ಷಕರಿಗೆ ಆದರ್ಶ - ಅನುಕರಣೀಯ !

*ಹೂವಿನ ಹಡಗಲಿ* — *ಸುರೇಶ ಅಂಗಡಿ*

ಈ ತಿಂಗಳ ಸಂಚಿಕೆಯ ಮುಖಚಿತ್ರ ಚಿತ್ತಾಕರ್ಷಕ. ಅದರ ಬಿಂಬಗ್ರಾಹಕನ ಕಲಾ ನೈಪುಣ್ಯಕ್ಕೆ ಅಭಿನಂದನೆಗಳು.

*ಚಿಗಟೇರಿ* — *ಮುದೇನೂರು ಸಂಗಣ್ಣ*

ಡಾ|| ರಂಗರಾಜ ವನದುರ್ಗರ 'ಬಸವ ಪ್ರಜ್ಞೆ : ದಲಿತರ ಬಿಡುಗಡೆ ಮತ್ತು ಬಂಧನ' – ಪ್ರಬಂಧ ವೈಚಾರಿಕ ಮಹತ್ವದ್ದಾಗಿದೆ. ಮೇಲ್ನೋಟಕ್ಕೆ ಈ ಬಸವ ಪ್ರಜ್ಞೆ ಬಿಡುಗಡೆಯ ಹಂತ ಮುಟ್ಟುವುದಾದರೂ ಶತ-ಶತಮಾನಗಳಿಂದ ಮೈಗೂಡಿಸಿಕೊಂಡು ಬಂದ ಕೆಲವು 'ಇಸಂ'ಗಳಿಂದ 'ಬಂಧನ'ಕ್ಕೇ ಒಳಪಡುತ್ತಿರುವುದು ಸಾಮಾಜಿಕ ದುರಂತವೋ, ದಲಿತರ ದುರಾದೃಷ್ಟವೋ ಗೊತ್ತಿಲ್ಲ! ಬಸವಣ್ಣನವರ ಆಶಯ ಮೂಲದಿಂದ ಸೆಲೆಯೊಡೆದು ಜನಸಾಮಾನ್ಯರಲ್ಲಿ ಹೊಳೆಯಾಗಿ ಹರಿದಾಗ ಬಂಧನ ಬಿಡುಗಡೆಯಾದೀತು; ಜನಜಾಗೃತಿ ಕಿಂಚಿತ್ ಮೂಡೀತು, ಅಲ್ವಾ ?

*ಕಣವೆ ಬಿಳಚಿ* — *ಸಂತೇಬೆನ್ನೂರು ಫೈಜ್ನಟ್ರಾಜ್*

ವಿಶ್ವನಾಥ ಸತ್ಯನಾರಾಯಣ ಅವರ 'ಜೀವೇಚ್ಛೆ' ಕತೆ ಬಹಳ ಸಮರ್ಥವಾಗಿ ಅನುವಾದಗೊಂಡಿದೆ. ಒಂದು ಅತ್ಯುತ್ತಮ ಕಥೆ ಓದಿದ ಅನುಭವವಾಯಿತು. ಇಷ್ಟು ವಿಚಾರ ಪ್ರಚೋದಕ ಕತೆಯನ್ನು ಅತ್ಯಂತ ಕಡಿಮೆ ಶಬ್ದಗಳಲ್ಲಿ ಹೆಣೆಯಬಲ್ಲರು ಎಂಬುದು ವಿದಿತವಾಯಿತು.

ಪಿ. ಆರ್. ಬ್ರಹ್ಮಾನಂದರ ಸಂದರ್ಶನ ಲೇಖನ ಸಮಯೋಚಿತ. ಇಂದಿನ ಸಂಕ್ರಮಣ ಕಾಲದಲ್ಲಿ ಅವರ ವಿಚಾರಗಳ ಮೇಲೆ ಬೆಳಕು ಚೆಲ್ಲಿ ಪರಿಚಯ ಮಾಡಿಕೊಟ್ಟದ್ದು ಸಂತೋಷದಾಯಕ.

*ಸೇಡಂ* — *ಅಣ್ಣಾಸಾಗರ್ ಬಿ. ಆರ್.*

ನಿಮ್ಮ ಪತ್ರಿಕೆ, ಪುಟಪುಟದಲ್ಲೂ ಜ್ಞಾನಾರ್ಜನೆಯ ವೈವಿಧ್ಯತೆಯ ಮಜಲುಗಳನ್ನು ತುಂಬಿಕೊಂಡ ಸತ್ವಯುತವಾದ ಪತ್ರಿಕೆ. ಕನ್ನಡ ಲೋಕಕ್ಕೇನೆ ಹೆಮ್ಮೆಯ ಪತ್ರಿಕೆ ಅಂತಾ ನನ್ನ ಅಭಿಪ್ರಾಯ. ಶ್ರೀ ಬಿ. ವಿ. ವೀರಭದ್ರಪ್ಪನವರ 'ಕೀರ್ತಿಶನಿ' ಬಹಳ ಮೆಚ್ಚುಗೆಯಾಯಿತು. ನಿಷ್ಕಾಮಕರ್ಮ ಯೋಗಿಗಳಾದ ಭಾರತರತ್ನ ಲಾಲ್ ಬಹದ್ದೂರ ಶಾಸ್ತ್ರಿ ಹಾಗೂ ಸರ್ ಎಂ. ವಿಶ್ವೇಶ್ವರಯ್ಯನವರನ್ನು ಸ್ಮರಿಸಿದ್ದು ಉಲ್ಲೇಖಾರ್ಹ. ಶ್ರೀ. ಭೋಜರಾಜ ಸೊಪ್ಪಿಮಠರ 'ಆದರ್ಶ', ಡಾ|| ಬಿ. ಎಸ್. ಶೈಲಜಾರವರ 'ಬರ-ನೆಲದಿಂದ ಮುಗಿಲಿಗೆ' ಹಾಗೂ 'ಕಲಾವಿದರ ನಿಲುವೇನು' ಲೇಖನಗಳು ವೈಚಾರಿಕ ಓದುಗರಿಗೆ ಹಿಡಿಸುತ್ತವೆ.

*ಭಾನಾಪುರ* — *ಶಂಕರ ಕೆ. ಪತ್ತಾರ*

ಶ್ರೀ. ಅರವಿಂದ ಚೊಕ್ಕಾಡಿಯವರ 'ಹಿಂದುತ್ವದ ಹಿಂದೆ' ಒಂದು ಅತ್ಯುತ್ತಮ ವೈಚಾರಿಕ ಲೇಖನ. ಹಿಂದುತ್ವದ ಪರಿಕಲ್ಪನೆಯಲ್ಲಿರುವ ಓರೆಕೋರೆಗಳನ್ನು ಲೇಖಕರು ತಾರ್ಕಿಕವಾಗಿಯೂ, ವೈಜ್ಞಾನಿಕವಾಗಿಯೂ ತಮ್ಮ ಹರಿತವಾದ ಶೈಲಿಯಿಂದ, ಪ್ರಾಮಾಣಿಕ ದಿಟ್ಟತನದಿಂದ ವಿಮರ್ಶಿಸಿದ್ದಾರೆ. ಇಂತಹ ವಿಚಾರಪೂರ್ಣವೂ, ಜನರ ಮನಸ್ಸನ್ನು ಪರಿಮಾರ್ಜನಗೊಳಿಸುವಂತಹವೂ ಆದ ಹೊಸ ಹೊಸ ಬರಹಗಳಿಂದಾಗಿಯೇ 'ಹೊಸತು' ಮತ್ತೆ ಮತ್ತೆ ಹೊಸತೇ ಎನಿಸುತ್ತದೆ.

*ಗಾಳಿಬೀಡು* — *ಮಾರುತಿ ದಾಸಣ್ಣವರ*




### ಅವ್ವಾ ಬುವನೇಸ್ವರಿ....!

ಎಲ್ರೂ, ಒಂದೇ ಸಮಕ್ಕಿರಕ್ಕಾಯ್ತದ ? ಬೆಂಗ್ಳೂರ್ ಕನ್ನಡ, ಮಂಗ್ಳೂರ್ ಕನ್ನಡ, ಬೀದರ್ ಕನ್ನಡ, ಅಳ್ಳೀ ಕನ್ನಡ ಅಂತ ನೀನೇ ಬೇದಬಾವ ತೋರಿಸಿದ್ರೆ ನಮ್ಮಂತೆ ಸಾದಾರ್ನ ಜನ ಎಲ್ಲಿ ತಲೆ ಚಚ್ಕಳಾನ ? ಒಂದೊಂದ್ ಕಡೆ ಜನ ಒಂದೊಂದ್ ತರಾ ಮಾತಾಡ್ತಾರವ್ವ. ನೀನು ನವೆಂಬರ್ ತಿಂಗ್ಳಲ್ಲಿ ಮೆರವಣಿಗೆ ಮಾಡಿಸ್ಕಳ್ಳೋ ಬುವನೇಸ್ವರಿಯೋ, ಕೈಯಲ್ಲಿ ಬೆತ್ತ ಇಡ್ಕಂಡು ಗಲಾಟೆ ಮಾಡೋ ಐಕಳ್ಳೆಲ್ಲ ಗದ್ದರ್ಸೋ ಕನ್ನಡ ಮೇಡಮ್ಮೋ ಅಂತ ನಂಗೆ ಡೌಟಾಯ್ತದೆ ನೋಡವ್ವ ! ಅಳ್ಳೀಲಿ ನಾವು ಎಂಗ್ ಬಾಳ್ ಮಾಡ್ತೀವಿ ಅಂತ ನಿಂಗ್ಯೇ ಗೊತ್ತಲ್ಲವ್ವ. ಎದ್ದೇಟ್ಗೆ – ವಲ, ಗದ್ದೆ ತ್ವಾಟಾ, ತುಡ್ಕೆ, ದನ, ಕುರಿ ಅಂತ ಉಸ್ರಾಡೂಕೂ ಟೇಮಿರುದಿಲ್ಲ. ನಿನ್ ಉಚ್ಚಾರ ಎಲ್ ಕಲಿಯಾಣ, ಯಾಕರ್ನ ಎಲ್ ಕಲಿಯಾಣ ! ಕನ್ನಡ ಇಂಗ್ಲಿಷು ಎರಡ್ನೂ ಬೆರ್ಸಿ ಮಾತಾಡ್ತಾರಲ್ಲ ಅವ್ರೊಂದ್ಗೆ ನಿನ್ ತಕ್ರಾರು ಏನೂ ಇಲ್ಲಾ ಅನ್ನುವಂಗದೆ. ಐ ತಗೀ ನನ್ನವ್ವ ನಾನೊಪ್ಪಕಿಲ್ಲ....

*ಗೊಂದಲಪುರ* — *ಬೀರಣ್ಣ*

ಶ್ರೀಮತಿ ಶರ್ಮಿಲಾ ಅವರು ನಮ್ಮ ಭಾಷೆಯನ್ನು ಎಷ್ಟೋ ಮಂದಿ ಸರಿಯಾಗಿ ಬಳಸುತ್ತಿಲ್ಲವೆಂದು ದೂರುತ್ತಾ ಕೊಟ್ಟಿರುವ ಒಂದು ಉದಾಹರಣೆ ಅವರ ಪಾಂಡಿತ್ಯಕ್ಕೆ ಕನ್ನಡಿ ಹಿಡಿದಿದೆ : 'ಶ್ರುತಿ' ಎಂಬುದನ್ನು 'ಶೃತಿ' ಎಂದು ಬರೆಯಬೇಕೆಂಬ ಅವರ ಆಗ್ರಹ ಸರಿಯಲ್ಲ. 'ವೈದ್ಯರೇ, ನಿಮ್ಮ ಆರೋಗ್ಯ ಮೊದಲು ಕಾಪಾಡಿಕೊಳ್ಳಿ' ಎಂಬ ಮಾತು ನೆನಪಿಗೆ ಬರುತ್ತಿದೆ. ಸಂಪಾದಕರು ಬೇಕೆಂದೇ ಅದನ್ನು ತಿದ್ದದೆ ಬಿಟ್ಟರೆಂದು ಊಹಿಸುತ್ತೇನೆ.

*ಬೆಂಗಳೂರು* — *ನಿಶಿತಾ*

ಬಿ. ಟಿ. ಹತ್ತಿಯ ರಾಕ್ಷಸ ಕೃತ್ಯಗಳ ಕುರಿತಾಗಿ ನಟರಾಜರು ಬರೆದದ್ದನ್ನು ಓದಿ ಬಹುರಾಷ್ಟ್ರೀಯ ಕಂಪೆನಿಗಳ ಆಕ್ಟೋಪಸ್ ಹಿಡಿತದ ಅರಿವು ತಿಳಿಯಿತು. ನಮ್ಮೂರಿನ ಅನೇಕ ರೈತರಿಗೆ, ಯುವಕರಿಗೆ ಬಿ. ಟಿ. ಹತ್ತಿ ಲೇಖನ ಓದಲು ಕೊಟ್ಟೆ, ಎಂದೂ ಹೆಚ್ಚಾಗಿ ಓದದ ಅವರು ಲೇಖನ ಮೆಚ್ಚಿ ಜೊತೆಗೆ ಪತ್ರಿಕೆ ವಿನ್ಯಾಸದ ಕುರಿತಾಗಿ ಮೆಚ್ಚುಗೆ ಮಾತಾಡಿದರು. ಒಳ್ಳೆಯ ಪ್ರಯತ್ನಕ್ಕೆ ನನ್ನದೆಂದೂ ಶುಭ ಹಾರೈಕೆಯೇ.

*ಹಗರಿಬೊಮ್ಮನಹಳ್ಳಿ* — *ಪತ್ರೇಶ್ ಬಸರಕೋಡು*

ಇಂದು ಕ್ರಿಕೆಟ್‌ನಿಂದಾಗಿ ನಮ್ಮಂಥ ವಿದ್ಯಾರ್ಥಿಗಳು ಮತ್ತು ಯುವಕರು ತಮ್ಮ ವಿದ್ಯಾಭ್ಯಾಸ ಮರೆತು ಅದರಲ್ಲಿ ತೊಡಗಿಸಿಕೊಳ್ಳುವುದರಿಂದ ಮನೆಯಲ್ಲಿ ಅಶಾಂತಿ ವಾತಾವರಣ ಸೃಷ್ಟಿಸುತ್ತಿದ್ದಾರೆ. ಪರೀಕ್ಷಾ ಸಮಯದಲ್ಲಿ ವಿಶ್ವಕಪ್ ಅಥವಾ ಇನ್ನಾವುದೇ ಕಪ್ ಇರುವುದರಿಂದಾಗಿ ಓದಿನ ಕಡೆ ಗಮನ ನೀಡದೆ ಸದಾ ಅದರ ಗುಂಗಿನಲ್ಲೇ ಇರುವುದರಿಂದ ತಮ್ಮ ದಾರಿಯಲ್ಲಿ ಎಡುವುತ್ತಿದ್ದಾರೆ ಹಾಗೂ ಓದುವ ಹವ್ಯಾಸವು ಈ ಕ್ರೀಡೆ ಕಡಿಮೆ ಮಾಡುತ್ತಿದೆ ಎಂದು ಹೇಳಬಹುದು. ಮಿನಿ ವಿಶ್ವಕಪ್‌ನ ಸಮಯದಲ್ಲಿ ಎಲ್ಲಾ ಪತ್ರಿಕೆಗಳಲ್ಲಿ ಲೇಖನಗಳು ಮೂಡಿಬಂದವು. ಆದರೆ ಮಿನಿ ವಿಶ್ವಕಪ್ ಕಾವು ಕರಗಿದ ನಂತರ ಬಂದ ಡಾ|| ಬಿ. ಆರ್. ಮಂಜುನಾಥ್ ಅವರ ಲೇಖನ ಎಲ್ಲಾ ಪತ್ರಿಕೆಗಳ ಲೇಖನಗಳಿಗೆ ಉಪಸಂಹಾರದಂತಿತ್ತು.

*ಸಿಂಧನೂರು* — *ಜಾನೇಕಲ್ ಚನ್ನಬಸವ ಸಿ. ಎಸ್.*

### ನಿಟ್ಟೂರರ ಸಂದೇಶ

ಶತಾಯುಷಿ ಶ್ರೀ. ನಿಟ್ಟೂರು ಶ್ರೀನಿವಾಸರಾಯರು ನೀಡಿದ ಅರ್ಥವತ್ತಾದ ಸಂದೇಶವನ್ನು ನಮ್ಮ ಯುವಕರು ಗಮನಿಸುತ್ತಾರೆಂದು ಆಶಿಸುತ್ತೇನೆ. ಅವರ ಸ್ಫೂರ್ತಿ, ಗಾಢ ಆಶಾವಾದ ಮತ್ತು ವಸ್ತುನಿಷ್ಠತೆ ಅನುಕರಣೀಯವಾಗಿದೆ. ಹಿಂದಿನ ತಲೆಮಾರಿನವರು ಸಾಮಾನ್ಯವಾಗಿ ಎಲ್ಲಾ ಕುಸಿಯುತ್ತಿದೆ ಎನ್ನುತ್ತಾರೆ. ನಿಟ್ಟೂರರು ಅದಕ್ಕೆ ಭಿನ್ನವಾಗಿ ಸಕಾರಾತ್ಮಕ ಧೋರಣೆ ತಾಳುವುದು ಆರೋಗ್ಯಕರವಾಗಿದೆ.

*ಶಿವಮೊಗ್ಗ* — *ಎಸ್. ಪ್ರಕಾಶ್*

■ ನಾ. ದಿವಾಕರ

# ಕಾವೇರಿ ವಿವಾದ ಒಂದು ವಸ್ತುನಿಷ್ಠ ವಿಶ್ಲೇಷಣೆ

**ಕಾ**ವೇರಿ ನೀರಿನ ಹಂಚಿಕೆಯ ಸಂಬಂಧದಲ್ಲಿ ಕರ್ನಾಟಕದಲ್ಲಿ ಜರುಗಿದ ವ್ಯಾಪಕವಾದ ಜನಾಂದೋಲನ ಅಭೂತಪೂರ್ವ. ಜಾತಿ, ಮತ, ಭಾಷೆ, ಧರ್ಮ, ಅಂತಸ್ತು – ಈ ಎಲ್ಲಾ ಎಲ್ಲೆಗಳನ್ನು ಮೀರಿ ರಾಜ್ಯದ ಜನಸಮುದಾಯ ಈ ಹೋರಾಟದಲ್ಲಿ ಭಾಗಿಯಾಗಿದ್ದಿತು. ಒಂದೆಡೆ ಕಾವೇರಿ ಕರ್ನಾಟಕದ ಜನತೆಗೆ ಭಾವನಾತ್ಮಕ ಅಂಶವಾದರೆ ಇನ್ನೊಂದೆಡೆ ಲಕ್ಷಾಂತರ ರೈತರಿಗೆ ಅದು ಜೀವನದಿ. ಹಾಗಾಗಿಯೇ ಕರ್ನಾಟಕದ ಜನಸಮುದಾಯ ಈ ಹೋರಾಟಕ್ಕೆ ಭಾವನಾತ್ಮಕವಾಗಿ ಸ್ಪಂದಿಸುತ್ತಿದ್ದು ಒಂದು ನಿಜವಾದ ಜನಾಂದೋಲನವಾಗಿ ರೂಪುಗೊಂಡಿತು. ಬಹುಶಃ ಗೋಕಾಕ್ ಚಳುವಳಿಯ ನಂತರದಲ್ಲಿ ಈ ಮಟ್ಟದ ಒಂದು ಹೋರಾಟ ರಾಜ್ಯದಲ್ಲಿ ನಡೆದೇ ಇಲ್ಲವೆಂದು ಹೇಳಬಹುದು. ಗುರುಸ್ವಾಮಿ ಎಂಬ ರೈತನ ಮರಣಾನಂತರ ಚಳುವಳಿಯ ಕಾವು ಹೆಚ್ಚಾಗತೊಡಗಿತು. ಒಂದು ರೀತಿಯಲ್ಲಿ ಸಮೂಹ ಸನ್ನಿ ಸೃಷ್ಟಿಸಿರುವ ಈ ಹೋರಾಟದ ವಿಶ್ಲೇಷಣೆಯಲ್ಲಿ ಪರ-ವಿರೋಧಿ ನಿಲುವುಗಳಿಗಿಂತಲೂ ಭಾವುಕತೆಗೆ ಹೆಚ್ಚು ಪ್ರಾಶಸ್ತ್ಯವಿದ್ದಂತಿದೆ. ''ಕಾವೇರಿ ನಮ್ಮದು'', ''ರಕ್ತ ಕೊಟ್ಟರೂ ಕಾವೇರಿ ಕೊಡೆವು'' ಎಂಬ ಘೋಷಣೆಗಳು, ಉರುಳುಸೇವೆ, ಆತ್ಮಾಹುತಿ ಮುಂತಾದ ಪ್ರಕರಣಗಳು ಈ ಭಾವನೆಗಳ ಸಂಕೇತಗಳಷ್ಟೆ. ಸಮಸ್ಯೆ ಸದ್ಯಕ್ಕೆ ಬಗೆಹರಿದರೂ ಭಾವನೆಗಳು ಬದಲಾಗದ ಪರಿಸ್ಥಿತಿ ಇಂದು ಕಂಡುಬರುತ್ತಿದೆ. ಹಾಗಾಗಿ ಪ್ರಸ್ತುತ ಸಂಘರ್ಷವನ್ನು ವಿಶ್ಲೇಷಿಸುವ ಮುನ್ನ ಇತಿಹಾಸದೊಳಗೆ ಒಮ್ಮೆ ಇಣುಕಿ ನೋಡುವುದು ಅವಶ್ಯಕ.

**ಕಾವೇರಿ ವಿವಾದದ ಇತಿಹಾಸ**

ಒಂದು ದೃಷ್ಟಿಯಲ್ಲಿ ಕಾವೇರಿ ವಿವಾದವೇ ಒಂದು ಸಂಕೀರ್ಣವಾದ ಸಮಸ್ಯೆ ಎಂದು ಹೇಳಬಹುದು. ಕಾವೇರಿ ವಿವಾದ ಕಳೆದ ೮೦ ವರ್ಷಗಳಿಂದಲೂ ಪರಿಹಾರವಾಗದೆ ಉಳಿದಿದೆ. ಬ್ರಿಟಿಷರು ಬಿಟ್ಟು ಹೋದ ಅನೇಕ ಗಂಭೀರ ಸಮಸ್ಯೆಗಳಲ್ಲಿ ಇದೂ ಒಂದೆಂದು ಹೇಳಬಹುದು. ಈ ವಿವಾದದ ಇತಿಹಾಸದೊಳಗೆ ಇಣುಕಿ ನೋಡಿದಾಗ ಹಲವಾರು ನ್ಯೂನತೆಗಳು, ಪ್ರಮಾದಗಳು, ತಪ್ಪು-ಒಪ್ಪುಗಳು, ಬಿಗಿ ನಿಲುವುಗಳು ಕಂಡುಬರುವುವಲ್ಲದೆ ಹಲವಾರು ಕಂಡರಿಯದ ವಿವರಗಳೂ ದೊರೆಯುತ್ತವೆ. ಪ್ರಸ್ತುತ ಸನ್ನಿವೇಶದಲ್ಲಿ ನಾವು ಗಮನಿಸಬೇಕಾದ ಒಂದಂಶವೆಂದರೆ ಇದೇ ಸೆಪ್ಟೆಂಬರ್ ೩ರಂದು ಸರ್ವೋಚ್ಚ ನ್ಯಾಯಾಲಯದ ಮುಂದಿದ್ದ ವಿಷಯ ಕಾವೇರಿ ಜಲವಿವಾದ ನ್ಯಾಯ ಮಂಡಳಿ, ಅದರ ಅವಶ್ಯಕತೆ ಈ ಬಗ್ಗೆ ಅಲ್ಲ. ಬದಲಾಗಿ ೧೯೯೧ರಲ್ಲಿ ಈ ನ್ಯಾಯ ಮಂಡಳಿ ನೀಡಿದ್ದ ಮಧ್ಯಂತರ ಆದೇಶದ ಪಾಲನೆಗಾಗಿ ತಮಿಳುನಾಡು ಸರ್ಕಾರ ನ್ಯಾಯಾಲಯದ ಮೊರೆ ಹೊಕ್ಕಿತ್ತು. ಹಾಗಾಗಿ ಇಂದು ನ್ಯಾಯಾಲಯ ಏನೇ ತೀರ್ಪು ನೀಡಿದರೂ ಅದು ಸಮಸ್ಯೆಯ ಅಂತಿಮ ಪರಿಹಾರವಾಗುವುದಿಲ್ಲ.

ಕಾವೇರಿ ಕರ್ನಾಟಕದ ಜೀವನದಿ ಎಂದು ಪ್ರಸಿದ್ಧಿಯಾಗಲು ಹಲವಾರು ಐತಿಹಾಸಿಕ ಕಾರಣಗಳಿವೆ. ಗಂಗೆಯಿಂದ ಕಾವೇರಿಯವರೆಗೆ ಎಲ್ಲಾ ನದಿಗಳಿಗೂ ಒಂದು ದೈವ ಸ್ವರೂಪ ನೀಡಿ ಅದನ್ನು ಸಂಸ್ಕೃತಿಯಲ್ಲಿ ಸಮೀಕರಿಸುವ ಒಂದು ಸಂಪ್ರದಾಯ ಭಾರತದಲ್ಲಿ ಪರಂಪರಾನುಗತವಾಗಿ ಬಂದಿದೆ. ಈ ಸಂಪ್ರದಾಯದ ತಪ್ಪು-ಒಪ್ಪು, ಒಳಿತು-ಕೆಡುಕುಗಳಿಗಿಂತಲೂ ಜನಸಾಮಾನ್ಯರಲ್ಲಿ ಈ ಪರಂಪರೆ ಆಳವಾಗಿ ಬೇರೂರಿರುವುದು ಗಮನಿಸಬೇಕಾದ ಅಂಶ. ಹಾಗಾಗಿಯೇ ಈ ನದಿಗಳು ಜನತೆಯ ದಿನನಿತ್ಯ ಜೀವನದಲ್ಲಿ ಹಾಸುಹೊಕ್ಕಾಗಿರುತ್ತವೆ. ಕೆಲವರು ಕಾವೇರಿಗೆ ದೈವಿಕ ಸ್ವರೂಪ ನೀಡಿದರೆ, ಇನ್ನು ಕೆಲವರು ಜನಪರ ದೃಷ್ಟಿಯಿಂದ ಕಾವೇರಿಗೆ ಅಪಾರ ಮಹತ್ವ ನೀಡುತ್ತಾರೆ. ಆದ್ದರಿಂದಲೇ ಕಲೆ-ಸಾಹಿತ್ಯ-ಕಾವ್ಯ ನಾಟಕ ಸಿನಿಮಾ ಎಲ್ಲಾ ಕ್ಷೇತ್ರಗಳಲ್ಲೂ ಕಾವೇರಿಯ ಛಾಪು ಕಾಣಬಹುದು. ಈಗ ಈ ವಿವಾದದಿಂದ ಕಾವೇರಿ ರಾಜಕೀಯ ಅಸ್ತ್ರವಾಗಿಯೂ ಪರಿವರ್ತಿತಗೊಂಡಿರುವುದು ದುರದೃಷ್ಟಕರ.

ಕೊಡಗಿನ ಸುಂದರ ತಾಣದಲ್ಲಿ ಉಗಮವಾಗಿ, ಕರ್ನಾಟಕ - ತಮಿಳುನಾಡು - ಕೇರಳ - ಪಾಂಡಿಚೇರಿ ರಾಜ್ಯಗಳಲ್ಲಿ ಹರಿಯುವ ಕಾವೇರಿ, ಹೇಮಾವತಿ-ಕಬಿನಿ-ಭವಾನಿ-ಅಮರಾವತಿ ಮುಂತಾದ ಉಪನದಿಗಳನ್ನು ತನ್ನಲ್ಲಿ ಲೀನವಾಗಿಸಿಕೊಂಡು ಈ ನಾಲ್ಕು ರಾಜ್ಯಗಳಿಗೆ ಹರಿಯುತ್ತದೆ. ಪ್ರಸ್ತುತ ವಿವಾದಾತ್ಮಕ ಸನ್ನಿವೇಶದ ದೃಷ್ಟಿಯಿಂದ ನೋಡಿದರೆ, ಕಾವೇರಿ ನದಿ ನೀರಿನ ಹಂಚಿಕೆಯ ಸಮಸ್ಯೆ ೧೯ನೇ ಶತಮಾನದಿಂದಲೂ ಕಂಡುಬರುತ್ತಿದೆ. ೧೮೯೨ರಲ್ಲಿಯೇ ಅಂದಿನ ಮದ್ರಾಸ್ ಪ್ರಾಂತ್ಯ ಹಾಗೂ ಮೈಸೂರು ಮಹಾರಾಜರ ನಡುವಿನ ದೀರ್ಘಕಾಲದ ಮಾತುಕತೆಗಳು ಯಾವುದೇ ಫಲ ನೀಡಲಿಲ್ಲವಾಗಿ ೧೯೨೪ರವರೆವಿಗೂ ಸಮಸ್ಯೆ ಹಾಗೆಯೇ ಉಳಿಯಿತು. ೧೯೨೪ರಲ್ಲಿ ಬ್ರಿಟಿಷರ ಆಳ್ವಿಕೆಯಲ್ಲಿದ್ದ ಮದ್ರಾಸ್ ಪ್ರಾಂತ್ಯ-ಮೈಸೂರು ರಾಜ್ಯಗಳು ಇಂದು ಬೇರೇ ಸ್ವರೂಪವನ್ನು ಹೊಂದಿದ್ದರೂ ಎರಡೂ ರಾಜ್ಯಗಳು ವಿವಾದದಲ್ಲಿ ಭಾಗಿಯಾಗಿದ್ದುದು ಚಾರಿತ್ರಿಕ ಸತ್ಯ. ಆದರೂ ೧೯೨೪ರ ಆ ಬ್ರಿಟಿಷ್ ಮಧ್ಯಸ್ಥಿಕೆಯ ಒಪ್ಪಂದ ಇಂದಿಗೂ ಪ್ರಸ್ತುತವೇ ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ಈ ಪ್ರಶ್ನೆ ಇಂದಿರುವ ಪರಿಸ್ಥಿತಿಯಲ್ಲಿ ಅಪ್ರಸ್ತುತವೆನಿಸುತ್ತದೆ. ಏಕೆಂದರೆ ಕನಿಷ್ಠ ಕಳೆದ ಮೂರು ದಶಕಗಳಿಂದ ಕರ್ನಾಟಕ - ತಮಿಳುನಾಡು ರಾಜ್ಯಗಳ ನಡುವೆ ಈ ವಿವಾದ ಪರಿಹಾರ ಕಾಣದೆಯೇ ಮುಂದುವರಿಯುತ್ತಿದೆ. ಈಗ ಕೇರಳ, ಪಾಂಡಿಚೇರಿಗಳೂ ಈ ವಿವಾದಕ್ಕೆ ಸಂಬಂಧಪಟ್ಟ ರಾಜ್ಯಗಳಾಗಿವೆ.

೭೦ರ ದಶಕದ ಆರಂಭದಲ್ಲಿಯೇ ಈ ಎರಡೂ ರಾಜ್ಯಗಳ ನಡುವೆ ಕಾವೇರಿ ನದಿ ನೀರಿನ ಹಂಚಿಕೆಯ ಬಗ್ಗೆ ಮಾತುಕತೆಗಳು ಆರಂಭಗೊಂಡವಾದರೂ, ಯಾವ ಸಂಧಾನ ಯತ್ನಗಳು ಸಫಲವಾಗಲಿಲ್ಲ. ೧೯೭೨ರಲ್ಲಿ ಸತ್ಯಶೋಧನಾ ವರದಿಯೊಂದು ಕೇಂದ್ರ ಸರ್ಕಾರಕ್ಕೆ ನೀಡಲಾಗಿ, ೧೯೭೬ರಲ್ಲಿ ಕೇಂದ್ರ ಒಂದು ಒಪ್ಪಂದ ಮಾಡಿಕೊಂಡಿತು. ಈ ಒಂಪ್ಪಂದದನ್ವಯ ಕಾವೇರಿ ನದಿಯಿಂದ ೬೭೧ ಟಿಎಂಸಿ ಅಡಿ ನೀರನ್ನು ನಾಲ್ಕು ರಾಜ್ಯಗಳು ಉಪಯೋಗಿಸಬಹುದಾಗಿತ್ತು. ಅದರಲ್ಲಿ ತಮಿಳುನಾಡು ೪೮೯, ಕರ್ನಾಟಕ ೧೭೭, ಕೇರಳ ೫ ಟಿಎಂಸಿ ಅಡಿ ನೀರನ್ನು ಉಪಯೋಗಿಸಬಹುದಿತ್ತು. ಇದರೊಂದಿಗೆ ನಂತರದ

೧೫ ವರ್ಷಗಳಲ್ಲಿ ತಮಿಳುನಾಡು ೧೦೦, ಕರ್ನಾಟಕ ೨೫ ಟಿಎಂಸಿ ಅಡಿಯಷ್ಟು ನೀರನ್ನು ಉಳಿತಾಯ ಮಾಡಬೇಕಾಗಿತ್ತು. ಈ ಉಳಿತಾಯವಾದ ನೀರಿನಲ್ಲಿ ತಮಿಳುನಾಡು ೪, ಕರ್ನಾಟಕ ೮೭, ಕೇರಳ ೩೪, ಟಿಎಂಸಿ ಅಡಿಯಷ್ಟು ನೀರನ್ನು ಹಂಚಿಕೊಳ್ಳಬೇಕಾಗಿತ್ತು. ಈ ಒಪ್ಪಂದವನ್ನು ಸಂಸತ್ತಿನಲ್ಲಿಯೂ ಮಂಡಿಸಲಾಯಿತು. ಆದರೆ ಈ ಒಪ್ಪಂದದ ಅವಧಿಯಲ್ಲಿ ತಮಿಳುನಾಡು ರಾಷ್ಟ್ರಪತಿ ಆಳ್ವಿಕೆಯಲ್ಲಿದ್ದುದರಿಂದ, ಆನಂತರ ಅಧಿಕಾರಕ್ಕೆ ಬಂದ ಅಲ್ಲಿನ ಸರ್ಕಾರ ಈ ಒಪ್ಪಂದವನ್ನು ಸಾರಾಸಗಟಾಗಿ ತಿರಸ್ಕರಿಸಿತು. ನಂತರದ ದಿನಗಳಲ್ಲಿ ಈ ಸಮಸ್ಯೆಯ ಪರಿಹಾರಕ್ಕಾಗಿ ಹಲವಾರು ಪ್ರಯತ್ನಗಳು ನಡೆದವು. ಎರಡೂ ರಾಜ್ಯದ ಮುಖ್ಯಮಂತ್ರಿಗಳು ಅನೇಕಬಾರಿ ಚರ್ಚೆ ನಡೆಸಿದರು. ಆದರೆ ಯಾವುದೇ ಸಮಾಧಾನಕರ ಪರಿಹಾರ ಕಂಡುಬರಲಿಲ್ಲ.

೧೯೮೬ರಲ್ಲಿ ತಮಿಳುನಾಡು ಸರ್ಕಾರವು ೧೯೫೬ರ 'ಅಂತರ ರಾಜ್ಯ ನದಿನೀರಿನ ವಿವಾದ ಕಾಯ್ದೆಯ' ಅಡಿಯಲ್ಲಿ ಒಂದು ನ್ಯಾಯಮಂಡಳಿಯನ್ನು ಸ್ಥಾಪಿಸುವಂತೆ ಆಗ್ರಹಿಸಿದರೂ ಕೇಂದ್ರ ಸರ್ಕಾರ ಈ ಮನವಿಯನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಏತನ್ಮಧ್ಯೆ ತಮಿಳುನಾಡು ಸರ್ಕಾರ ಕಾವೇರಿ ನೀರನ್ನು, ನೀರಾವರಿಗಾಗಿ ತಮಿಳುನಾಡಿಗೆ ಕಡ್ಡಾಯವಾಗಿ ಬಿಡುವಂತೆ ಕರ್ನಾಟಕ ರಾಜ್ಯವನ್ನು ಒತ್ತಾಯಿಸಲು ಸರ್ವೋಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿತು. ಆದರೆ ಸಂಧಾನ ಕಾರ್ಯಗಳ ವೈಫಲ್ಯದ ಹಿನ್ನೆಲೆಯಲ್ಲಿ ಸಮಸ್ಯೆಯ ಶೀಘ್ರ ಪರಿಹಾರಕ್ಕಾಗಿ ಕಾವೇರಿ ಜಲ ನ್ಯಾಯಮಂಡಳಿಯನ್ನು ಸ್ಥಾಪಿಸುವಂತೆ ನ್ಯಾಯಾಲಯವು ಕೇಂದ್ರ ಸರಕಾರಕ್ಕೆ ಆದೇಶ ನೀಡಿತು. ಈ ಆದೇಶದಂತೆ ಭಾರತ ಸರ್ಕಾರವು ೧೯೯೦ರ ಜೂನ್ ೨ರಂದು ನ್ಯಾಯಮಂಡಳಿಯನ್ನು ಸ್ಥಾಪಿಸಿತು. ಈ ಹನ್ನೆರಡು ವರ್ಷಗಳ ಅವಧಿಯಲ್ಲಿ ಸಮಸ್ಯೆಯ ಪರಿಹಾರಕ್ಕಾಗಿ ಸಾಕಷ್ಟು ಶ್ರಮಿಸಿರುವ ನ್ಯಾಯಮಂಡಳಿ ಕನಿಷ್ಠ ಇನ್ನು ಒಂದು ವರ್ಷದೊಳಗಾದರೂ ತನ್ನ ಅಂತಿಮ ತೀರ್ಮಾನ ನೀಡಬಹುದೆಂದು ಆಶಿಸಲಾಗುತ್ತಿದೆ. ಭಾರತೀಯ ಒಕ್ಕೂಟ ವ್ಯವಸ್ಥೆಯ ಒಂದು ಉತ್ತಮ ಅಂಗವಾಗಿರುವ ಅಂತರರಾಜ್ಯ ಜಲವಿವಾದ ಕಾಯ್ದೆ ಈ ರೀತಿಯ ನದಿ ನೀರಿನ ವಿವಾದಗಳಲ್ಲಿ ಕೇಂದ್ರ ಸರ್ಕಾರ ಮಧ್ಯಸ್ಥಿಕೆ ವಹಿಸುವ ಅವಕಾಶ ನೀಡುತ್ತದೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಈ ಕಾರ್ಯತಂತ್ರ ಅಷ್ಟಾಗಿ ಸಫಲವಾಗುತ್ತಿಲ್ಲ. ಕಾವೇರಿ ವಿವಾದದ ವಿಷಯದಲ್ಲಿಯೇ ಇದು ಸಂಪೂರ್ಣ ವಿಫಲವಾಗಿದೆ.

### ಕಾವೇರಿ ವಿವಾದದ ಸ್ವರೂಪ

ಈ ಮೊದಲೇ ಹೇಳಿರುವಂತೆ, ಕಾವೇರಿ ವಿವಾದದ ಪ್ರಮುಖ ಗಣನೀಯ ಅಂಶವೆಂದರೆ ಕಾವೇರಿ ನದಿ ನೀರಿನ ಹಂಚಿಕೆಯಲ್ಲಿ, ಮೇಲ್‌ತೊರೆಯ ರಾಜ್ಯವಾದ ಕರ್ನಾಟಕ ಹಾಗೂ ಕೆಳತೊರೆಯ ರಾಜ್ಯವಾದ ತಮಿಳುನಾಡು ನಡುವೆ ನಡೆದುಬಂದಿರುವ ಐತಿಹಾಸಿಕ ಸಂಘರ್ಷ. ಕುತೂಹಲಕಾರಿ ಅಂಶವೆಂದರೆ, ಕಾವೇರಿ ನದಿಯ ಉಗಮ ಕರ್ನಾಟಕದಲ್ಲಿ ಇದ್ದರೂ ನದಿಯ ಹೆಚ್ಚಿನ ಉಪಯೋಗ ಪಡೆದಿರುವುದು ತಮಿಳುನಾಡು. ಬ್ರಿಟಿಷರ ಆಳ್ವಿಕೆಯಲ್ಲಿ ಮದ್ರಾಸ್ ಪ್ರಾಂತ್ಯ ಹೊಂದಿದ್ದ ಪ್ರಾಮುಖ್ಯತೆ ಬಹುಶಃ ಇದಕ್ಕೆ ಕಾರಣವಿರಬಹುದು. ಆದರೆ ಹಲವು ದಶಕಗಳ ಹಿಂದೆಯೇ ತಮಿಳುನಾಡು ಹೆಚ್ಚು ಹೆಚ್ಚು ಭೂಮಿಯನ್ನು ನೀರಾವರಿಗೊಳಪಡಿಸಿರುವುದು ಕಂಡುಬರುತ್ತದೆ. ಈ ನಿಟ್ಟಿನಲ್ಲಿ ಕರ್ನಾಟಕದ ಸಾಧನೆ ಮಂದಗತಿಯಲ್ಲಿ ಸಾಗಿದೆಯೆಂದೇ ಹೇಳಬಹುದು. ಆದರೂ ಇತ್ತೀಚಿನ ವರ್ಷಗಳಲ್ಲಿ ಕರ್ನಾಟಕದಲ್ಲೂ ನೀರಾವರಿ ಪ್ರದೇಶ ಗಣನೀಯವಾಗಿ ಅಭಿವೃದ್ಧಿಯನ್ನು ಕಂಡಿದೆ. ಹಾಗಾಗಿ ತನ್ನ ರಾಜ್ಯದಲ್ಲಿ ಉಗಮವಾಗುವ ನದಿಯ ನೀರಿನ ವಿಷಯದಲ್ಲಿ ತನ್ನದೇ ಆದ ಹಕ್ಕನ್ನು ಕರ್ನಾಟಕ ಪ್ರತಿನಿಧಿಸುತ್ತದೆ. ಈಗ ಕೇರಳ, ಪಾಂಡಿಚೆರಿ ಸಹ ಈ ವಿವಾದದಲ್ಲಿ ಭಾಗಿಯಾಗಿರುವುದರಿಂದ ನೀರಿನ ಹಂಚಿಕೆಯಲ್ಲಿ ನಾಲ್ಕೂ ರಾಜ್ಯಗಳಿಗೂ ನ್ಯಾಯ ಒದಗಿಸಬೇಕಾಗುತ್ತದೆ.

ಆದರೆ ಕರ್ನಾಟಕ ತಮಿಳುನಾಡು ರಾಜ್ಯಗಳು ರಾಜಕೀಯ ಪ್ರೇರಣೆಯಿಂದಲೇ ಈ ವಿವಾದವನ್ನು ಬಗೆಹರಿಸಲು ಯತ್ನಿಸಿರುವುದರಿಂದ ಈಗ ಇಡೀ ಸಮಸ್ಯೆಯೇ ಭಾವನಾತ್ಮಕ ರೂಪ ತಾಳಿದೆ. ಹಾಗಾಗಿ ಸರ್ಕಾರಗಳ ಹಸ್ತಕ್ಷೇಪದಿಂದ ಈ ಸಮಸ್ಯೆಯ ಪರಿಹಾರ ಕಂಡುಕೊಳ್ಳುವ ಸಾಧ್ಯತೆಗಳು ಗೌಣವಾಗಿವೆ. ಚುನಾವಣಾ ಲಾಭದ ದೃಷ್ಟಿಯಿಂದಲೇ ಎಲ್ಲಾ ಸಮಸ್ಯೆಗಳನ್ನೂ ಬಗೆಹರಿಸಲೆತ್ನಿಸುವ ನಮ್ಮ ರಾಜಕೀಯ ಪಕ್ಷಗಳು ಕಾವೇರಿ ವಿವಾದವನ್ನು ಸಹ ತಮ್ಮ ತಮ್ಮ ಲಾಭಕ್ಕಾಗಿ ಬಳಸಿಕೊಂಡಿವೆ. ಜಯಲಲಿತಾ ಅವರ ಪ್ರಸ್ತುತ ಹಠಮಾರಿ ನಿಲುವು ಒಂದು ನಿದರ್ಶನವಷ್ಟೆ. ಕೇಂದ್ರ ಸರ್ಕಾರಗಳೂ ಈ ವಿಷಯದಲ್ಲಿ ಸಂಕುಚಿತ ದೃಷ್ಟಿಕೋನದಿಂದಲೇ ವರ್ತಿಸಿರುವುದನ್ನು ಕಾಣಬಹುದು.

ಕಾವೇರಿ ವಿವಾದ ಒಂದು ಗಂಭೀರ ಸ್ವರೂಪ ಪಡೆದದ್ದು ೧೯೯೧ರಲ್ಲಿ ಜಲ ನ್ಯಾಯಮಂಡಳಿಯ ಮಧ್ಯಂತರ ಆದೇಶದ ನಂತರವೇ ಎಂದು ಹೇಳಬಹುದು. ಸರ್ವೋಚ್ಚ ನ್ಯಾಯಾಲಯ, ನ್ಯಾಯಮಂಡಳಿಗಳಿಗೆ ಮೊರೆ ಹೋದರೂ ವಿವಾದ ವಿವಾದವಾಗಿಯೇ ಉಳಿದಿದೆ.

ಏತನ್ಮಧ್ಯೆ ೧೯೯೫-೯೬ರಲ್ಲಿ ಮಳೆಯ ಪ್ರಮಾಣ ಕಡಿಮೆಯಾಗಿದ್ದರಿಂದ ಪುನಃ ಸಮಸ್ಯೆ ತಲೆದೋರಿತು. ತಂಜಾವೂರು ಪ್ರಾಂತದಲ್ಲಿ ಬೆಳೆಗಳನ್ನು ರಕ್ಷಿಸಲು ಕನಿಷ್ಠ ೩೦ ಟಿಎಂಸಿ ನೀರು ಬಿಡುವಂತೆ ಒತ್ತಾಯಿಸಿ ತಮಿಳುನಾಡು ಸರ್ಕಾರವು ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿತಾದರೂ ನ್ಯಾಯಾಲಯವು ಈ ಜವಾಬ್ದಾರಿಯನ್ನು ನ್ಯಾಯ

ಮಂಡಳಿಗೇ ವಹಿಸಿತು. ನ್ಯಾಯಮಂಡಳಿಯು ಕರ್ನಾಟಕಕ್ಕೆ ೧೧ ಟಿಎಂಸಿ ನೀರು ಬಿಡಲು ಆದೇಶ ನೀಡಿತಾದರೂ ಕರ್ನಾಟಕ ಸರ್ಕಾರ ಅದನ್ನು ಪಾಲಿಸಲಿಲ್ಲ. ಈ ಹಂತದಲ್ಲಿ ಸರ್ವೋಚ್ಚ ನ್ಯಾಯಾಲಯವು ಕೇಂದ್ರ ಸರ್ಕಾರವೇ ಈ ವಿವಾದ ಪರಿಹಾರಕ್ಕೆ ಮುಂದಾಗಬೇಕೆಂದು ಸೂಚಿಸಿದ್ದರಿಂದ ಅಂದಿನ ಪ್ರಧಾನಿ ನರಸಿಂಹರಾವ್‌ರವರ ಆದೇಶದಂತೆ ಕರ್ನಾಟಕ ೬ ಟಿಎಂಸಿ ನೀರು ಬಿಡಲು ಒಪ್ಪಿಕೊಂಡಿತ್ತು. ಈ ಬೆಳವಣಿಗೆಗಳಿಂದ ವಿವಾದ ಪುನಃ ರಾಜಕೀಯ ಸ್ವರೂಪ ಪಡೆದುಕೊಂಡಿದ್ದಲ್ಲದೇ ನ್ಯಾಯಮಂಡಳಿಯ ಆದೇಶದ ವಿರುದ್ಧ ಪ್ರಧಾನ ಮಂತ್ರಿಗಳು ತೀರ್ಮಾನ ಕೈಗೊಂಡಿದ್ದರಿಂದ ನ್ಯಾಯಮಂಡಳಿಯ ಪ್ರಸ್ತುತತೆಯ ಬಗ್ಗೆಯೇ ಅನುಮಾನಪಡುವಂತಾಯಿತು.

ಭಾರತ ಗಣತಂತ್ರ ಸಂವಿಧಾನದ ಒಕ್ಕೂಟ ವ್ಯವಸ್ಥೆಯಲ್ಲಿ ಯಾವುದೇ ಎರಡು ರಾಜ್ಯಗಳ ನಡುವಿನ ಸಮಸ್ಯೆಗಳನ್ನು ಬಗೆಹರಿಸುವುದು ಕೇಂದ್ರ ಸರ್ಕಾರದ ಜವಾಬ್ದಾರಿಯಾಗಿರುತ್ತದೆ. ಹಾಗಾಗಿ ಕಾವೇರಿ ನದಿ ನೀರಿನ ಹಂಚಿಕೆಯ ವಿಷಯದಲ್ಲಿ ಕೇಂದ್ರ ಸರ್ಕಾರ ಪ್ರವೇಶಿಸುವುದು ಅವಶ್ಯವಾಯಿತು. ಎರಡೂ ರಾಜ್ಯಗಳ ನಡುವೆ ದಶಕಗಳಿಂದ ಏರ್ಪಟ್ಟಿರುವ ವೈಮನಸ್ಯ ಸಂಘರ್ಷಗಳಿಗೆ ಒಂದು ನಿರ್ದಿಷ್ಟ ಮಾರ್ಗ ತೋರುವ ದೃಷ್ಟಿಯಿಂದ ೧೯೯೭ರಲ್ಲಿ ಕಾವೇರಿ ನದಿ ಪ್ರಾಧಿಕಾರವನ್ನು ಸ್ಥಾಪಿಸಲಾಯಿತು. ಪ್ರಾರಂಭದಲ್ಲಿ ಕರ್ನಾಟಕ ಸರ್ಕಾರ ಈ ರಾಜಕೀಯ ಸ್ವರೂಪದ ಪ್ರಾಧಿಕಾರವನ್ನು ತಿರಸ್ಕರಿಸಿತು. ೧೯೯೮ರಲ್ಲಿ ಕೇಂದ್ರ ಸರ್ಕಾರವು ಪ್ರಾಧಿಕಾರದ ಸ್ಥಾಪನೆಗೆ ಅಂಗೀಕಾರ ನೀಡಿದ್ದರಿಂದ ಕರ್ನಾಟಕದ ಮತ್ತು ತಮಿಳುನಾಡಿನಲ್ಲಿ ವಿರೋಧ ಪಕ್ಷವಾಗಿದ್ದ ಜಯಲಲಿತಾರವರ ಪ್ರತಿಭಟನೆಗಳು ಫಲಕಾರಿಯಾಗಲಿಲ್ಲ. ಪ್ರಧಾನಮಂತ್ರಿಗಳ ಅಧ್ಯಕ್ಷತೆಯಲ್ಲಿ ಕಾರ್ಯ ನಿರ್ವಹಿಸುವ ಈ ಪ್ರಾಧಿಕಾರದಲ್ಲಿ ಕರ್ನಾಟಕ ತಮಿಳುನಾಡು ಪಾಂಡಿಚೆರಿ ಕೇರಳ ರಾಜ್ಯಗಳ ಮುಖ್ಯಮಂತ್ರಿಗಳು ಸದಸ್ಯರಾಗಿರುತ್ತಾರೆ. ಒಂದು ರೀತಿಯಲ್ಲಿ ಯಾವುದೇ ತಾಂತ್ರಿಕತೆಯನ್ನು ಹೊಂದಿರದ, ತಜ್ಞರ ಸಮಿತಿಯನ್ನು ಹೊಂದಿರದ ಈ ಪ್ರಾಧಿಕಾರ ಅಧಿಕಾರಯುತ ಸಂಸ್ಥೆಯೇ ಅಲ್ಲವೆಂದು ಹೇಳಬಹುದು.

ಇದುವರೆಗೂ ನಾಲ್ಕು ಬಾರಿ ಸಂಧಾನ ಸಭೆ ನಡೆಸಿದ್ದರೂ ಈ ಪ್ರಾಧಿಕಾರ ಯಾವುದೇ ಪ್ರಗತಿ ಸಾಧಿಸಲಾಗಿಲ್ಲ. ನದಿಗಳನ್ನು ನಿರ್ವಹಿಸುವುದಕ್ಕಾಗಲಿ, ನದಿ ನೀರನ್ನು ನಿಯಂತ್ರಿಸುವುದಕ್ಕಾಗಲಿ ಯಾವುದೇ ಅಧಿಕಾರವಿಲ್ಲದ ಪ್ರಾಧಿಕಾರ ಕೇವಲ ಒಂದು ರಾಜಕೀಯ ವೇದಿಕೆಯಾಗಿದೆ. ಸದ್ಯಕ್ಕೆ ನ್ಯಾಯಮಂಡಳಿಯ ಮಧ್ಯಂತರ ಆದೇಶವನ್ನು ಅನುಷ್ಠಾನಗೊಳಿಸಲು ಮಾತ್ರ ಪ್ರಾಧಿಕಾರ ಹವಣಿಸುತ್ತಿದೆ. ಒಂದು ವೇಳೆ ನ್ಯಾಯಮಂಡಳಿ ಅಂತಿಮ ತೀರ್ಪು ನೀಡಿದಲ್ಲಿ ಈ ಪ್ರಾಧಿಕಾರದ ಅಸ್ತಿತ್ವವೇ ಇಲ್ಲವಾಗಬಹುದು.

ಇಂದಿನ ವಿವಾದವು ಕೇವಲ ನ್ಯಾಯಮಂಡಳಿಯ ಮಧ್ಯಂತರ ಆದೇಶ ಮತ್ತು ಅದರ ಅನುಷ್ಠಾನದ ಬಗ್ಗೆ ಮಾತ್ರ ಇರುವುದರಿಂದ ಈ ಸಂಘರ್ಷದ ಹಿಂದಿರುವ ಸುಪ್ತ ಕಹಿ ನೆನಪುಗಳನ್ನು, ಆರೋಪ-ಪ್ರತ್ಯಾರೋಪಗಳನ್ನು ಸೂಕ್ಷ್ಮವಾಗಿ ಅವಲೋಕಿಸುವುದು ಅಗತ್ಯವೆನಿಸುತ್ತದೆ. ಒಂದೆಡೆ ನೀರಾವರಿ ಪ್ರದೇಶ ಕಡಿಮೆ ಇದೆ ಎಂಬ ಕಾರಣದಿಂದಾಗಲೀ, ನೀರಾವರಿ ಅಭಿವೃದ್ಧಿ ತಡವಾಗಿ




ಇನ್ನಾದರೂ ಮು.ಮಂತ್ರಿ ಕಂಡ ಕನಸು ನನಸಾದೀತೆ....

ಆಯಿತೆಂಬ ಕಾರಣದಿಂದಾಗಲೀ ಕರ್ನಾಟಕ ತನ್ನ ನೆಲದಲ್ಲಿ ಉಗಮವಾಗುವ ನದಿಯ ಮೇಲಿನ ಹಕ್ಕನ್ನು ಬಿಟ್ಟು ಕೊಡಲೊಪ್ಪುವುದಿಲ್ಲ. ೧೯೨೪ರ ಒಪ್ಪಂದದಿಂದ ಕರ್ನಾಟಕಕ್ಕೆ ಅನ್ಯಾಯವಾಗಿದೆ ಎಂದೇ ಇಲ್ಲಿನ ಬಹುತೇಕ ಜನತೆಯ ಅಭಿಪ್ರಾಯ. ಆದರೆ ೧೯೨೪ರ ಒಪ್ಪಂದದಲ್ಲಿ ಅಂದಿನ ಸರ್ಕಾರ ಯಾವುದೇ ಪಕ್ಷಪಾತ ಧೋರಣೆ ತಳೆದಿರಲಿಲ್ಲ ಎಂದು ತಮಿಳುನಾಡಿನ ಜನರ ಅಭಿಪ್ರಾಯವಾಗಿದೆ. ಇನ್ನೊಂದೆಡೆ ಪ್ರತಿವರ್ಷ ಮಳೆ ವಿಫಲವಾದಾಗಲೂ ಸಹ ನೀರಿಗಾಗಿ ಕರ್ನಾಟಕದ ಮೊರೆ ಹೋಗಬೇಕಾಗುವುದೆಂಬ ಕೊರಗು ತಮಿಳುನಾಡಿಗಿದೆ. ಈ ಪರಾವಲಂಬಿ ಮನೋಭಾವವೇ ತಮಿಳುನಾಡು ಸರ್ಕಾರಗಳ ಹಠಮಾರಿ ನಿಲುವಿಗೆ ಕಾರಣವೆಂದು ಹೇಳಬಹುದು.

ಆದರೆ ಎರಡೂ ರಾಜ್ಯಗಳ ದೃಷ್ಟಿಕೋನವೂ ದೋಷಪೂರಿತವೆಂದೇ ನಿಸ್ಸಂಶಯವಾಗಿ ಹೇಳಬಹುದು. ಚಾರಿತ್ರಿಕ ತಪ್ಪುಗಳನ್ನು ತಿದ್ದಲು ಹೊರಡುವುದು, ಬೆಂಕಿಯೊಡನೆ ಸರಸವಾಡಿದಂತೆ. ಭಾರತೀಯ ಜನತಾಪಕ್ಷ ಅಯೋಧ್ಯಾ ವಿವಾದವನ್ನು ಕೆದಕಿದ ಪ್ರಸಂಗ ಒಂದು ನಿದರ್ಶನ ಮಾತ್ರ. ಕಾವೇರಿಯ ಉಗಮಸ್ಥಾನ ಕರ್ನಾಟಕವಾದ್ದರಿಂದ ಕಾವೇರಿ ನದಿಯ ಮೇಲಿನ ಹೆಚ್ಚಿನ ಹಕ್ಕು ಕರ್ನಾಟಕದ್ದೇ ಆಗಿರುತ್ತದೆ. ಈ ಹಕ್ಕನ್ನು ತಮಿಳುನಾಡು ಸರ್ಕಾರ ಮನ್ನಿಸಲೇಬೇಕಾಗುತ್ತದೆ. ಅದೇ ರೀತಿ ಕರ್ನಾಟಕವೂ ಸಹ ತಮಿಳುನಾಡು ಪರಾವಲಂಬಿ ಎಂದು ಪರಿಗಣಿಸದೆ ಒಂದು ಸಹಭಾಗಿ ರಾಜ್ಯ ಎಂದು ಪರಿಗಣಿಸಿ ನದಿ ನೀರನ್ನು ಹಂಚಿಕೊಳ್ಳುವ ನೀತಿ ಪಾಲಿಸಬೇಕಾಗಿದೆ. ಇಲ್ಲಿ ಅವಶ್ಯಕತೆಯಿರುವುದು ರಾಜಕೀಯ ವಿವೇಚನೆ ಹಾಗೂ ಪರಸ್ಪರ ಹೊಂದಿಕೊಂಡು ಬಾಳುವ ಮನೋಭಾವವೇ ಹೊರತು ನೀರಿನ ಪ್ರಮಾಣ ಅಥವಾ ಮಳೆಯ ಪ್ರಮಾಣಗಳಲ್ಲ.

**ಪ್ರಸ್ತುತ ಸನ್ನಿವೇಶ :** ಕಳೆದ ಹತ್ತು ವರ್ಷಗಳಿಂದಲೂ ಕಾವೇರಿ ವಿವಾದ ಒಂದಲ್ಲ ಒಂದು ರೀತಿಯಲ್ಲಿ ತಲೆ ಎತ್ತುತ್ತಲೇ ಇದೆ. ಆದರೆ ಮಳೆಯ ಪ್ರಮಾಣ ಹೆಚ್ಚಾಗಿದ್ದುದರಿಂದ ಎರಡೂ ರಾಜ್ಯಗಳಲ್ಲಿ ಎಂದೂ ಬರಗಾಲದ ಪರಿಸ್ಥಿತಿ ಉಂಟಾಗಿರಲಿಲ್ಲ. ಕರ್ನಾಟಕದಲ್ಲಿ ಈಗಿನ ಪ್ರಮಾಣದ ಬರಗಾಲ ಎದುರಾಗಿ ಬಹಳ ವರ್ಷಗಳೇ ಸಂದಿತ್ತೆಂದು ಹೇಳಬಹುದು. ಜುಲೈ ಮೊದಲ ವಾರದಿಂದಲೇ ಮಳೆ ವಿಫಲವಾದ್ದರಿಂದ ಜಲಾಶಯಗಳಲ್ಲಿನ ನೀರಿನಮಟ್ಟ ಗಣನೀಯವಾಗಿ ಇಳಿಮುಖವಾಯಿತು. ಕರ್ನಾಟಕದ ಯಾವ ಜಲಾಶಯವೂ ಈ ಬಾರಿ ಗರಿಷ್ಠ ಮಟ್ಟ ತಲುಪಿಲ್ಲ. ಬೆಳೆದು ನಿಂತ ಪೈರುಗಳಿಗೆ ನೀರಿಲ್ಲದ ಪರಿಸ್ಥಿತಿ ಇಲ್ಲಿ ಉಂಟಾಗಿದೆ. ಅತ್ತ ತಮಿಳುನಾಡಿನಲ್ಲಿ ಸಹ ನೀರಾವರಿ ಜಮೀನಿಗೆ ನೀರಿಲ್ಲದೆ ೧೫ ಲಕ್ಷ ರೈತರು ನಿರುದ್ಯೋಗಿಗಳಾಗುವ ಸಂಭವವಿದೆ. ಆದರೆ ತಮಿಳುನಾಡಿನಲ್ಲಿ ಈಗ ಬಿತ್ತನೆ ಕಾರ್ಯ ಆರಂಭವಾಗಿ ಅಕ್ಟೋಬರ್ ೧೫ರ ನಂತರ ಅಲ್ಲಿ ಮುಂಗಾರು ಮಳೆ ಆರಂಭವಾಗಿದೆ.

ಪ್ರತಿಯೊಂದು ರಾಜ್ಯವೂ ತನ್ನಲ್ಲಿರುವ ನೈಸರ್ಗಿಕ ಸಂಪನ್ಮೂಲಗಳನ್ನು ತನ್ನದೇ ಎಂದು ಪರಿಗಣಿಸಿ ಹಕ್ಕು ಚಲಾಯಿಸಿದರೆ ಭಾರತ ಒಂದು ಭಾಗವಾಗಿ ಉಳಿಯದೆ ಪುನಃ ರಾಜರ ಕಾಲಕ್ಕೆ ಮರಳುವ ಸಾಧ್ಯತೆಗಳಿವೆ. ಈ ಅಂಶವನ್ನು ಕರ್ನಾಟಕದ ಜನತೆಯೂ ಅರಿಯಬೇಕಾಗಿದೆ. ಈ ವರ್ಷ ಮಳೆಯ ಪ್ರಮಾಣ ಕಡಿಮೆಯಾಗಿರುವುದರಿಂದ ನೀರು ಬಿಡುವುದು ಸಾಧ್ಯವಿಲ್ಲವಾದರೂ ಹಂಚಿಕೊಂಡು ಬಾಳುವ ಸಂಸ್ಕೃತಿಗೆ ತಿಲಾಂಜಲಿ ನೀಡುವುದು ಪ್ರಜಾತಾಂತ್ರಿಕ ಲಕ್ಷಣವಲ್ಲ. ನದಿಯ ನೀರು ನೈಸರ್ಗಿಕ ಕೊಡುಗೆಯಾದ್ದರಿಂದ ಯಾರದೇ ಸ್ವತ್ತಲ್ಲ ಎಂಬ ಅಂಶವನ್ನು ಎಲ್ಲರೂ ಮನಗಾಣಬೇಕಾಗಿದೆ. ಆಳುವ ವರ್ಗಗಳ ನಿರ್ಲಕ್ಷ್ಯ ಮನೋಭಾವದಿಂದ ಈ ಎಲ್ಲಾ ಸಮಸ್ಯೆಗಳು ಗಂಭೀರ ಸ್ವರೂಪ ಪಡೆಯುತ್ತಿವೆ. ಕಾವೇರಿ ವಿವಾದವೇ ಇದಕ್ಕೆ ನಿದರ್ಶನ. ರಾಜಕೀಯ ನಾಯಕರುಗಳಿಂದ ಈ ವಿವಾದ ಪರಿಹಾರವಾಗಲಾರದು ಎಂಬ ಅಂಶ ಈಗಾಗಲೇ ಸಾಬೀತಾಗಿದೆ. ಕಾವೇರಿ ನದಿ ಪ್ರಾಧಿಕಾರವಾಗಲೀ ಕಾವೇರಿ ಉಸ್ತುವಾರಿ ಸಮಿತಿಯಾಗಲೀ ಸರ್ವೋಚ್ಚ ನ್ಯಾಯಾಲಯವಾಗಲೀ ಪರಿಹಾರ ಒದಗಿಸಲು ಸಾಧ್ಯವಿಲ್ಲ. ಜನರ ಉಪಯೋಗಕ್ಕಾಗಿ ಇರುವ ನದಿ ನೀರು ಹಂಚಿಕೆಯ ವಿಚಾರದಲ್ಲಿ ಜನರೇ ಭಾಗವಹಿಸಿದಾಗ ಮಾತ್ರ ಪರಿಹಾರ ಕಂಡುಕೊಳ್ಳಲು ಸಾಧ್ಯ. ರಾಜಕೀಯ ಸ್ವರೂಪದ ಪ್ರಾಧಿಕಾರವನ್ನು ಕೂಡಲೇ ವಿಸರ್ಜಿಸಿ ಅದರಲ್ಲಿ ಜಲಸಂಪನ್ಮೂಲ ತಜ್ಞರನ್ನೂ, ರೈತ ಮುಖಂಡರನ್ನೂ ನೇಮಿಸಬೇಕು. ಪರಸ್ಪರ ಮಾತುಕತೆಯಿಂದ ಇದು ಖಂಡಿತವಾಗಿಯೂ ಸಾಧ್ಯ.

ಇಡೀ ಕಾವೇರಿ ವಿವಾದ ಹಾಗೂ ಸಂಘರ್ಷದ ಹಿನ್ನೆಲೆಯಲ್ಲಿ ನಟ ರಜನೀಕಾಂತರವರ ಹೇಳಿಕೆ ಮಾರ್ಮಿಕವಾಗಿದೆ. ರಕ್ತ ಹರಿಯುವುದಾದರೆ ನೀರು ಬೇಡ ಎಂಬ ಅವರ ಹೇಳಿಕೆ ನಿಜಕ್ಕೂ ಶ್ಲಾಘನೀಯ. ಹಿಂಸೆಯ ಮೂಲಕವೇ ಯಾವ ಸಮಸ್ಯೆಗೂ ಪರಿಹಾರ ಸಿಗುವುದಿಲ್ಲ ಎಂಬ ಅಂಶವನ್ನೆಲ್ಲರೂ ಮನಗಾಣಬೇಕು. ಭಾವುಕತೆಯಿಂದ ಉಂಟಾಗುವ ಗಲಭೆಗಳಿಂದ ಅಪಾರ ಸಂಕಷ್ಟಗಳಿಗೆ ತುತ್ತಾಗುವವರು ಲಕ್ಷಾಂತರ ಕಾರ್ಮಿಕರು, ಸಣ್ಣ ರೈತರು ಇತ್ಯಾದಿ. ಇಂಥ ಅನೇಕ ಸಮಸ್ಯೆಗಳನ್ನು ಸರಕಾರಗಳು ಪರಿಹರಿಸಲು ಸಾಧ್ಯವಾಗದೇ ಇರುವುದು ನಮ್ಮ ಮುಂದಿದೆ. ಆದ್ದರಿಂದ ಜನತೆಯೂ ಸಹ ಸರ್ಕಾರದ ಕಡೆಯಿಂದ ಈ ಸಮಸ್ಯೆಗೆ ಪರಿಹಾರ ಅಪೇಕ್ಷಿಸುವುದು ಸರಿಯಲ್ಲ. ಎಲ್ಲಾ

ಸಮಸ್ಯೆಗೆ ಪರಿಹಾರ ದೊರೆತರೆ ನಮ್ಮ ರಾಜಕಾರಣಿಗಳು ನಿರುದ್ಯೋಗಿಗಳಾಗಿಬಿಡುತ್ತಾರೆ. ಅವರ ವೋಟ್ ಬ್ಯಾಂಕುಗಳು ಷೇರು ಮಾರುಕಟ್ಟೆಯಂತೆ ಕುಸಿಯುತ್ತವೆ. ಕಾಶ್ಮೀರ, ಅಸ್ಸಾಂ, ನಾಗಾಲ್ಯಾಂಡ್, ಬಿಹಾರ, ನಕ್ಸಲೀಯರು ಇವೆಲ್ಲ ಇದಕ್ಕೆ ಉದಾಹರಣೆಗಳಷ್ಟೆ.

ಆದ್ದರಿಂದ ಕಾವೇರಿ ವಿವಾದವನ್ನು ಪರಿಹರಿಸಲು ಕೆಲವು ಸೂತ್ರಗಳನ್ನು ಜನರೇ ಕಂಡುಕೊಳ್ಳಬೇಕಾಗಿದೆ.

೧. ನ್ಯಾಯಮಂಡಳಿಯಾಗಲೀ, ನ್ಯಾಯಾಲಯಗಳಾಗಲೀ ನದಿ ನೀರಿನ ವಿವಾದವನ್ನು ಬಗೆಹರಿಸುವುದು ಅಸಾಧ್ಯ ಎಂಬ ಅಂಶ ಮನಗಾಣಬೇಕು.

೨. ನದಿ ನೀರು ಇಡೀ ಜನರಿಗಾಗಿ ಪ್ರಕೃತಿ ನೀಡಿರುವ ಅಪೂರ್ವ ಸಂಪತ್ತು. ಯಾವುದೇ ಒಂದು ಜನತೆಗೆ ಅದನ್ನು ನಿಯಂತ್ರಿಸುವ ಹಕ್ಕಾಗಲೀ, ಸಾಮರ್ಥ್ಯವಾಗಲೀ ಇರುವುದಿಲ್ಲ.

೩. ನೈಸರ್ಗಿಕ ಸಂಪತ್ತು ಎಂದೆಂದಿಗೂ ಇಡೀ ರಾಷ್ಟ್ರಕ್ಕೆ ಸೇರಿರುತ್ತದೆ. ರಾಷ್ಟ್ರ ಎಂಬ ಪರಿಕಲ್ಪನೆಯನ್ನು ಒಪ್ಪಿ ನಡೆಯುವವರು ಈ ಅಂಶವನ್ನು ಒಪ್ಪಿಕೊಳ್ಳಬೇಕಾಗುತ್ತದೆ.

೪. ನೈಸರ್ಗಿಕ ಸಂಪತ್ತು ಹಾಗೂ ಸಂಪನ್ಮೂಲಗಳನ್ನು ನದಿ- ಅರಣ್ಯ-ಬೆಟ್ಟಗುಡ್ಡ ಮುಂತಾದವುಗಳನ್ನು ಎಲ್ಲರೂ ಹಂಚಿಕೊಳ್ಳುವ ಮನೋಭಾವ ಬೆಳೆಸಿಕೊಳ್ಳಬೇಕು.

೫. ಕಾವೇರಿ ವಿವಾದಕ್ಕೆ ಸಂಬಂಧಿಸಿದಂತೆ ಮೊಟ್ಟ ಮೊದಲನೆಯದಾಗಿ ಎರಡೂ ರಾಜ್ಯಗಳ ರೈತ ನಾಯಕರು ಎರಡೂ ಪ್ರಾಂತ್ಯಗಳ ಜಲಾನಯನ ಪ್ರದೇಶಗಳ ಅಧ್ಯಯನ ಮಾಡಿ ಅಲ್ಲಿನ ರೈತರಿಗೆ ಅವಶ್ಯಕವಾದ ನೀರಿನ ಪ್ರಮಾಣವನ್ನು ನಿರ್ಧರಿಸಬೇಕು. ಹಾಗೆಯೇ ಎರಡೂ ಪ್ರಾಂತ್ಯಗಳ ರೈತರು ತಮ್ಮ ಹೊಲಗದ್ದೆಗಳಲ್ಲಿ ನೀರನ್ನು ಯಾವ ರೀತಿ ಉಪಯೋಗಿಸುತ್ತಾರೆ, ಎಷ್ಟು ನೀರನ್ನು ವ್ಯರ್ಥ ಮಾಡುತ್ತಾರೆ, ಎಷ್ಟು ಉಳಿತಾಯ ಮಾಡುತ್ತಾರೆ, ಎಂಬುದನ್ನು ವಿಶ್ಲೇಷಿಸಬೇಕು.

೬. ಜಲಾಶಯಗಳಲ್ಲಿ ಹೂಳು ಎಷ್ಟು ಇದೆ ಎಂದು ಸಂಶೋಧನೆ ಮಾಡಿ ಹೂಳು ತೆಗೆಸುವಂತೆ ಅದು ಸರ್ಕಾರಗಳಿಗೆ ಆದೇಶಿಸಬೇಕು.

೭. ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ನೀರು ಹರಿಯುವಾಗ ಬಹುಪಾಲು ನೀರು ವ್ಯರ್ಥವಾಗುವುದು ಸಹಜ, ಇಂತಹ ನ್ಯೂನತೆಗಳನ್ನು ಸರಿಪಡಿಸುವಂತೆ ಸರ್ಕಾರಗಳನ್ನು ಆಗ್ರಹಿಸಬೇಕು.

೮. ಸರಾಸರಿ ಮಳೆಯ ಪ್ರಮಾಣವನ್ನು ಆಧರಿಸಿ ಮಳೆಯ ಪ್ರಮಾಣ ತೀರ ಕಡಿಮೆಯಾದ ವರ್ಷದಲ್ಲಿ ಬರಗಾಲದ ವರ್ಷಗಳಲ್ಲಿ ನೀರಿನ ಹಂಚಿಕೆಯ ಬಗ್ಗೆ ಒಂದು ನಿರ್ದಿಷ್ಟವಾದ ಮಾರ್ಗದರ್ಶಿ ಸೂತ್ರವನ್ನು ರೂಪಿಸಬೇಕು. ಹಂಚಿಕೊಳ್ಳುವ ಪ್ರಕ್ರಿಯೆಯಲ್ಲಿ ಹಕ್ಕೊತ್ತಾಯ ಮಾಡುವುದು ಪ್ರಜಾ ತಾಂತ್ರಿಕಕ್ರಿಯೆ ಎನಿಸುವುದಿಲ್ಲ. ಆದ್ದರಿಂದ ತೀವ್ರ ಬರಗಾಲದ ಪರಿಸ್ಥಿತಿಯಲ್ಲಿ ಎರಡೂ ರಾಜ್ಯಗಳ ಜನತೆಗೆ ನ್ಯಾಯ ಒದಗಿಸುವಂತಹ ಒಂದು ಸೂತ್ರ ಇರುವುದು ಸೂಕ್ತ. ಈ ರೀತಿಯ ಒಂದು ಸೂತ್ರ ಇಲ್ಲದಿರುವುದೇ ಪ್ರಸ್ತುತ ಸಂಘರ್ಷಕ್ಕೆ ಪ್ರಮುಖ ಕಾರಣವಾಗಿದೆ.

೯. ಕಾವೇರಿ ಅಥವಾ ಯಾವುದೇ ನದಿ ನೀರಿನ ವಿವಾದದ ಬಗ್ಗೆ ವಿಶ್ಲೇಷಿಸುವಾಗ ಸಾಮಾನ್ಯವಾಗಿ ಗಂಗಾ ಕಾವೇರಿ ಜೋಡಣಾ ಯೋಜನೆಯ ಬಗ್ಗೆ ಪ್ರಸ್ತಾಪ ಬರುತ್ತದೆ. ಈ ಬಾರಿಯೂ ಸಹ ಈ ಪ್ರಸ್ತಾಪ ಮುಂದೆ ಬಂದಿದೆ. ಈ ಯೋಜನೆಯ ಅನುಷ್ಠಾನಕ್ಕೆ ೨ ಲಕ್ಷ ಕೋಟಿ ರೂ.ಗಳಷ್ಟು ವೆಚ್ಚವಾಗುತ್ತದೆ. ಹಲವಾರು ಹಳ್ಳಿಗಳು ವಸತಿ ಪ್ರದೇಶಗಳು ಮುಳುಗಡೆಯಾಗುತ್ತವೆ. ಇದರಿಂದ ರಾಷ್ಟ್ರಕ್ಕೆ ಲಾಭವಾಗುವು ದಿಲ್ಲ ಎಂದು ಹಲವರ ವಾದವಾದರೆ, ಇನ್ನೂ ಹಲವರು ಈ ಯೋಜನೆಯಿಂದ ಇಡೀ ದೇಶವೇ ನೀರಾವರಿ ಪ್ರದೇಶವಾಗುತ್ತದೆ, ಪ್ರವಾಹಗಳನ್ನು ತಡೆಗಟ್ಟ ಬಹುದು, ಅನೇಕ ಬಂಜರು ಭೂಮಿಯುಳ್ಳ ರಾಜ್ಯಗಳು ಫಲವತ್ತಾದ ಭೂಮಿ ಪಡೆಯುತ್ತವೆ ಎಂದು ವಾದಿಸುವವರೂ ಇದ್ದಾರೆ. ಇನ್ನೊಂದೆಡೆ ಕೇವಲ ದಕ್ಷಿಣ ಭಾರತದ ನದಿಗಳ ಜೋಡಣೆಯ ಮಾತೂ ಕೇಳಿಬರುತ್ತಿದೆ.

೧೦. ಈ ಎರಡೂ ಯೋಜನೆಗಳನ್ನು ಅನುಷ್ಠಾನಗೊಳಿಸುವುದರಿಂದ ಜನತೆಗೆ ಭವಿಷ್ಯದಲ್ಲಿ ಲಾಭವಾಗುವುದು ಖಚಿತ. ಪ್ರವಾಹಗಳನ್ನು ನಿಯಂತ್ರಿಸುವುದರಿಂದ ಅನೇಕ ಪ್ರದೇಶಗಳಲ್ಲಿ ಜನಜೀವನ ಸುಧಾರಿಸುತ್ತದೆ. ಆದರೆ ನಮ್ಮ ಆಳುವ ವರ್ಗಗಳಿಗೆ ಇದರಿಂದ ಹೆಚ್ಚು ಲಾಭವಾಗುವುದಿಲ್ಲ. ಪ್ರವಾಹಗಳನ್ನು ನಿಯಂತ್ರಿಸುವುದರಿಂದ ಹಲವಾರು ಶ್ರೀಮಂತ ರೈತರಿಗೆ ನಷ್ಟ ಉಂಟಾಗುತ್ತದೆ ಎಂಬ ಅಂಶವನ್ನು ಅನೇಕ ಸಂಶೋಧನೆಗಳು ದೃಢಪಡಿಸಿವೆ. ಹಾಗಾಗಿ ಯಾವ ಸರ್ಕಾರವೂ ಪ್ರವಾಹವನ್ನು ನಿಯಂತ್ರಿಸಲಿಚ್ಛಿಸುವುದಿಲ್ಲ. ಈ ಯೋಜನೆಗಳಿಗೆ ಅಪಾರ ವೆಚ್ಚ ತಗುಲುವುದಾದರೂ ಪ್ರತಿವರ್ಷ ಬರಪರಿಹಾರ, ಪ್ರವಾಹ ಪರಿಹಾರ ಗಳಿಗೆ ಸರ್ಕಾರ ಹಣ ಪೋಲು ಮಾಡುವುದನ್ನು ಗಮನಿಸಿದರೆ ಈ ಯೋಜನೆಗಳಿಗೆ ತಗುಲುವ ವೆಚ್ಚ ದುಬಾರಿಯೇನಲ್ಲ. ಸರ್ಕಾರಕ್ಕೆ ಈ ಯೋಜನೆಯನ್ನು ಕೈಗೆತ್ತಿ ಕೊಳ್ಳುವ ಮನೋಬಲ, ದೂರದೃಷ್ಟಿ, ಜನಪರ ಕಾಳಜಿ ಇರಬೇಕಷ್ಟೆ.

೧೧. ಎಲ್ಲಕ್ಕಿಂತಲೂ ಮುಖ್ಯವಾಗಿ ಕಾವೇರಿ ನದಿ ಪ್ರಾಧಿಕಾರ, ಉಸ್ತುವಾರಿ ಸಮಿತಿ ಮುಂತಾದ ರಾಜಕೀಯ ಉಸ್ತುವಾರಿ ಸಂಸ್ಥೆಗಳ ಬದಲಾಗಿ ಜನಪರವಾದ ಜನರ ನಿಜವಾದ ಪ್ರತಿನಿಧಿಗಳನ್ನು ಒಳಗೊಂಡ ಸಂಸ್ಥೆಗಳನ್ನು ರಚಿಸಬೇಕು. ಕಾವೇರಿ ನದಿ ಪ್ರಾಧಿಕಾರದಲ್ಲಿ ಎರಡೂ ರಾಜ್ಯಗಳ ರೈತರ ಪ್ರತಿನಿಧಿಗಳು, ಜಲಸಂಪನ್ಮೂಲಗಳ ತಜ್ಞರು, ನಾಡಿನ ಹಿರಿಯ ಕಾನೂನು ತಜ್ಞರು ಹಾಗೂ ಹಿರಿಯ ಮುಖಂಡರನ್ನು ಒಳಗೊಂಡ ಪ್ರಾಧಿಕಾರವನ್ನು ರಚಿಸಬೇಕು. ಈ ಪ್ರಾಧಿಕಾರವು ಆಗಾಗ್ಗೆ ಸಭೆ ಸೇರಿ ನದಿ ನೀರಿನ ಉತ್ತಮ ನಿರ್ವಹಣೆ ಹಾಗೂ ನೀರಿನ ಹಂಚಿಕೆಯ ಬಗ್ಗೆ ಚರ್ಚೆ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸಬೇಕು. ಹಾಗಾದಲ್ಲಿ ಮಾತ್ರ ನದಿ ನೀರಿನ ವಿವಾದ ರಾಜಕೀಯ ಸ್ವರೂಪ ಪಡೆಯದೆ ಒಂದು ನಿರ್ದಿಷ್ಟ ಪರಿಹಾರ ಕಂಡುಕೊಳ್ಳ ಬಹುದು. ಈ ನಿಟ್ಟಿನಲ್ಲಿ ರೈತ ಸಂಘಟನೆಗಳು ಮುಂದಾಗಬೇಕಾಗಿದೆ. ಈ ಎಲ್ಲ ಸೂತ್ರಗಳ ಹಿಂದಿನ ಒಂದೇ ಉದ್ದೇಶವೆಂದರೆ ರೈತ ವರ್ಗದ ಐಕ್ಯತೆ ಮತ್ತು ಸಣ್ಣ ರೈತರ ಕೃಷಿ ಕಾರ್ಮಿಕರ ರಕ್ಷಣೆ. ತಮಿಳುನಾಡಿನಲ್ಲಿ ಈಗಾಗಲೇ ಲಕ್ಷಾಂತರ ಕೃಷಿಕಾರ್ಮಿಕರು ವಲಸೆ ಹೋಗಲಾರಂಭಿಸಿದ್ದಾರೆ. ಇತ್ತ ಕರ್ನಾಟಕದಲ್ಲಿ ಬರಗಾಲದ ಹಿನ್ನೆಲೆಯಲ್ಲಿ ನೀರಾವರಿ ಇಲ್ಲದ ಪ್ರದೇಶಗಳ ರೈತರು ಪರದಾಡುತ್ತಿದ್ದಾರೆ. ಮಂಡ್ಯ, ಮೈಸೂರು ರೈತರು ನೀರಾವರಿ ಸೌಕರ್ಯ ಹೊಂದಿದ್ದು ಒಂದು ವೇಳೆ ಮಳೆಯಿಲ್ಲದಿದ್ದರೂ ಬದುಕುಳಿಯುವ ಸಾಮರ್ಥ್ಯ ಹೊಂದಿದ್ದಾರೆ. ಆದರೆ ವರ್ಷಕ್ಕೆ ಒಂದೇ ಬೆಳೆ ಅದೂ ಮಳೆಯಾಧಾರಿತ ಬೆಳೆ ಬೆಳೆಯುವ, ನೀರಾವರಿ ಇಲ್ಲದ ಪ್ರದೇಶಗಳ ರೈತರು ಈ ಬಾರಿ ಅತೀವ ಸಂಕಷ್ಟ ಎದುರಿಸುತ್ತಿದ್ದಾರೆ. ಆ ರೈತರುಗಳ ಬಗ್ಗೆ, ಬರ ಪರಿಹಾರ ಇಲ್ಲದೆ ವಲಸೆ ಹೋಗುತ್ತಿರುವ ಕೃಷಿ ಕಾರ್ಮಿಕರ ಬಗ್ಗೆ ಕೇಳುವವರೇ ಇಲ್ಲವಾಗಿದ್ದಾರೆ. ಕಾವೇರಿ ವಿವಾದದ ಭಾವನಾತ್ಮಕ ಸನ್ನಿವೇಶದ ಹಿನ್ನೆಲೆಯಲ್ಲಿ ಸರ್ಕಾರವೂ ತನ್ನ ಜವಾಬ್ದಾರಿಯನ್ನು ಮರೆತು ರಾಜಕಾರಣದಲ್ಲಿ ತೊಡಗಿದೆ. ಈ ಅಂಶಗಳನ್ನು ರೈತ ಸಂಘಟನೆಗಳು, ರೈತ ಮುಖಂಡರು ಸೂಕ್ಷ್ಮವಾಗಿ ಗಮನಿಸಬೇಕು.

ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ ಜಾಗತೀಕರಣದ ಪರಿಣಾಮವಾಗಿ ರೈತಾಪಿ ವರ್ಗ ತೀವ್ರ ಸಂಕಷ್ಟಗಳನ್ನು ಎದುರಿಸುತ್ತಿರುವುದು. ಇಂತಹ ಸಮಯದಲ್ಲಿ ದೇಶದ ಎಲ್ಲಾ ರೈತರು, ರೈತ - ಕೂಲಿಗಳು, ಕೃಷಿ ಕಾರ್ಮಿಕರು ಒಂದಾಗಿ ಸಾಮ್ರಾಜ್ಯಶಾಹಿ ಆಕ್ರಮಣವನ್ನು ಎದುರಿಸಿ ಹೋರಾಡಬೇಕಾಗಿದೆ. ಆದರೆ ನದಿ ನೀರಿನ ಹಂಚಿಕೆಯ ನೆಪದಲ್ಲಿ ಇಂದು ರೈತ ಸಮುದಾಯದಲ್ಲಿ ಒಡಕು ಉಂಟಾಗುತ್ತಿದೆ ಹಾಗೂ ಪ್ರಸ್ತುತ ಕಾವೇರಿ ಚಳುವಳಿಯಲ್ಲಿ ಕರ್ನಾಟಕದ ರೈತಾಪಿ ವರ್ಗದಲ್ಲಿ ಅಭೂತಪೂರ್ವ ಐಕ್ಯತೆ ಉಂಟಾಗಿದೆ. ಕಾವೇರಿ ಕರ್ನಾಟಕದ ಜೀವನದಿ ನಮ್ಮ ಪ್ರಾಣ ಕೊಟ್ಟರೂ ನೀರು ಕೊಡೆವು ಎಂಬ ಘೋಷಣೆಗಳು ತಾತ್ಕಾಲಿಕವಾಗಿ ಉತ್ತಮ ಫಲಿತಾಂಶ ನೀಡಬಹುದು. ಆದರೆ ಜಾಗತೀಕರಣ ಹಾಗೂ ಖಾಸಗೀಕರಣ ಪೂಜಾರಿಗಳು ಈಗಾಗಲೇ ನದಿಗಳನ್ನು ಮಾರಾಟ ಮಾಡಲು ಮುಂದಾಗಿದ್ದಾರೆ. ಬಿಹಾರದಲ್ಲಿ ಈಗಾಗಲೇ ಒಂದು ನದಿಯನ್ನು ಖಾಸಗಿಯವರಿಗೆ ಮಾರಲಾಗಿದೆ. ನಾಳೆ ಕಾವೇರಿಗೆ ಇದೇ ದುಸ್ಥಿತಿ ಒದಗಿಬರಬಹುದು. ಇಡೀ ದೇಶವನ್ನೇ ಮಾರಲು ಹೊರಟಿರುವ ಕೇಂದ್ರ-ರಾಜ್ಯ ಸರ್ಕಾರಗಳು ಈ ನಿಟ್ಟಿನಲ್ಲಿ ಜನರ ಭಾವನೆಗಳಿಗೆ ಕಿಂಚಿತ್ತೂ ಬೆಲೆ ನೀಡುವುದಿಲ್ಲ. ಹಾಗಾಗಿ ಜನತೆಯ ಹೋರಾಟದಿಂದ ಮಾತ್ರ ಈ ಸಾಮ್ರಾಜ್ಯಶಾಹಿ ಗುಲಾಮರನ್ನು ಸೋಲಿಸಲು ಸಾಧ್ಯ. ಕಾವೇರಿ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿ ೪೦ ದಿನಗಳಿಂದಲೂ ಹೆಚ್ಚು ಕಾಲ ರಸ್ತೆ, ರೈಲು ತಡೆ, ನಡೆಸಿ ಬಂದ್‌ಗಳನ್ನು ಆಚರಿಸಿ ಸರ್ಕಾರವನ್ನು ಮಣಿಸಿದ ಎಲ್ಲಾ ಜನರು ಜಾಗತೀಕರಣದ ದುಷ್ಪರಿಣಾಮಗಳ ವಿರುದ್ಧವೂ ಇದೇ ರೀತಿ ಹೋರಾಡುವರೇ ಎಂಬುದು ಯಕ್ಷಪ್ರಶ್ನೆ. ಮುಖ್ಯವಾಗಿ ರೈತ ಸಂಘಟನೆಗಳು ಈ ನಿಟ್ಟಿನಲ್ಲಿ ಆಲೋಚನೆ ಮಾಡ ಬೇಕು. ಹಾಗಾಗದಿದ್ದಲ್ಲಿ ಇಂತಹ ಸಾಂದರ್ಭಿಕ ಚಳುವಳಿಗಳು ಆಳುವ ವರ್ಗಗಳ ಒಡೆದು - ಆಳುವ ನೀತಿಗೆ ಪೂರಕವಾಗುವುವೇ ಹೊರತು ಜನಪರ ಚಳುವಳಿಗಳಾಗುವುದಿಲ್ಲ.

ನಾ. ದಿವಾಕರ
ಮಹಾವೀರ ರಸ್ತೆ, ಬೆಳ್ಳೂರು - ೫೭೧ ೪೧೮

# ಕೃಶವಾಗಿರುವ ಕೃಷಿ

ರಾ. ನಂ. ಚಂದ್ರಶೇಖರ

ಕರ್ನಾಟಕ ಮೂಲತಃ ಕೃಷಿಯೇ ಪ್ರಧಾನ ಕಸುಬಾದ ರಾಜ್ಯ. ರಾಜ್ಯದ ಶೇ. ೬೮ರಷ್ಟು ಜನ ಕೃಷಿ ಅವಲಂಬಿತ ಚಟುವಟಿಕೆಯನ್ನೇ ನಂಬಿ ಬದುಕುತ್ತಿದ್ದಾರೆ. ಏಕೀಕರಣವಾದ ಸಂದರ್ಭದಲ್ಲಿ ರಾಜ್ಯದ ಒಟ್ಟು ಆದಾಯದಲ್ಲಿ ಕೃಷಿ ಕ್ಷೇತ್ರದ ಪಾಲು ಶೇ. ೫೦ಕ್ಕಿಂತ ಹೆಚ್ಚಿತ್ತು. ಈ ಪರಿಸ್ಥಿತಿಯು ೧೯೮೦ರವರೆಗೂ ಮುಂದುವರೆಯಿತು. ಇಂದು ಕೃಷಿ ಆದಾಯವು ಶೇ. ೩೩ಕ್ಕಿಳಿದಿದೆ. ಎಂಬತ್ತರ ದಶಕದಲ್ಲಿ ಕೃಷಿ ಬೆಳವಣಿಗೆ ರಾಷ್ಟ್ರದ ಸರಾಸರಿ ಶೇ. ೪. ೨ರಷ್ಟಾದರೆ, ಕರ್ನಾಟಕದಲ್ಲಿ ಬೆಳವಣಿಗೆ ಶೇ. ೨.೭ರಷ್ಟು ಮಾತ್ರ. ಇದು ತೊಂಬತ್ತರ ದಶಕದಲ್ಲಿ ಕ್ರಮವಾಗಿ ಶೇ. ೪.೮ ಮತ್ತು ಶೇ. ೩.೭ ಆಗಿದೆ. ೧೯೯೨-೯೩ರಲ್ಲಿ ಆಹಾರ ಧಾನ್ಯಗಳ ಉತ್ಪಾದನೆ ೮೬ ಲಕ್ಷ ಟನ್ನುಗಳಿದ್ದುದು ೨೦೦೧-೦೨ರಲ್ಲಿ ೮೨.೨೮ ಲಕ್ಷ ಟನ್ನಿಗಿಳಿದಿದೆ. ೭೦ರ ದಶಕದ ಮಧ್ಯಭಾಗದವರೆಗೆ ಅಗತ್ಯಕ್ಕಿಂತ ಹೆಚ್ಚು ಆಹಾರ ಧಾನ್ಯಗಳನ್ನು ಉತ್ಪಾದಿಸುತ್ತಿದ್ದ ಕರ್ನಾಟಕವು ಇಂದು ಹೆಚ್ಚು ಹೆಚ್ಚು ಆಹಾರವನ್ನು ಆಮದು ಮಾಡಿಕೊಳ್ಳುವ ರಾಜ್ಯವಾಗಿದೆ. ಕೃಷಿ ಉತ್ಪನ್ನದ ವಾರ್ಷಿಕ ಬೆಳವಣಿಗೆ ೧೯೮೦ರಲ್ಲಿ ಶೇ. ೪ ಇದ್ದುದು ೯೦ರ ದಶಕದಲ್ಲಿ ಶೇ. ೨ಕ್ಕಿಳಿಯಿತು. ಆಹಾರ ಧಾನ್ಯದ ಉತ್ಪಾದನೆ ಶೇ. ೩.೫೪ರಿಂದ ಶೇ. ೧.೪೮ಕ್ಕಿಳಿದರೆ, ಆಹಾರೇತರ ಬೆಳೆಯ ಬೆಳವಣಿಗೆ ಶೇ. ೪ರಿಂದ ಶೇ. ೩ಕ್ಕಿಳಿದಿದೆ. ಇವು ಗಾಬರಿ ಹುಟ್ಟಿಸುವ ಸಂಗತಿ. ಇದಕ್ಕೆಲ್ಲ ಕಾರಣ ಮಳೆಯನ್ನೇ ನಂಬಿಕೊಂಡಿರುವುದು ಒಂದೆಡೆಯಾದರೆ, ನೀರಾವರಿ ಸೌಕರ್ಯದ ಅಭಾವ ಎಂದು ಹೇಳುತ್ತಾರೆ. ಇದರಾಚೆಗೆ ಇನ್ನೊಂದು ಸಮಸ್ಯೆ ಇದೆ. ಅಖಿಲ ಭಾರತ ಮಟ್ಟದಲ್ಲಿ ಕೃಷಿ ಬೆಳೆಗಳ ಇಳುವರಿ ದರ ನಿರಂತರವಾಗಿ ಏರುಮುಖವಾಗಿದೆ. ೮೦ರ ದಶಕವು ರಾಷ್ಟ್ರದಲ್ಲಿ ಗಣನೀಯ ಪ್ರಮಾಣದ ಏರಿಕೆಯಾದ ಅವಧಿ ಆಗಿದೆ. ದುರಂತವೆಂದರೆ ಕರ್ನಾಟಕದಲ್ಲಿ ಎಂದೂ ಇಂತಹ ಏರಿಕೆ ಕೃಷಿಯಲ್ಲಿ ಸಂಭವಿಸಲಿಲ್ಲ. ಆಶ್ಚರ್ಯದ ಸಂಗತಿ ಎಂದರೆ ಕೃಷಿಯಲ್ಲಿ ಸುದೀರ್ಘ ಪರಂಪರೆಯಿರುವ ನಮ್ಮ ರಾಜ್ಯ ಆಹಾರೋತ್ಪನ್ನದ ಉತ್ಪಾದನೆಯಲ್ಲಿ ೧೪ನೇ ಸ್ಥಾನದಲ್ಲಿರುವುದು. ಪ್ರತಿ ಹೆಕ್ಟೇರ್‌ಗೆ ರಾಷ್ಟ್ರೀಯ ಸರಾಸರಿ ಇಳುವರಿ ೧೬೭೦ ಕೆ.ಜಿ. ಇದ್ದರೆ ಕರ್ನಾಟಕದಲ್ಲಿ ೧೩೫೨ ಕೆ.ಜಿ. ಮಾತ್ರ. ತಲಾ ದವಸ ಧಾನ್ಯಗಳ ಉತ್ಪಾದನೆ ರಾಷ್ಟ್ರದ ಸರಾಸರಿ ೨೦೬ ಕೆ.ಜಿ.ಗಳಾದರೆ ಕರ್ನಾಟಕದ್ದು ೧೭೬ ಕೆ.ಜಿ.ಗಳು ಮಾತ್ರ. ರಾಜ್ಯದಲ್ಲಿ ಸರಾಸರಿ ಹಿಡುವಳಿ ಜಮೀನು ೨.೧೩ ಹೆಕ್ಟೇರ್ ಆಗಿದ್ದು ರಾಷ್ಟ್ರದ ಸರಾಸರಿ ೧.೫೭ ಹೆಕ್ಟೇರ್‌ಗಿಂತ ಮೇಲಿದೆ. ದೇಶದ ಆಹಾರ ಬೆಳೆಯುವ ಪ್ರದೇಶದ ಶೇ. ೫.೯ರಷ್ಟು ಹೊಂದಿರುವ ಕರ್ನಾಟಕ, ಆಹಾರೋತ್ಪಾದನೆಯಲ್ಲಿ ಶೇ. ೪.೭ರಷ್ಟು ಪಾಲಿರುವುದು ನಮ್ಮ ವೈಫಲ್ಯಕ್ಕೆ ಸಾಕ್ಷಿ ಆಗಿದೆ. ಖ್ಯಾತ ಅರ್ಥಶಾಸ್ತ್ರಜ್ಞ ಡಾ|| ಪಿ. ಆರ್. ಬ್ರಹ್ಮಾನಂದ ಅವರ ದೃಷ್ಟಿಯಲ್ಲಿ ಕರ್ನಾಟಕವು ಸುಮಾರು ಕಾಲು ಶತಮಾನದಿಂದ ಕೃಷಿ ಕ್ಷೇತ್ರದಲ್ಲಿ ಸ್ಥಗಿತತೆ ಅನುಭವಿಸುತ್ತಿದೆ. ಇಂತಹ ಸ್ಥಗಿತತೆಯಿಂದ ಆರ್ಥಿಕತೆಯನ್ನು ಬಿಡುಗಡೆಗೊಳಿಸುವ ಯಾವ ಕ್ರಮಗಳೂ ಯಶಸ್ವಿಯಾಗಿಲ್ಲ.

ಇಷ್ಟು ವರ್ಷಗಳು ಕಳೆದ ನಂತರವೂ ಕೃಷಿ ಕ್ಷೇತ್ರದ ಮೂಲಭೂತ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಾಗಿಲ್ಲ. ಒಟ್ಟು ಬಿತ್ತನೆ ಮಾಡುತ್ತಿರುವ ಭೂಮಿಯಲ್ಲಿ ಶೇ. ೧೫ ಪ್ರದೇಶದಲ್ಲಿ ಮಾತ್ರ ೨ ಬೆಳೆ ತೆಗೆಯಲಾಗುತ್ತಿದೆ. ಇದು ರಾಷ್ಟ್ರದ ಸರಾಸರಿ ಶೇ. ೩೦ಕ್ಕೆ ಹೋಲಿಸಿದರೆ ತೀರ ಕೆಳಗಿದೆ. ರಾಷ್ಟ್ರದ ಸರಾಸರಿ ನೀರಾವರಿ ಶೇ. ೩೮.೬ ಇದ್ದರೆ ಕರ್ನಾಟಕದಲ್ಲಿ ಶೇ. ೨೩.೭ ಮಾತ್ರ. ಪಕ್ಕದ ರಾಜ್ಯಗಳಾದ ತಮಿಳುನಾಡಿನಲ್ಲಿ ಶೇ. ೪೬ ಮತ್ತು ಆಂಧ್ರದಲ್ಲಿ ಶೇ. ೪೨ರಷ್ಟು ಆಗಿದೆ. ಅಂತರಜಲ ಬಳಕೆಯಲ್ಲೂ ಕರ್ನಾಟಕ ಹಿಂದಿದೆ. ತಮಿಳುನಾಡು ಶೇ. ೪೭ರಷ್ಟು ಅಂತರಜಲ ಬಳಸುತ್ತಿದ್ದರೆ, ಕರ್ನಾಟಕ ಶೇ. ೩೪ರಷ್ಟು ಮಾತ್ರ ಬಳಸುತ್ತಿದೆ. ರಸಗೊಬ್ಬರದ ಬಳಕೆಯೂ ನಮ್ಮಲ್ಲಿ ಪ್ರತಿ ಹೆಕ್ಟೇರ್‌ಗೆ ೬೪.೪ ಕೆ.ಜಿ.ಗಳಿದ್ದು ಆಂಧ್ರದಲ್ಲಿ ೧೧೪, ತಮಿಳುನಾಡಿನಲ್ಲಿ ೧೧೭ ಕೆ.ಜಿ.ಗಳಿದ್ದು ರಾಷ್ಟ್ರೀಯ ಸರಾಸರಿ ೬೮ ಕೆ.ಜಿ. ಆಗಿದೆ. ಬಂಜರು ಭೂಮಿಯನ್ನು ಬಳಸುವ ಪ್ರಯತ್ನ ಇನ್ನೂ ಪ್ರಾರಂಭವೇ ಆಗಿಲ್ಲ.

ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕೃಷಿರಂಗಕ್ಕೆ ದೊಡ್ಡ ಸವಾಲೆಂದರೆ ಉದಾರೀಕರಣ. ವಿಶ್ವವಾಣಿಜ್ಯ ಸಂಘಟನೆಯ ಒಪ್ಪಂದದ ಪರಿಣಾಮವಾಗಿ ಮುಕ್ತ ಆಮದು ಅನಿವಾರ್ಯವಾಗಿದೆ. ಕಡಿಮೆ ಬೆಲೆಗೆ ಖಾದ್ಯ ತೈಲಗಳನ್ನು ಆಮದು ಮಾಡಿಕೊಂಡ

**೧೯೬೦-೧೯೯೯ರ ಅವಧಿಯಲ್ಲಿ ಒಟ್ಟು ಬೇಸಾಯಕ್ಕೆ ಒಳಗಾದ ಪ್ರದೇಶದಲ್ಲಿ ಪ್ರತಿ ಒಂದು ಬೆಳೆಯ ಬೇಸಾಯವಾದ ಪ್ರದೇಶದ ಶೇಕಡಾ ಪಾಲು** *(ವಿಸ್ತೀರ್ಣ ಸಾವಿರ ಹೆಕ್ಟೇರುಗಳಲ್ಲಿ)*

| ಕ್ರ. ಸಂ. | ಬೆಳೆಗಳು | ೧೯೬೦-೬೧ | | ೧೯೭೦-೭೧ | | ೧೯೮೦-೮೧ | | ೧೯೮೯-೯೦ | | ೧೯೯೮-೯೯ | |
|---|---|---|---|---|---|---|---|---|---|---|---|
| | | ವಿಸ್ತೀರ್ಣ | ಶೇ. | ವಿಸ್ತೀರ್ಣ | ಶೇ. | ವಿಸ್ತೀರ್ಣ | ಶೇ. | ವಿಸ್ತೀರ್ಣ | ಶೇ. | ವಿಸ್ತೀರ್ಣ | ಶೇ. |
| ೧. | ಭತ್ತ | ೧,೦೨೮ | ೯.೭ | ೧,೧೭೦ | ೧೦.೭ | ೧,೧೧೪ | ೧೦.೫ | ೧,೧೮೩ | ೯.೮ | ೧,೪೨೭ | ೧೩.೨ |
| ೨. | ಜೋಳ | ೨,೯೬೯ | ೨.೮ | ೨,೨೨೪ | ೨೦.೪ | ೧,೯೯೧ | ೧೮.೭ | ೨,೩೩೯ | ೧೯.೩ | ೧,೮೪೯ | ೧೭.೧ |
| ೩. | ರಾಗಿ | ೯೯೬ | ೯.೪ | ೧,೦೬೫ | ೯.೮ | ೧,೦೫೭ | ೯.೯ | ೧,೧೬೭ | ೯.೬ | ೧,೦೩೦ | ೮.೯ |
| ೪. | ಮುಸುಕಿನ ಜೋಳ | ೧೧ | ೦.೧ | ೬೩ | ೦.೬ | ೧೫೭ | ೧.೫ | ೨೫೩ | ೨.೧ | ೫೧೨ | ೫.೧ |
| ೫. | ಸಜ್ಜೆ | ೫೦೦ | ೪.೭ | ೫೬೨ | ೫.೨ | ೫೬೪ | ೫.೩ | ೫೧೪ | ೪.೨ | ೪೧೭ | ೩.೯ |
| ೬. | ಗೋಧಿ | ೩೨೪ | ೩.೧ | ೩೪೩ | ೩.೧ | ೩೨೨ | ೩.೦ | ೨೪೮ | ೨.೦ | ೨೬೯ | ೨.೩ |
| | ಒಟ್ಟು ಏಕದಳ ಧಾನ್ಯ ಬೆಳೆಗಳು | ೬,೨೭೩ | ೫೯.೨ | ೫,೯೭೧ | ೫೪.೮ | ೫,೫೭೩ | ೫೨.೩ | ೫,೯೦೯ | ೪೮.೮ | ೫,೫೯೬ | ೫೦.೨ |
| ೭. | ತೊಗರಿ | ೨೯೬ | ೨.೮ | ೩೦೪ | ೨.೮ | ೩೩೬ | ೩.೨ | ೪೮೨ | ೪.೦ | ೪೭೫ | ೪.೧ |
| ೮. | ಕಡಲೆ | ೧೫೮ | ೧.೫ | ೧೬೩ | ೧.೫ | ೧೪೦ | ೧.೩ | ೨೨೪ | ೧.೮ | ೩೫೫ | ೩.೨ |
| | ಒಟ್ಟು ಬೇಳೆಕಾಳು ಬೆಳೆಗಳು | ೧,೩೦೬ | ೧೨.೩ | ೧,೪೪೫ | ೧೩.೩ | ೧,೫೩೧ | ೧೪.೪ | ೧,೬೪೭ | ೧೩.೬ | ೧,೮೧೯ | ೧೫.೪ |
| | ಒಟ್ಟು ಎಣ್ಣೆ ಬೀಜಗಳು | ೧,೨೪೭ | ೧೧.೮ | ೧,೩೯೮ | ೧೨.೮ | ೧,೨೫೧ | ೧೧.೭ | ೨,೨೬೫ | ೧೮.೭ | ೧,೬೭೦ | ೧೪.೩ |
| ೯. | ಹತ್ತಿ | ೯೮೪ | ೯.೩ | ೧,೧೪೨ | ೧೦.೫ | ೧,೦೦೨ | ೯.೫ | ೬೯೭ | ೫.೮ | ೮೦೯ | ೭.೧ |
| ೧೦. | ಕಬ್ಬು | ೭೨ | ೦.೭ | ೧೦೪ | ೧.೦ | ೧೫೪ | ೧.೪ | ೨೬೫ | ೨.೨ | ೩೩೮ | ೩.೨ |

ಮೂಲ : ೧೯೬೦-೯೦ರ ಅವಧಿಯಲ್ಲಿ ಪ್ರಮುಖ ಬೆಳೆಗಳ ವಿಸ್ತೀರ್ಣ, ಇಳುವರಿ ಮತ್ತು ಉತ್ಪಾದನೆಯ ಪ್ರವೃತ್ತಿಗಳು. ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

೧೯೬೦-೯೯ರ ಅವಧಿಯಲ್ಲಿ ಏಕದಳ ಧಾನ್ಯಗಳು, ಬೇಳೆಕಾಳುಗಳು ಮತ್ತು ಎಣ್ಣೆ ಬೀಜಗಳ ಉತ್ಪಾದನೆಯಲ್ಲಿ ಪ್ರತಿ ಒಂದು ಬೆಳೆಯ ಶೇಕಡಾ ಪಾಲು (ಉತ್ಪಾದನೆ ಸಾವಿರ ಟನ್ನುಗಳಲ್ಲಿ)

| ಕ್ರ. ಸಂ. | ಬೆಳೆಗಳು | ೧೯೬೦-೬೧ | | ೧೯೭೦-೭೧ | | ೧೯೮೦-೮೧ | | ೧೯೮೯-೯೦ | | ೧೯೯೮-೯೯ | |
|---|---|---|---|---|---|---|---|---|---|---|---|
| | | ಉತ್ಪಾದನೆ | ಶೇ. | ಉತ್ಪಾದನೆ | ಶೇ. | ಉತ್ಪಾದನೆ | ಶೇ. | ಉತ್ಪಾದನೆ | ಶೇ. | ಉತ್ಪಾದನೆ | ಶೇ. |
| ೧. | ಭತ್ತ | ೧,೩೨೮ | ೩೭.೧ | ೨,೦೦೦ | ೩೮.೨ | ೨,೨೫೮ | ೩೯.೫ | ೨,೩೭೩ | ೩೬.೪ | ೩,೬೫೭ | |
| ೨. | ಜೋಳ | ೧,೧೫೪ | ೩೨.೪ | ೧,೫೬೫ | ೨೯.೯ | ೧,೫೦೬ | ೨೬.೪ | ೧,೬೧೧ | ೨೪.೭ | ೧,೬೪೩ | |
| ೩. | ರಾಗಿ | ೭೫೪ | ೨೧.೧ | ೮೯೨ | ೧೭.೧ | ೧,೦೬೪ | ೧೮.೬ | ೧,೩೩೧ | ೨೦.೪ | ೧,೭೩೪ | |
| ೪. | ಮುಸುಕಿನ ಜೋಳ | ೧೨ | ೦.೩ | ೨೧೭ | ೪.೨ | ೩೮೧ | ೬.೭ | ೭೦೯ | ೧೦.೯ | ೧,೬೭೧ | |
| ೫. | ಸಜ್ಜೆ | ೧೨೯ | ೩.೬ | ೨೧೧ | ೪.೦ | ೧೯೨ | ೩.೪ | ೨೮೧ | ೪.೩ | ೫೫೩ | |
| ೬. | ಗೋಧಿ | ೭೭ | ೨.೨ | ೧೩೦ | ೨.೫ | ೧೭೪ | ೩.೧ | ೧೨೫ | ೧.೯ | ೨೧೯ | |
| | ಒಟ್ಟು ಏಕದಳ ಧಾನ್ಯ ಬೆಳೆಗಳು | ೩,೫೭೮ | — | ೫,೨೩೫ | — | ೫,೭೧೪ | — | ೬,೫೧೨ | — | ೯,೨೪೯ | |
| ೭. | ತೊಗರಿ | ೯೨ | ೨೬.೧ | ೧೫೩ | ೨೯.೯ | ೧೨೫ | ೨೫.೬ | ೧೮೨ | ೩೩.೩ | ೨೨೧ | |
| ೮. | ಕಡಲೆ | ೫೫ | ೧೫.೬ | ೭೬ | ೧೪.೯ | ೬೩ | ೧೨.೯ | ೭೫ | ೧೩.೭ | ೨೦೩ | |
| | ಒಟ್ಟು ಬೇಳೆಕಾಳು ಬೆಳೆಗಳು | ೩೫೨ | — | ೫೧೧ | — | ೪೮೮ | — | ೫೪೬ | — | ೭೪೭ | |
| | ಒಟ್ಟು ಎಣ್ಣೆ ಬೀಜಗಳು | ೫೧೦ | — | ೮೭೫ | — | ೬೫೦ | — | ೧,೩೮೬ | — | ೧,೧೯೩ | |
| ೯. | ಹತ್ತಿ ** | ೩೮೨ | — | ೫೭೦ | — | ೫೯೭ | — | ೮೮೭ | — | ೯೭೬ | |
| ೧೦. | ಕಬ್ಬು | ೫,೧೮೪ | — | ೮,೧೦೬ | — | ೧೨,೧೨೭ | — | ೨೧,೦೮೮ | — | ೩೪,೭೭೧ | |

ಮೂಲ : ೧೯೬೦-೯೦ರ ಅವಧಿಯಲ್ಲಿ ಪ್ರಮುಖ ಬೆಳೆಗಳ ವಿಸ್ತೀರ್ಣ ಮತ್ತು ಉತ್ಪಾದನೆಯ ಪ್ರವೃತ್ತಿಗಳು. ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

** ಹತ್ತಿಯ ಉತ್ಪಾದನೆ ೧೭೦ ಕಿ.ಗ್ರಾಂ.ಗಳ ಸಾವಿರ ಬೇಲುಗಳಲ್ಲಿ.

ಪರಿಣಾಮ ತೈಲಬೀಜಗಳ ಬೆಲೆ ಕುಸಿದು ರೈತ ಸಮುದಾಯ ತೊಂದರೆಗೆ ಸಿಲುಕಿದೆ. ಅಡಕೆ, ಕಾಫಿ ಬೆಲೆ ಪಾತಾಳಕ್ಕಿಳಿದು ಬೆಳೆಗಾರರು ಸಂಕಷ್ಟಕ್ಕೆ ಸಿಲುಕಿದ್ದಾರೆ. ನುಸಿಪೀಡೆ ರೋಗದಿಂದ ತೆಂಗು ನಾಶವಾಗಿದೆ. ಬೆಳೆದ ತರಕಾರಿಗಳ ಸಂರಕ್ಷಣೆಗೆ, ಸಾಗಾಣಿಕೆಗೆ ಸೂಕ್ತ ವ್ಯವಸ್ಥೆ ಇಲ್ಲದೆ ಬೆಳೆದ ತರಕಾರಿಗಳನ್ನು ರಸ್ತೆಗೆ ಚೆಲ್ಲಿ ಪ್ರತಿಭಟಿಸುವ ಹಂತಕ್ಕೆ ರೈತ ತಲುಪಿದ್ದಾನೆ. ಒಟ್ಟಿನಲ್ಲಿ ರೈತ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ಕಂಗಾಲಾಗಿದ್ದಾನೆ. ರೈತರು ಸಾಲದ ಹೊರೆಯಿಂದ ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿ ಉದ್ಭವಿಸಿದೆ. ಈ ಪರಿಸ್ಥಿತಿಯಿಂದ ಹೊರಬರಬೇಕಾದರೆ ಜಾಗತಿಕ ಮಟ್ಟದ ಬೇಡಿಕೆಯನ್ನು ಗುರುತಿಸುವ ಕೆಲಸ ಆಗಬೇಕು. ಮಾರಾಟ ಮತ್ತು ಮಾಹಿತಿ ಜಾಲವನ್ನು ಬಲಪಡಿಸಬೇಕು.

**ಸದೃಢ ಹಾದಿಯಲ್ಲಿ ತೋಟಗಾರಿಕೆ**

ಕರ್ನಾಟಕವು ಆಹಾರ ಧಾನ್ಯಗಳನ್ನು ಬೆಳೆಯುವುದರಲ್ಲಿ ಹಿಂದಿದ್ದರೂ, ತೋಟಗಾರಿಕೆಯಲ್ಲಿ ರಾಷ್ಟ್ರಕ್ಕೆ ಮಾದರಿಯಾಗಿದೆ. ರಾಜ್ಯದಲ್ಲಿ ತೋಟಗಾರಿಕೆ ಬೆಳೆಗಳನ್ನು ೧೫.೮ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದೆ. ವಾರ್ಷಿಕ ಉತ್ಪನ್ನ ೧೨೫ ಟನ್‌ಗಳಷ್ಟಿದೆ. ಇದರ ಮೌಲ್ಯ ೫೦೦೦ ಕೋಟಿ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ರಾಜ್ಯದ ಸಾಗುವಳಿಯ ಶೇ. ೧೩ರಷ್ಟು ಪ್ರದೇಶವನ್ನು ಮಾತ್ರ ವ್ಯಾಪಿಸಿರುವ ತೋಟಗಾರಿಕೆಯಿಂದ ಬರುತ್ತಿರುವ ಆದಾಯವು ಕೃಷಿ ಕ್ಷೇತ್ರದ ಒಟ್ಟು ಆದಾಯದಲ್ಲಿ ಶೇ. ೪೦ರಷ್ಟಿದೆ.

ಪಾಠ

ಊರಿನ ಎಲ್ಲ ಗಡಿಯಾರಗಳೂ
ತಟ್ಟನೆ ನಿಂತುಬಿಟ್ಟವು
ಸಮಯವನ್ನು ನಿಲ್ಲಿಸುತ್ತೇವೆಂದು.
ಅಲಾರಾಂ ಇಟ್ಟುಕೊಂಡಿರದಿದ್ದರೂ
ಸೂರ್ಯ
ಬೆಳ್ಳಿ ಬೆಳಕ ಹೊತ್ತು ತಂದ
ಕಾಲದ ಮುಂದೆ ಯಾರು ಎಂದ !?



ಡಿ. ಎಸ್. ರಾಮಸ್ವಾಮಿ
ಭಾರತೀಯ ಜೀವವಿಮಾ ನಿಗಮ,
ಅರಸೀಕೆರೆ-೫೭೩ ೧೦೩, ಹಾಸನ ಜಿಲ್ಲೆ

ತೋಟಗಾರಿಕೆಯ ಬೆಳೆ ವಿಸ್ತೀರ್ಣ ಪ್ರತಿ ವರ್ಷ ಶೇ. ೩.೫ರಷ್ಟು ಹೆಚ್ಚುತ್ತಿದೆ. ಹೀಗೆ ವಿಸ್ತರಿಸುತ್ತಾ ಹೋದರೆ ಮಾರುಕಟ್ಟೆಯನ್ನು ಹಿಡಿಯುವುದು ಕಷ್ಟವಾಗುತ್ತದೆ. ಸರ್ಕಾರ ಬೆಳೆಯ ವಿಸ್ತರಣೆ ಮತ್ತು ಬೆಳೆಗಳ ಬಗ್ಗೆ ನಿಯಂತ್ರಣ ಹೊಂದದಿದ್ದರೆ ಭವಿಷ್ಯತ್ತು ಸುಂದರವಾಗಿರಲಾರದು. ಈ ನಿಟ್ಟಿನಲ್ಲಿ ಸರ್ಕಾರ ತುರ್ತು ಗಮನ ನೀಡುವ ಅಗತ್ಯವಿದೆ.

ರಾಜ್ಯದಲ್ಲಿ ಮಾರುಕಟ್ಟೆಯ ಸ್ಥಿತ್ಯಂತರದ ಬಗ್ಗೆ ಮಾರ್ಗದರ್ಶನವಿಲ್ಲದಿರುವುದು ಅಗತ್ಯವಿರುವಷ್ಟು ವೈಜ್ಞಾನಿಕವಾದ ಮಾರುಕಟ್ಟೆಯಿಲ್ಲದಿರುವುದು, ತೋಟಗಾರಿಕೆಯ ಉತ್ಪನ್ನಗಳು ಬೇಗನೆ ಕೊಳೆತು ಹಾಳಾಗುತ್ತಿವೆ. ಅವುಗಳನ್ನು ತಡೆಯಲು ವೈಜ್ಞಾನಿಕ ಸಾಗಣೆ ಸೌಕರ್ಯ, ಶೀತಲ ಗೃಹ, ವ್ಯವಸ್ಥಿತ ಸಂಗ್ರಹ ಕಣಜಗಳು ಅತ್ಯಗತ್ಯ. ಆದರೆ, ಅವುಗಳ ಕೊರತೆ ತೀವ್ರವಾಗಿದೆ. ಇದರಾಚೆಗೆ ಕಾನೂನಿನ ಚೌಕಟ್ಟಿನಲ್ಲಿ ತಡೆಯಲು ಸಾಧ್ಯವಿಲ್ಲದ ದಲ್ಲಾಳಿಗಳ ಹಾವಳಿ. ಮಧ್ಯವರ್ತಿಗಳ ಶೋಷಣೆಯಿಂದಾಗಿ ರೈತನಿಗೆ ಸೂಕ್ತ ಪ್ರತಿಫಲ ದೊರೆಯುತ್ತಿಲ್ಲ. ಇದು ರೈತ ಸಮುದಾಯದಲ್ಲಿ ಹಲವು ಅಹಿತಕರ ಬೆಳವಣಿಗೆಗೆ ಎಡೆಮಾಡಿ ಕೊಡುತ್ತಿದೆ.

ಕರ್ನಾಟಕದಲ್ಲಿ ಪುಷ್ಪೋದ್ಯಮ ಉತ್ತಮ ಆರಂಭ ಮಾಡಿತ್ತು. ಜಟಿಲವಾದ ರಫ್ತು ನಿಯಮ ವಿಮಾನ ಸಾಗಣೆ ಕೊರತೆಯಿಂದ ವಿದೇಶದ ಮಾರುಕಟ್ಟೆ ಹಿಡಿಯಲಾಗಲಿಲ್ಲ. ಹರಾಜು ಪ್ರಾಂಗಣ, ಸೂಕ್ತ ಸಾಗಣೆ ವ್ಯವಸ್ಥೆಯಿಲ್ಲದೆ ಸ್ಥಳೀಯ ಮಾರುಕಟ್ಟೆ ನಿರೀಕ್ಷಿತವಾದಷ್ಟು ಬೆಳೆದಿಲ್ಲ. ಸರ್ಕಾರ ಈ ಕ್ಷೇತ್ರಕ್ಕೆ ಆದ್ಯತೆ ನೀಡಿದರೆ ಸಾಕಷ್ಟು ಪ್ರಗತಿ ಸಾಧಿಸಬಹುದು.

ಕೃಷಿ ಕ್ಷೇತ್ರದ ಬಗ್ಗೆ ೧೯೫೬ರಿಂದ ಮೂಲ ಮಾಹಿತಿಗಳನ್ನು ಮೇಲೆ ನೀಡಲಾಗಿದೆ. ಇವು ಎಲ್ಲವನ್ನೂ ಹೇಳುತ್ತವೆ. ಇವು ಸರ್ಕಾರವೇ ಪ್ರಕಟಿಸಿರುವ ಮಾಹಿತಿಗಳು. ಕೃಷಿ ಕ್ಷೇತ್ರದ ಹಿನ್ನಡೆಯ ಪರಿಣಾಮ ನೇರವಾಗಿ ಜನರನ್ನು ತಟ್ಟುತ್ತದೆ. ಕೃಷಿ ಕಡೆಗಣಿಸಿದ ರಾಷ್ಟ್ರ ತಾಂತ್ರಿಕವಾಗಿ ದೊಡ್ಡ ಸಾಧನೆ ಮಾಡಿದರೂ ಉಳಿಯಲಾಗಲಿಲ್ಲ.

ರಾ. ನಂ. ಚಂದ್ರಶೇಖರ
ಶ್ರೀ ಲಕ್ಷ್ಮೀ ಕೆಮಿಕಲ್ಸ್, ನಂ. ೬, ರಾಘವೇಂದ್ರ ಕಾಂಪ್ಲೆಕ್ಸ್, ೨ನೇ ಅಡ್ಡರಸ್ತೆ, ಸಿ. ಕೆ.ಜಿ. ಗಾರ್ಡನ್, ಬೆಂಗಳೂರು-೨೭

# ಸಂಪೂರ್ಣ ಕ್ರಾಂತಿಯ ತಾತ್ವಿಕ ಚಿಂತನೆ

**ಜಿಡ್ಡು** ಕೃಷ್ಣಮೂರ್ತಿಯವರು ಒಮ್ಮೆ ನನ್ನನ್ನು ಕೇಳಿದರು, 'ಭಾರತೀಯ ಮನಸ್ಸೆಂಬುದಿದೆಯೇ' ಎಂದು. ಅದಕ್ಕೆ ತಕ್ಷಣ ಉತ್ತರ ಕೊಡಲು ನನಗೆ ಸಾಧ್ಯವಾಗಲಿಲ್ಲ. ಆ ಪ್ರಶ್ನೆ ಅನೇಕ ಬಾರಿ ನನ್ನ ಮನಸ್ಸನ್ನು ಕಾಡಿದೆ.

ನಮಗೆ ಸ್ವಾಭಾವಿಕ ಮನಸ್ಸು ಇದೆಯೇ ಎಂಬ ಪ್ರಶ್ನೆ ಇದರಿಂದ ಉದ್ಭವಿಸುತ್ತದೆ. ನಾನು ನಾಗಪುರ ದಿಂದ ದೆಹಲಿಗೆ ಹೋಗಬೇಕಾದಾಗಲೆಲ್ಲ ನನ್ನ ಸ್ನೇಹಿತರಾದ ಎಚ್. ವಿ. ಕಾಮತ್ ಅವರ ಜೊತೆಗೆ ಅವರ ಕಾರಿನಲ್ಲಿ ಹೋಗುತ್ತಿದ್ದೆ. ಇಂತಹ ಒಂದು ಸಂದರ್ಭದಲ್ಲಿ ನಾವು ಸ್ವಲ್ಪ ಕಾಲ ಆಗ್ರಾದಲ್ಲಿ ತಂಗಬೇಕಾಗಿ ಬಂತು. ಅವರು ನನಗೆ ತಮ್ಮ ಕಾರ್ ಡ್ರೈವರ್‌ನ್ನು ತಾಜಮಹಲ್‌ಗೆ ಕರೆದುಕೊಂಡು ಹೋಗಲು ಹೇಳಿದರು. ನಾನು ಕರೆದು ಕೊಂಡು ಹೋದೆ. ನಾನು ವಿದ್ಯಾವಂತ ಅಂತ ಜನ ಭಾವಿಸಿದ್ದಾರೆ. ಅವನು ನಿರಕ್ಷರಕುಕ್ಷಿಯಾಗಿದ್ದರೂ ಬುದ್ಧಿಶಾಲಿಯಾಗಿದ್ದ. ತಾಜ ಮಹಲನ್ನು ಸಮೀಪಿಸಿದಂತೆ ಡ್ರೈವರ್ ನನ್ನನ್ನು ಕುರಿತು 'ಈ ಮಹಲ್‌ನಲ್ಲಿ ಯಾರು ವಾಸವಾಗಿದ್ದಾರೆ?' ಎಂದು ಕೇಳಿದ. ನಾನು ವಿದ್ಯಾವಂತ ನಾಗಿದ್ದುದರಿಂದ ನನಗೆ ಈ ಪ್ರಶ್ನೆಯೇ ಹೊಳೆದಿರಲಿಲ್ಲ. ಏಕೆಂದರೆ ಈ ಪ್ರಶ್ನೆಯನ್ನು ಕೇಳಲು ಒಂದು ಸ್ವತಂತ್ರ ಮನಸ್ಸಿಗೆ ಮಾತ್ರ ಸಾಧ್ಯ. 'ಇಲ್ಲ' ಎಂದೆ. 'ಹಾಗಿದ್ದ ಮೇಲೆ ಇದು ಹೋಟೆಲೇ?' ಅಂದ. ಮತ್ತೆ 'ಇಲ್ಲ' ಎಂದೆ. 'ಹಾಗಿದ್ದ ಮೇಲೆ ಇದು ಯಾವ ಕಟ್ಟಡ ಹೇಳಿ' ಎಂದ. ನಾನು 'ಇದು ಒಂದು ದೊಡ್ಡ ಗೋರಿ, ಹೆಣ ಹೂಳುವ ಗುಹೆ' ಎಂದೆ. 'ಇದು ಪ್ರಾರ್ಥನಾ ಸಮಯ. ಓ ದೇವರೇ ನನ್ನನ್ನು ಇಲ್ಲಿಗೇಕೆ ಕರೆತಂದೆ' ಎಂದು ಉದ್ಗಾರ ತೆಗೆದ. ಅವನದು ಒಂದು ಸ್ವಾಭಾವಿಕ ಮನಸ್ಸು.

ಈ ವಿಶ್ವವನ್ನು ನಾವು ಏನು ಮಾಡಬಯಸಿದ್ದೇವೆ ? ಹೆಣ ಹೂಳುವ ಗೋರಿಯನ್ನಾಗಿಯೇ ? ಮಾನವೀಯತೆ ಯಿಂದ ಕೂಡಿದ ಸುಂದರವಾದ, ಪರಿಪೂರ್ಣ ವಾದ, ಸ್ವಚ್ಛವಾದ, ಮನುಷ್ಯ ವಾಸಕ್ಕೆ ಯೋಗ್ಯವಾದ ಸ್ಥಳವನ್ನಾಗಿಯೇ ? ಕ್ರಾಂತಿಕಾರಿಗಳು ತಮ್ಮಲ್ಲಿ ತಾವೇ ಈ ಪ್ರಶ್ನೆಯನ್ನು ಹಾಕಿಕೊಳ್ಳಬೇಕು. ಕ್ರಾಂತಿಕಾರಿಯ ಮನಸ್ಸಿಗೆ ಹೊಳೆಯಬೇಕಾದ ಮೊದಲ ಪ್ರಶ್ನೆ ಇದು. ಈ ನಾಡಿನ ಯುವಕರಲ್ಲಿ ಕ್ರಾಂತಿಕಾರಿ ಮನೋಭಾವ ಇದೆಯೆಂದು ನಾನು ಭಾವಿಸುತ್ತೇನೆ. ಏಕೆಂದರೆ ಹೆಚ್ಚಾಗಿ ಯುವಕರನ್ನು ಕುರಿತು ಹೇಳುವ ಮಾತುಗಳಿವು.

ನನ್ನ ಈ ಮುದಿ ವಯಸ್ಸಿನಲ್ಲಿ, ಪೂರ್ಣವಾಗಿ ಅರಳಿರುವ ಈ ಜೀವಿಗಳನ್ನು ಕಾಣುವುದು ನಿಜಕ್ಕೂ ತೃಪ್ತಿ ಕೊಡುತ್ತದೆ. ಯುವಕರು ಎಂದರೇನೇ ಜೀವನ ಅರಳಿದ ವರು, ವಿಕಸಿತ ಚೇತನ ಎಂದು ನಾನು ನಂಬಿದ್ದೇನೆ. ಅದರಿಂದಲೇ ಯುವಕರನ್ನು ಕಂಡರೆ ನಾನು ಮೋಹಿತ ನಾಗುತ್ತೇನೆ. ನಮಗೆ ಯುವಕರನ್ನು ಬಿಟ್ಟು ಯಾರನ್ನೂ ಅವಲಂಬಿಸಲು ಸಾಧ್ಯವಿಲ್ಲ. ಭವಿಷ್ಯ ಅವರದು. ಅವರ ಮುಂದೆ ದೀರ್ಘವಾದ ಕಾಲದ ಹರಹು ಇದೆ. ನನ್ನ ಕಾಲವೂ ಇತ್ತು. ಈಗ ನಾನು ನಿವೃತ್ತನಾಗಲು ಮಾತ್ರ ಯೋಗ್ಯ.

ಇದು ನನಗೆ ಸಾಧ್ಯವೇ ? ಎಂದು ಯಾವ ಕ್ರಾಂತಿ ಕಾರಿಯೂ ಕೇಳುವುದಿಲ್ಲ. ರಾಜಕೀಯದವನು ಈ ಪ್ರಶ್ನೆ ಕೇಳುತ್ತಾನೆ. ಅದಕ್ಕೆ ಕಾರಣ ರಾಜಕೀಯ ಎಂಬುದು ಸಂಭವನೀಯ ಕಲೆ. ಹಾಗಿದ್ದ ಮೇಲೆ ಕ್ರಾಂತಿ ಎಂದರೇನು ? ಅಸಂಭವನೀಯವಾದುದನ್ನು ಸಂಭವನೀಯ ಮಾಡುವ ಕಲೆಯೇ ಕ್ರಾಂತಿ. ಅದು ಒಂದು ಅದ್ಭುತ ವಾದ, ದಿವ್ಯವಾದ, ರಂಜಿತವಾದ ಸಾಹಸಕಾರ್ಯ. ನಮ್ಮ ಎಳೆವಯಸ್ಸಿನ ಯುವಕ ಯುವತಿಯರು ಈ ಹೊಸ ಮನ್ವಂತರದ ಹರಿಕಾರ ರಾಗುವರೆಂದು ನಾನು ಆಶಿಸುತ್ತೇನೆ.

### ಕ್ರಾಂತಿಕಾರಿ ಮನಸ್ಸೆಂದರೇನು ?

ಕ್ರಾಂತಿಕಾರಿ ಮನಸ್ಸಿನ ಮೊದಲನೆಯ ಆವಶ್ಯಕತೆ ತೆರೆದ ಮನಸ್ಸು. ಯಾವುದೇ ಪೂರ್ವ ಕಲ್ಪಿತ ಅಭಿಪ್ರಾಯ ಹೊಂದಿರದ ಮನಸ್ಸು - ಯಾವುದೇ ಒಂದು ಅಭಿ ಪ್ರಾಯಕ್ಕೆ, Dogmaಗೆ ಬದ್ಧವಾಗದ ಮನಸ್ಸು. ಅದು ಯಾರೋ ಹೇಳಿದ ಅಭಿಪ್ರಾಯವನ್ನು ವಿಚಾರ ಮಾಡದೆ ಒಪ್ಪಿಕೊಳ್ಳುವುದಿಲ್ಲ. ಅದು ಯಾವುದೇ ತತ್ವಕ್ಕೆ ಅಥವಾ ಯಾವನೇ ನಾಯಕನಿಗೆ ಅಧೀನವಾಗಿರುವುದಿಲ್ಲ. ತತ್ವ ಎನ್ನುವುದಾದರೂ ಏನು? ಅದು ಒಂದು ವ್ಯವಸ್ಥಿತ ವಿಚಾರ ಸರಣಿ ಹೆಪ್ಪುಗಟ್ಟಿದ ಅಭಿಪ್ರಾಯ. ಆಲೋಚನೆ ನಿಂತು ಹೋದ ಒಂದು ಪರಿಸ್ಥಿತಿ. ಯಾವಾಗ ಯೋಚನೆ ಮಾಡು ವುದು ನಿಂತು ಹೋಗುವುದೋ ಆಗ ತಿಳುವಳಿಕೆ ಅಂತ್ಯ ವಾಗುತ್ತದೆ. ಯಾವಾಗ ಇತರರ ಎಲ್ಲ ಅಭಿಪ್ರಾಯಗಳನ್ನು ಪರಾಭವಗೊಳಿಸುವ ದೃಷ್ಟಿ ಅದಕ್ಕಿರುವುದೋ ಆಗ ಅದನ್ನು ವೈಚಾರಿಕಾ ವೈಪರೀತ್ಯ ಎಂದೇ ಭಾವಿಸಬೇಕಾದೀತು.

ವ್ಯವಸ್ಥಾಬದ್ಧ ವಿಚಾರ ಆಕ್ರಮಣಕಾರಿ. ವ್ಯವಸ್ಥಾಬದ್ಧ ವಿಚಾರಸರಣಿ ಒಂದು 'ism'. ವ್ಯವಸ್ಥಾಬದ್ಧ ವಿಚಾರಸರಣಿ ಯಾವಾಗ ಅಧಿಕಾರ ಹಿಡಿಯಲು ಹೊರಡುವುದೋ ಆಗ ಅದು ದಕ್ಷ ಎನಿಸಿಕೊಳ್ಳುತ್ತದೆ.

ಯೋಚನಾಶಕ್ತಿ ನಿಂತ ನೀರಲ್ಲ. ಹರಿಯುವ ಪ್ರವಾಹ. ಆದ್ದರಿಂದ ನಮಗೆ ಕ್ರಾಂತಿ ಬೇಕಿದ್ದರೆ ನಮ್ಮ ಆಲೋಚನಾಶಕ್ತಿ ಬೆಳೆಯಬೇಕು. ನೀವು ಈ ಕ್ರಾಂತಿಯ ವಿಚಾರ ಮಾಡಲು ಜನತೆಯ ಹತ್ತಿರ ಹೋದಾಗ ಅವರ ಮುಂದೆ ನಿಮ್ಮ ಅಭಿಪ್ರಾಯಗಳನ್ನು ಮಂಡಿಸಬೇಡಿ. ಅವರೇ ಆಲೋಚನೆ ಮಾಡುವಂತೆ ಪ್ರಚೋದಿಸಿ. ಸಾಮಾನ್ಯ ಪೌರ ಪ್ರಜಾಪ್ರಭುತ್ವದಲ್ಲಿ ಪರಮಾಧಿಕಾರ ಉಳ್ಳವನು ಎಂಬುದರ ಅರಿವನ್ನು ಆತನಿಗೆ ಮಾಡಿಕೊಡಿ.

ಈಗ ಪೌರನ ಸ್ಥಾನ ಏನು ? ಈಗ ಅವನು ಸಮಾಜದಲ್ಲಿ ಕಳೆದುಹೋಗಿದ್ದಾನೆ. ಸಾಮಾನ್ಯ ಮನುಷ್ಯ ಅಲಕ್ಷ್ಯಕ್ಕೀಡಾಗಿದ್ದಾನೆ. ಈ ವಿಜ್ಞಾನ ಯುಗದಲ್ಲಿ ಮಾನವೀಯತೆ ಮಸಣವಾಗಿ ಪರಿವರ್ತನೆಗೊಂಡಿದೆ.

ದಾದಾ ಧರ್ಮಾಧಿಕಾರಿ

ನಾವು ಸವೆದ ದಾರಿಯಲ್ಲಿ ಸಾಗುವುದನ್ನು ಕೈಬಿಡ ಬೇಕು. ನಮ್ಮ ಗುರಿ ಮುಟ್ಟಲು ಬೇರೆ ಮಾರ್ಗಗಳನ್ನು ಹುಡುಕಬೇಕು. ನಮ್ಮ ಗುರಿಯಾದರೂ ಏನು ? ನಮ್ಮ ಗುರಿ ಮಾನವನ ಗೌರವ ಸ್ಥಾಪಿಸುವುದು. ನಮ್ಮ ದೇಶದಲ್ಲಿ ಮಾನವನನ್ನು ನಾವು ಪರಂಪರಾಗತವಾಗಿ ಅಪಮಾನಕ್ಕೆ ಗುರಿ ಮಾಡಿದ್ದೇವೆ. ಆಧ್ಯಾತ್ಮಿಕದ ಮಾತನ್ನು ನಾವು ಆಡಿದರೂ ನಮ್ಮ ಅಸಂಖ್ಯಾತ ಜನ ಸ್ವತಂತ್ರರಾಗುವುದಕ್ಕೆ ಬದಲು ಗುಲಾಮಗಿರಿಯಲ್ಲಿದ್ದಾರೆ. ಇದಕ್ಕೆ ಕಾರಣ, ನಾವು ಮನುಷ್ಯನ ಗೌರವವನ್ನು ಎತ್ತಿ ಹಿಡಿಯಲು ಎಂದೂ ಪ್ರಯತ್ನ ಮಾಡಿಲ್ಲ.

ನಮಗೆ ಸಮಗ್ರ ಕ್ರಾಂತಿ ಬೇಕಾಗಿದ್ದರೆ ನಾವು ಮೊದಲು ಭಾರತೀಯ ಮನಸ್ಸುಳ್ಳವರಾಗಬೇಕು. ವಿಶ್ವ ವಿದ್ಯಾನಿಲಯದಲ್ಲಿ ಓದುತ್ತಿರುವ ವಿದ್ಯಾರ್ಥಿ ವಿದ್ಯಾರ್ಥಿನಿ ಯರು ಬುದ್ಧಿ ಜೀವಿಗಳು ರಾಜಕೀಯದಲ್ಲಿರುವವರು Localismಗೆ, Multinationalismಗೆ, Regional particularismಗೆ ಹೊಡೆದಾಡುವುದನ್ನು ನೋಡಿದಾಗ ದಿಗ್ಭ್ರಮೆಯಾಗುತ್ತದೆ.

ಐವಾನ್ ಇಲ್ಲಿಚ್ 'Celebration of Awareness' ಎಂಬ ಪುಸ್ತಕ ಬರೆದಿದ್ದಾರೆ. ಈ Awareness ಶಬ್ದಕ್ಕೆ ಅರ್ಥ ಏನು? ಅದು ನಿಮ್ಮ ಪ್ರತ್ಯೇಕ ಸ್ವಂತಿಕೆಯನ್ನು ಸೂಚಿಸುತ್ತದೆ. ಈ ನಿಮ್ಮ ಸ್ವಂತಿಕೆ ನಿಮ್ಮನ್ನು ಪ್ರತ್ಯೇಕವಾಗಿ ಗುರುತಿಸುತ್ತದೆ.

### ಕ್ರಾಂತಿ ತರುವವರು ಯಾರು ?

ಯಾರು ತೀರ ತಳಸ್ತರದಲ್ಲಿದ್ದಾನೋ, ಯಾರಿಗೆ ಯಾವ ಅನುಕೂಲವೂ ಸಿಗುವ ಸಂಭವವಿಲ್ಲವೋ ಅವನ ಮೇಲ್ಮೆಗಾಗಿ ಈ ಕ್ರಾಂತಿ. ಈ ರಾಷ್ಟ್ರದಲ್ಲಿ ಕ್ರಾಂತಿ ಬೇಕೆನ್ನುವುದಾದರೆ ಇದನ್ನು ತರುವವರು ಯಾರು ? ಸರ್ಕಾರ ಕ್ರಾಂತಿ ತರಬಲ್ಲುದೇ ? ಹಣದ ಬಲವುಳ್ಳ ಮಂದಿ ಬಂಡವಾಳಶಾಹಿಗಳು ಈ ಕ್ರಾಂತಿ ತರುವರೇ ? ಅಥವಾ ಶಸ್ತ್ರಾಸ್ತ್ರಗಳನ್ನು ಹೊಂದಿರುವ ಸೈನಿಕರು ಕ್ರಾಂತಿ ತಂದಾರೇ ? ಬಂಡವಾಳಶಾಹಿ ಕ್ರಾಂತಿ ತರುವುದಾದರೆ ಅವನು ಈ ಕ್ರಾಂತಿಯನ್ನು ಕೊಂದೇಬಿಟ್ಟಾನು. ಸೈನಿಕ ಕ್ರಾಂತಿ ತಂದರೆ ಅಂತಹ ಕ್ರಾಂತಿ ಸೈನಿಕನ ಅಧೀನಕ್ಕೆ ಒಳಗಾಗುವುದು. ಸರ್ಕಾರವೇ ಕ್ರಾಂತಿಯನ್ನು ತರುವು ದಾದರೆ, ಆಗ ಸರ್ಕಾರದ ಪ್ರಭಾವ ಅಪಾಯಕಾರಿ ಮಟ್ಟ ಮುಟ್ಟೀತು. ಅದು ಆಗ ತನ್ನ ಪ್ರಜೆಗಳನ್ನೆಲ್ಲ ತನ್ನ ಹೊಟ್ಟೆಯಲ್ಲಿ ಅಡಗಿಸಿಟ್ಟೀತು. ಆದ್ದರಿಂದ ಯೋಗ್ಯವಾದ ಕ್ರಾಂತಿ ನಿಮಗೆ ಬೇಕಾಗಿದ್ದರೆ ನೀವು ಯುವಕರು ಈ ಪವಿತ್ರ ಕಾರ್ಯದಲ್ಲಿ ತೊಡಗಬೇಕು. ಯುವಕರ ಶಬ್ದ ಕೋಶದಲ್ಲಿ 'ಅಸಾಧ್ಯ', 'ಸೋಲು', 'ಹತಾಶೆ' ಎಂಬ ಶಬ್ದಗಳು ಇಲ್ಲವೇ ಇಲ್ಲ. ನಿಮಗೆ ವಿಫಲತೆಗಳು ಎದುರಾಗಬಹುದು. ಆದರೆ ವಿಫಲತೆ ಸೋಲಲ್ಲ. ವಿಫಲತೆ

ನಮ್ಮನ್ನು ಗುರಿಯತ್ತ ಕೊಂಡೊಯ್ಯುವ ಪ್ರೇರಕ ಶಕ್ತಿ.

ಈ ಕ್ರಾಂತಿಯ Content ಏನು ಎಂಬುದನ್ನು ಕುರಿತು ವಿಚಾರ ಮಾಡೋಣ. ನಮ್ಮದು ಔದ್ಯೋಗಿಕ ರಾಷ್ಟ್ರ ಅಲ್ಲ, ವ್ಯವಸಾಯ ಪ್ರಧಾನವಾದ ರಾಷ್ಟ್ರ. ನಮ್ಮ ದೊಡ್ಡ ಸಮಸ್ಯೆ ಹಸಿವಿನದು. ಹಸಿವನ್ನು ನೀಗಿಸಲು ಆಹಾರ ಪದಾರ್ಥ ಬೇಕು. ಕಾರ್ಖಾನೆಗಳಲ್ಲಿ ಉತ್ಪತ್ತಿಯಾಗುವ ಪದಾರ್ಥಗಳು ಹಸಿವನ್ನು ನೀಗಲಾರವು. ಆದ್ದರಿಂದ ನಾವು, ಆದ್ಯತೆಯ ಮೇಲೆ, ಭೂ ಕ್ರಾಂತಿಯ ವಿಚಾರ ಮಾಡಬೇಕು.

ಈ ಭೂಮಿ ಯಾರ ಒಡೆತನಕ್ಕೆ ಸೇರಿದ್ದು ? ಇದು ಉಳುವವನದಾಗಬೇಕು. ಉಳುವವನಿಗೆ ಸೇರಬೇಕು ಎಂದಾಕ್ಷಣ ಅದು ಅವನ Absolute ಮಾಲೀಕತ್ವಕ್ಕೆ ಹೋಗಬೇಕೆಂದು ಅರ್ಥವಲ್ಲ. ಭೂಮಿಯನ್ನು ಉಪಯೋಗಿಸಿಕೊಳ್ಳುವ ಹಕ್ಕು ಉಳುವವನದೇ ಎಂದು ಅರ್ಥೈಸ ಬೇಕು. ಖಾಸಗಿ ಆಸ್ತಿ ಎನ್ನುವುದಕ್ಕೂ, Absolute right ಎನ್ನುವುದಕ್ಕೂ ಬಹಳ ಅಂತರವಿದೆ. ಸ್ವಂತ ಆಸ್ತಿ ಎಂದರೆ ತನ್ನ ಜೀವನೋಪಾಯಕ್ಕಾಗಿ ಬಳಸಿಕೊಳ್ಳುವ ಆಸ್ತಿ. Absolute right ಎಂದರೆ ಅವನು ಅದನ್ನು ಪರಭಾರೆ ಮಾಡಬಹುದು ಭೋಗ್ಯ, ಗುತ್ತಿಗೆಗೆ ಕೊಡಬಹುದು ಎಂದೆಲ್ಲ ಆಗುತ್ತದೆ.

ಈಗ ಮನುಷ್ಯ ಮನುಷ್ಯನ ಸಂಬಂಧ ಕಡಿದು ಹೋಗುತ್ತಿದೆ. Property, Impropriety ಗೆ ಎಡೆ ಮಾಡುತ್ತಿದೆ. ಭೂಮಿ ಇರುವುದು ಉಳುವವನ ಅನುಕೂಲಕ್ಕೆ, ಸಮಾಜದ ಒಳಿತಿಗಾಗಿ. ಅದು ಯಾರೊಬ್ಬರ ಸ್ವತ್ತಾಗಬಾರದು. ದುಡಿದು ತಿನ್ನುವ ಎಲ್ಲರಿಗೂ ಭೂಮಿಯ ಮೇಲೆ ಹಕ್ಕಿರ ಬೇಕು. ದುಡಿಯುವ ಸಾಧನ ಭೂಮಿ. ಅದು ಮಾರಾಟದ ವಸ್ತುವಲ್ಲ. ಆಹಾರ ಸಮೃದ್ಧವಾಗಿ ಬೆಳೆಯಬೇಕು. ಬೆಳೆಯುವವನ ಹಸಿವನ್ನು ಅದು ನೀಗಬೇಕು. ಉಳಿದದ್ದನ್ನು ಅವನು ಸಮಾಜಕ್ಕೆ ಅರ್ಪಿಸಬೇಕು.

ಅಂದಮೇಲೆ ಗ್ರಾಮೀಣ ಸಣ್ಣ ರೈತರು, ಕೃಷಿ ಕಾರ್ಮಿಕರು ಇವರ ನೆರವಿನೊಂದಿಗೆ ಯುವಕರು ಈ ಕ್ರಾಂತಿ ಕಾರ್ಯ ಆರಂಭ ಮಾಡಬೇಕು.

ಕ್ರಾಂತಿ ಎಂದರೆ Dinner party ಅಲ್ಲ. ಚಿತ್ರ ಬರೆಯುವುದೂ ಅಲ್ಲ ಎಂದು ಮೋರ್ ಮಹಾಶಯ ಹೇಳಿದ್ದಾನೆ. ನೀವು ಲೆಕ್ಕವಿಲ್ಲದಷ್ಟು ಮುಷ್ಕರ ಹೂಡಬಹುದು, ಬಂದ್ ಮಾಡಿಸಬಹುದು. ಅಧಿಕಾರದಲ್ಲಿರುವವರನ್ನು ಕಿತ್ತು ಹಾಕಿ ಇನ್ನೊಂದು ಪಕ್ಷದವರನ್ನು ಅಧಿಕಾರದಲ್ಲಿ ಕೂಡಿಸಬಹುದು. ಅದರಿಂದ ಸರ್ಕಾರಗಳು ಬದಲಾದಾವೇ ಹೊರತು ಕ್ರಾಂತಿ ಆಗುವುದಿಲ್ಲ. ಸಮಾಜದ ಕೊನೆಯ ಮನುಷ್ಯನಿಗೂ ನ್ಯಾಯ ದೊರಕಿಸುವುದಕ್ಕಾಗಿ ಊಟದ ಹಕ್ಕು, ಉದ್ಯೋಗದ ಹಕ್ಕು, ದುಡಿಮೆಯ ಹಕ್ಕನ್ನು ಕೊಡಿಸುವುದಕ್ಕಾಗಿ ಭೂ ಕ್ರಾಂತಿ ಮೊದಲು ಆಗಬೇಕು. ಸಣ್ಣ ಹಿಡುವಳಿದಾರರನ್ನೂ, ನಿರ್ಗತಿಕರಾದ ವ್ಯವಸಾಯ ಕೂಲಿಗಾರರನ್ನೂ ಈ ಕ್ರಾಂತಿ' ಅನುಗೊಳಿಸುವುದೇ, ಸಮಗ್ರ ಕ್ರಾಂತಿಗೆ ದಾರಿ ಮಾಡುವ ಸುಲಭೋಪಾಯದ ಮೊದಲ ಹೆಜ್ಜೆ.

ಕನ್ನಡಕ್ಕೆ : ಎಚ್. ಎಸ್. ದೊರೆಸ್ವಾಮಿ
ನಂ. ೧೮/ಬಿ, ೭ನೇ ಅಡ್ಡ ರಸ್ತೆ, ಎನ್. ಆರ್. ಕಾಲೋನಿ
ಬೆಂಗಳೂರು - ೫೬೦೦೧೯

# ಹೋಮಿಯೋಪತಿಯಲ್ಲಿ ಕುಂಕುಮ ಕೇಸರಿ

''**ಪಂ**ಕಜಾ... ಅದೇನು ನಿದ್ದೇನೆ ನಿಂದು ? ಪಾಪ ಮಗು ಆಗ್ಲಿಂದ ಒಂದೇ ಸಮನೆ ಕೆಮ್ತಾ ಇದೆ. ಔಷಧಿ ಹಾಕ್ಬಾರ್ದೇ?'' ಅಜ್ಜಿ ಮಲಗಿದ್ದಲ್ಲಿಂದಲೇ ಗಟ್ಟಿಯಾಗಿ ಕೂಗಿ ಹೇಳಿದರು.

''ಆಗ್ಲೇ ಹಾಕ್ದೇ... ಅಜ್ಜಿ, ಕೆಮ್ಮು ನಿಲ್ತಾ ಇಲ್ಲ, ಎರಡು ಥರ ಕಾಫ್ ಡ್ರಾಪ್ಸ್ - ಸಿರಪ್ಪೂ ಕುಡಿಸಿ ಆಯ್ತು. ಆದ್ರೂ ಕೆಮ್ಮು ನಿಂತಿಲ್ಲ!'' ಪಂಕಜ ಎದ್ದು ಮಗುವನ್ನು ಎತ್ತಿಕೊಂಡು ಸುಧಾರಿಸುತ್ತಾ ಹೇಳಿದಳು.

ಆಗ ಅಜ್ಜಿ ಮತ್ತೆ ಹೇಳಿದರು : ''ಡ್ರಾಪ್ಪೂ... ಸಿರಪ್ಪೂ... ನಿಲ್ಸು. ಹಸಿವಿನ ಹಾಲಿಗೆ ಒಂದಿಷ್ಟು ಕುಂಕುಮ ಕೇಸ್ರಿ ಹಾಕಿ ಚೆನ್ನಾಗಿ ಕಾಯ್ಸಿ... ಆರ್ಸು, ಆಮೇಲೆ ಸ್ವಲ್ಪ ಸ್ವಲ್ಪಾನೇ ಕುಡ್ಸು!''

ಪಂಕಜ ಕೆಮ್ಮಿನ ಔಷಧಿಗಳನ್ನು ನಿಲ್ಲಿಸಿ ಅಜ್ಜಿ ಹೇಳಿದ ಹಾಗೆ ಅರ್ಧ ಬಟ್ಟಲು ಹಸಿವಿನ ಹಾಲಿಗೆ ಒಂದಿಷ್ಟು ಕುಂಕುಮ ಕೇಸರಿ ಮಿಶ್ರ ಮಾಡಿ ಚೆನ್ನಾಗಿ ಕಾಯಿಸಿದಳು. ಅದರ ಬಿಸಿ ಕಡಿಮೆಯಾದ ಮೇಲೆ ಮಗುವಿಗೆ ಸ್ವಲ್ಪ ಸ್ವಲ್ಪವಾಗಿ ಚಮಚೆಯಲ್ಲಿ ಕುಡಿಸುತ್ತಾ ಬಂದಳು. ಅಜ್ಜಿ ಹೇಳಿದಂತೆಯೇ ಕೆಮ್ಮು ಬೇಗ ನಿಂತುಹೋಯಿತು.

ಹೌದು. ಅಡಿಗೆಯಲ್ಲಿ ಅಡಿಗಡಿಗೆ ಬಳಸುವ ಕುಂಕುಮ ಕೇಸರಿಗೆ ಮಕ್ಕಳ ಕೆಮ್ಮನ್ನು ನಿವಾರಿಸುವ ಶಕ್ತಿ ಇರುವುದು, ನಿದ್ರೆ ಬಾರದವರು ರಾತ್ರಿ ಮಲಗುವ ಮೊದಲು ಬಿಸಿಯಾದ ಲೋಟ ಹಾಲಿಗೆ ಗಸಗಸೆ, ದ್ರಾಕ್ಷಿ, ಗೋಡಂಬಿಯೊಡನೆ ಸ್ವಲ್ಪ ಕುಂಕುಮ ಕೇಸರಿಯನ್ನು ಬೆರೆಸಿ ಸೇವಿಸಿದರೆ 'ಸುಖ' ನಿದ್ರೆ ಬರುವುದು. ಹಾಗೆಂದು ಅತಿಯಾಗಿ ಸೇವಿಸಬಾರದು.

## ಕುಂಕುಮ ಕೇಸರಿ

ಕುಂಕುಮ ಕೇಸರಿಯನ್ನು ಆಂಗ್ಲದಲ್ಲಿ ಸಾಫ್ರಾನ್ (Saffron) ಎನ್ನುವರು. ಕನ್ನಡದಲ್ಲಿ 'ಕುಂಕುಮ ಹೂ' ಎನ್ನುವರು. ಆದರೆ ಇದರ ವೈಜ್ಞಾನಿಕ ಹೆಸರು 'ಕ್ರೋಕಸ್ ಸಟೀವ'' (Crocus Sativa) ಎಂದಾಗಿರುವುದು, ಇದೊಂದು ಸಣ್ಣ ಸಸ್ಯ. ಇದರ ತೌರು ಕಾಶ್ಮೀರ, ಕಾಶ್ಮೀರದ ರಾಜಧಾನಿಯಾದ ಶ್ರೀನಗರದಿಂದ ಸುಮಾರು ಹದಿನಾರು ಕಿಲೋ ಮೀಟರ್ ದೂರದ ಪಾಂಪುರವೇ ಇದರ ಮಾತೃಭೂಮಿ. ಆದರೂ ಇದರ ಮೂಲ ಸ್ಥಾನ ಸಿಸಿಲಿಯ 'ಕಾರಿಕನ್' ಎನ್ನಲಾಗಿದೆ. ಹಾಗಾಗಿ ಇದರ ವೈಜ್ಞಾನಿಕ ಹೆಸರು 'ಕ್ರೋಕಸ್ ಸಟೀವ'' ಎಂದು ಬರಲು ಕಾರಣವಾಗಿದೆ ಎಂಬ ಅಭಿಪ್ರಾಯವಿದೆ. ಈ ಸಸ್ಯವು ಸುಮಾರು ಹತ್ತನೆಯ ಶತಮಾನದಲ್ಲಿ ಅರಬರಿಂದ ಸ್ಪೈಯಿನಿಗೆ ಸಾಗಿಸಿ ಅಲ್ಲಿಂದ ಭಾರತ ಹಾಗೂ ಇರಾನ್‌ಗಳಿಗೆ ತೆಗೆದುಕೊಂಡು ಹೋಗಲಾಯಿತೆನ್ನುವರು. ಹೀಗೆಯೇ ಈ ಬೆಳೆಯನ್ನು ಮಂಗೋಲ ಮತ್ತು ಚೀನಕ್ಕೆ ಸಾಗಿಸಿದರೆಂಬ ಪ್ರತೀತಿಯುಂಟು. ಹೀಗೆ ಎಲ್ಲ ಕಡೆಗೂ ಕುಂಕುಮ ಕೇಸರಿಯ ಬೆಳೆ ತೆಗೆಯುವರಾದರೂ ಪಾಂಪುರದಲ್ಲಿ ದೊರೆಯುವ ರುಚಿ ಬೇರೆಲ್ಲೂ ಬೆಳೆಯುವ ಕೇಸರಿಯಲ್ಲಿ ಕಾಣಸಿಗುವುದಿಲ್ಲ, ಕೇಸರಿ ಹೂವಿನ ಶಲಾಕೆ ಮತ್ತು ಶಲಾಕಾಗ್ರದಿಂದ 'ಕೇಸರಿ ರಂಗು'' ಸಂಗ್ರಹಿಸುತ್ತಾರೆ. ಸುಮಾರು ನಾಲ್ಕೈದು ಸಾವಿರ ಹೂವುಗಳಿಂದ ಕೇವಲ ಒಂದು ಔನ್ಸ್ ಪ್ರಮಾಣದ 'ರಂಗು' ಮಾತ್ರ ದೊರೆಯುತ್ತದೆ.

## ಹೋಮಿಯೋಪತಿ

ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ 'ಕ್ರೋಕಸ್ ಸಟೀವ'' (crocus Sativa) ಎಂಬ ಇದರ ವೈಜ್ಞಾನಿಕ ಹೆಸರಿನಿಂದಲೇ ಸತ್ವ (potency) ಗೊಳಿಸಿರುವರು. ಈ ಔಷಧಿಯಲ್ಲಿ ಹುದುಗಿರುವ ಮುಖ್ಯ ಮಾನಸಿಕ ಮತ್ತು ದೈಹಿಕ ಚಿಹ್ನೆಗಳೆಂದರೆ...

## ಮನೋಚಿಹ್ನೆಗಳು

ಮನಸ್ಸು ಒಂದು ಘಳಿಗೆ ಉಲ್ಲಾಸದಿಂದ ಕೂಡಿರುವುದು. ಆನಂದದಿಂದ ತುಂಬಿ ತುಳುಕುತ್ತಿರುವುದು, ಹರ್ಷದಿಂದ ನಕ್ಕು ನಲಿದಾಡುತ್ತಿರುವುದು. ಮರುಘಳಿಗೆಯಲ್ಲೇ ಹಠಾತ್ತಾಗಿ ಮನಸ್ಸು ವಿನಾಕಾರಣ ಅವ್ಯಕ್ತ ದುಃಖದಿಂದ ಮುದುಡಿಹೋಗುತ್ತದೆ. ಯಾತನೆಯಿಂದ (sudden changes from hilarity to melancholy) ನಲುಗಿ ಹೋಗುತ್ತದೆ. ಇಂತಹ ಉನ್ಮಾದ (Hysteria) ವ್ಯಾಧಿಗೆ ಇದೊಂದು ಉಪಯುಕ್ತ ಔಷಧಿ.

## ದೈಹಿಕ ಚಿಹ್ನೆಗಳು

ಸಿಡಿಯುವ ತಲೆ ಶೂಲೆ. ಇದು ಮುಖ್ಯವಾಗಿ ಸ್ತ್ರೀಯರಲ್ಲಿ ಮುಟ್ಟಿನ ಸಮಯದಲ್ಲಿ ಉಲ್ಬಣಗೊಳ್ಳುವುದು.

ಕಣ್ಣುಗಳಲ್ಲಿ ಹೊಗೆ ತುಂಬಿಕೊಂಡಂತೆ ಭಾಸವಾಗುವುದು. ಮೂಗಿನಿಂದ ರಕ್ತ ಸೋರಿಕೆ (Episeaxis) ಮೂಗಿನಿಂದ ಕಪ್ಪನೆಯ ರಕ್ತ ದಾರದಂತೆ ನೇತಾಡುತ್ತಿರುವುದು.

ಮುಟ್ಟಿನ ಸ್ರಾವ ಕಪ್ಪು ಬಣ್ಣದಿಂದ ಕೂಡಿರುವುದು. ಅವಧಿಗೆ ಮೊದಲೇ ಕಾಣಿಸಿಕೊಳ್ಳುವ ಮುಟ್ಟಿನ ಸ್ರಾವ. ಸ್ರಾವದ ಪ್ರಮಾಣ ಹೆಚ್ಚು. ಕೈಕಾಲುಗಳು ತಣ್ಣಗಿರುವುದು.

ಹೊಟ್ಟೆಯ ಎಡ ಭಾಗದಲ್ಲಿ ಜೀವಂತ ವಸ್ತುವೊಂದು ಕದಲುತ್ತಿರುವ ಭಾವನೆ. ಮಕ್ಕಳ ಮಲಬದ್ಧತೆ. ಇವಕ್ಕೆಲ್ಲ ಇದು ಉತ್ತಮ ಮದ್ದು.

ಹಠಾತ್ತನೆ ಸೊಂಟದ ಮೇಲೆ ತಣ್ಣೀರು ಸುರಿದಂತೆ ಭಾಸವಾಗುವುದು. ಮಲಗಿದಾಗ ಉಲ್ಬಣಗೊಳ್ಳುವ ಕೆಮ್ಮು. ವಪೆಯು ಸೋಪಿನ ಬುರುಗಿನಂತಿರುವುದು. ಈ ಚಿಹ್ನೆಗಳ ಯಾವ ಹೆಸರಿನ ವ್ಯಾಧಿಯಲ್ಲಿದ್ದರೂ ಇದರ ಉಪಯೋಗ ಬೀಳುವುದು. ಮೂಲದ್ರವ (Mother Tincture) ಅಥವಾ ಸತ್ವ (Potency) ರೂಪದಲ್ಲಿ ಇದನ್ನು ಉಪಯೋಗಿಸಬಹುದು. ಇದನ್ನು ಬಳಸುವ ಮೊದಲು ತಜ್ಞ ಹೋಮಿಯೋ ವೈದ್ಯರ ಸಲಹೆ ಕ್ಷೇಮಕರ.

ಡಾ|| ವಿ. ಎನ್. ಮೂರ್ತಿ
ಸಾಯಿರಾಮ್ ಹೋಮಿಯೋ ಕ್ಲಿನಿಕ್, ನಂ. ೧೨೮೭, ೭ನೇ ಮುಖ್ಯರಸ್ತೆ ಎ ಬ್ಲಾಕ್, ರಾಜಾಜಿನಗರ, ೨ನೇ ಹಂತ, ಬೆಂಗಳೂರು-೫೬೦ ೦೧೦

ಸಕಾಲದಲ್ಲಿ ಮಳೆ ಬಾರದಿದ್ದುದರಿಂದ ಕರ್ನಾಟಕದಲ್ಲಿ ಭೀಕರ ಬರಗಾಲದ ಪರಿಸ್ಥಿತಿ ನಿರ್ಮಾಣವಾಗಿದೆ. ವಿಪರೀತ ಮಳೆ ಸುರಿಯುತ್ತಿದ್ದ ದ. ಕ. ಜಿಲ್ಲೆ ಸಹ ಈ ಬಾರಿ ಮುಂಗಾರು ಮಳೆ ಬಾರದೆ ಅಲ್ಲಿಯ ರೈತರು ಕೈ ಕಟ್ಟಿ ಕುಳಿತುಕೊಂಡಿದ್ದಾರೆ.

ವರುಣನ ಕೃಪೆಗಾಗಿ ಅನೇಕ ದೇವಸ್ಥಾನಗಳಲ್ಲಿ ಪ್ರಾರ್ಥನೆ, ಪರ್ಜನ್ಯ ಜಪ, ವರುಣನ ಪೂಜೆ, ರುದ್ರಾಭಿಷೇಕ ಇತ್ಯಾದಿ ಪ್ರತಿದಿನ ನಡೆಯುತ್ತಿದೆ. ಒಂದು ಪ್ರಸಿದ್ಧ ದೇವಸ್ಥಾನದಲ್ಲಂತು ಸಹಸ್ರ ಎಳನೀರಾಭಿಷೇಕ ನೆರವೇರಿತು. ರಾಜ್ಯಸಭೆಯ ಹಾಲಿ ಸದಸ್ಯ, ಕೇಂದ್ರದ ಮಾಜಿ ಮಂತ್ರಿಯೊಬ್ಬರು ವರುಣನ ಕೃಪೆಗಾಗಿ ಪ್ರಖ್ಯಾತ ದೇವಸ್ಥಾನವೊಂದರಲ್ಲಿ ವಿಶೇಷ ಪೂಜೆ ಸಲ್ಲಿಸಿ ಈಗ ಉಳಿದಿರುವ ಏಕೈಕ ಮಾರ್ಗವೆಂದರೆ ದೇವರಿಗೆ ಮೊರೆ ಹೋಗುವುದು ಮಾತ್ರ, ಆದ್ದರಿಂದ ದೇವಸ್ಥಾನ, ಮಸೀದಿ, ಚರ್ಚ್ ಮುಂತಾದ ಧಾರ್ಮಿಕ ಕೇಂದ್ರಗಳಲ್ಲಿ ಜನರು ವಿಶೇಷ ಪ್ರಾರ್ಥನೆಯನ್ನು ಸಲ್ಲಿಸಬೇಕೆಂದು ಅಪ್ಪಣೆ ಕೊಡಿಸಿದರು. ಆದರೆ ಕಾಡುಗಳನ್ನೇ ನಂಬಿ ಬದುಕುವ ಉದರಪೂರ್ತಿ ಮಾಡುವ ಪರ್ಜನ್ಯ ಮಹಾರಾಜ ಕಾಡುಗಳ ನಾಶದಿಂದ ಕೋಪಗೊಂಡು ತನ್ನ ಬದುಕಿಗೆ ಅಡ್ಡಗಾಲು ಹಾಕುತ್ತಿರುವ ಧನದಾಹಿ ಮನುಷ್ಯ ಪ್ರಾಣಿಗಳಿಗೆ ಮಾತ್ರ ತೊಟಕು ನೀರು ಕುಡಿಸುವ 'ಮೂಡಿ'ನಲ್ಲಿಲ್ಲ.



# ಕಪ್ಪೆ ಮದುವೆಯಾಗಿ ಅತ್ತ ಗಂಡನ ಮನೆ ಸೇರಿತು ಇತ್ತ ತವರೂರಲ್ಲಿ ಮಳೆ ಬರಲೇ ಇಲ್ಲ!

ಕೆಲವು ಕಡೆ ವರುಣ ದೇವನನ್ನು ಒಲಿಸುವುದಕ್ಕಾಗಿ ಕಪ್ಪೆಗಳಿಗೆ ವಿಜೃಂಭಣೆಯಿಂದ ಮದುವೆ ಮಾಡಿದರು. ಕತ್ತೆಗಳಿಗೆ ಸ್ವಯಂವರ ಮಾಡಿ ತಾಳಿ ಕಟ್ಟಿದರು. ಕಪ್ಪೆಗಳು ಮದುವೆಯಾಗಿ ಗಂಡನ ಮನೆ ಸೇರಿದುವು. ಕತ್ತೆಗಳು ಮಡದಿಯರೊಂದಿಗೆ ಆಕಾಶಕ್ಕೆ ಮುಖ ಮಾಡಿ ನಿಂತುವು. ಮಳೆರಾಯನ ಆಗಮನ ಮಾತ್ರ ಆಗಲೇ ಇಲ್ಲ. 'ನಂಬಿ ಕೆಟ್ಟವರಿಲ್ಲವಯ್ಯಾ' ಎಂದು ದಾಸರು ಹಾಡಿದ್ದರೂ ಪೂಜೆಪುರಸ್ಕಾರ ಸ್ವೀಕರಿಸಿದ, ಸಹಸ್ರ ಸಂಖ್ಯೆಯಲ್ಲಿ ಎಳನೀರು ಕುಡಿದ ಮಳೆರಾಯ ಮಾತ್ರ ಕೈಕೊಟ್ಟೆಬಿಟ್ಟ, ಕೃತಘ್ನನಲ್ಲವೇ? ಅಥವಾ ದೇವರೆಂದು ನಂಬಿ ಪೂಜಿಸುತ್ತಾ ಬಂದ ಚಂದ್ರಮನ ದೈವಾಂಶವನ್ನು ಬಯಲಿಗೆಳೆದ ಈ ವಿಜ್ಞಾನಯುಗದಲ್ಲಿ ಇಂತಹ ಮೂಢನಂಬಿಕೆಯ ಜನರು ಇನ್ನೂ ಇದ್ದಾರೆಂದು ಮೂಗು ಮುರಿದುಕೊಂಡನೇ ?

ಎರಡನೆಯದೇ ಸರಿಯೆಂದು ನನಗೆ ಅನಿಸುತ್ತಿದೆ. ಯಾಕೆಂದರೆ ಸುಶಿಕ್ಷಿತರೆಂದೆನಿಸಿಕೊಂಡ ಜನರೂ ಅಧಿಕಾರದ ಗದ್ದುಗೆಯನ್ನೇರಿ ಕುಳಿತ ಮುಖಂಡರೂ ಇನ್ನೂ ಪ್ರಗತಿಪರ ವೈಜ್ಞಾನಿಕ ವಿಚಾರಗಳನ್ನು ಬೆಳೆಸಿಕೊಳ್ಳದೆ ಜನಸಾಮಾನ್ಯರನ್ನು ಹೀಗೂ ವಂಚಿಸುತ್ತಾ ಇದ್ದಾರಲ್ಲಾ! ಪಥಭ್ರಷ್ಟರನ್ನಾಗಿ ಮಾಡುತ್ತಿದ್ದಾರಲ್ಲ!

ಒಂದು ಕಡೆ ಇವರು ಕಾಡನ್ನೆಲ್ಲಾ ನಾಶಪಡಿಸಿದರು, ಪಡಿಸುತ್ತಿದ್ದಾರೆ. ಆನೆ ಮೊದಲಾದ ಕಾಡು ಪ್ರಾಣಿಗಳು ಕಾಡಿನಲ್ಲಿ ನೀರು ಮೇವು ಇಲ್ಲದೆ ನಾಡಿಗೆ ಬರುತ್ತಾ ಇವೆ. ಬಂದರೂ ಇಲ್ಲೂ ನೀರಿಲ್ಲದಾಗಿದೆ. ಇನ್ನೊಂದು ಕಡೆ, ಮಳೆಗಾಗಿ ದೇವರಲ್ಲಿ ನಾವು ಮೊರೆ ಇಡುತ್ತಿದ್ದೇವೆ. ಮಳೆ ಬಾರದೆ ಬರಗಾಲಕ್ಕೆ ಕಾಡುಗಳ ವ್ಯವಸ್ಥಿತ ಸಂಹಾರವೇ ಕಾರಣ ಎಂಬುದು ನಮಗೆ ಇನ್ನೂ ತಿಳಿಯದೇ ಹೋಯಿತು. ಅಥವಾ ತಿಳಿದಿದ್ದರೂ ಅಶಿಕ್ಷಿತ ರೈತರಿಗೆ ಅದನ್ನು ತಿಳಿಸುವ ಗೋಜಿಗೆ ಹೋಗದೆ ಅವರ ಪ್ರೀತ್ಯರ್ಥ ಸಮಾರಂಭಗಳಲ್ಲಿ ಭಾಗವಹಿಸಿ ಚುನಾವಣೆಯಲ್ಲಿ ಓಟು ಕಿತ್ತುಕೊಳ್ಳುವ ತಂತ್ರ ಇರಬೇಕು. ಇದು ಇಷ್ಟಕ್ಕೆ ಸೀಮಿತವಾಗಿಲ್ಲ. ಸ್ವಾತಂತ್ರ್ಯ ಪ್ರಾಪ್ತಿಯ ನಂತರವೂ ಬಡತನದ, ಅಜ್ಞಾನದ ನಿವಾರಣೆಗೆ ಏನೇನೂ ಮಾಡದ ನಮ್ಮ ಈ ಮುಖಂಡರು "ನಮ್ಮದು ಬಡದೇಶ, ನಮ್ಮ ಜನರು ಬಡವರು" ಎಂದು ಹೋದಲ್ಲಿ ಬಂದಲ್ಲಿ ಬಡ ಬಡಾಯಿಸುತ್ತಾ ದೇವರ ತಲೆಗೆ ಸಹಸ್ರ ಎಳನೀರುಗಳ ಅಭಿಷೇಕ, ಟನ್‌ಗಟ್ಟಲೆ ಜೇನುತುಪ್ಪಗಳ ಧಾರೆ, ಚಂದನ, ಶ್ರೀಗಂಧಗಳ ಲೇಪನ, ತೆಂಗಿನ ಕಾಯಿ, ಬಾಳೆ ಹಣ್ಣು, ಕಬ್ಬು, ಅನ್ನಗಳ ಹವನ ಇತ್ಯಾದಿ ಆರಾಧನಾಕ್ರಿಯೆಗಳಲ್ಲಿ ಭಾಗವಹಿಸಿ ಭಕ್ತರಿಗೆ ಉಪದೇಶ ಮಾಡುತ್ತಿದ್ದಾರೆ.

ನಮ್ಮ ದೇಶದಲ್ಲಿ ಎಳನೀರಿನ, ಕಬ್ಬಿನ ರುಚಿ ನೋಡದ, ಜೇನನ್ನು, ಚಂದನವನ್ನು ಕಾಣದ ಬಡ ಮಕ್ಕಳು ಎಷ್ಟು ಬೇಕು? ಇನ್ನೂ ರೈಲನ್ನೇ ನೋಡದ ಹಳ್ಳಿಗರು ನಮ್ಮ ದೇಶದಲ್ಲಿದ್ದಾರೆ. ಹತ್ತು ವರ್ಷಗಳ ಹಿಂದೆ ನಾನೊಮ್ಮೆ ವಿಮಾನದಲ್ಲಿ ಅಮೇರಿಕಾಕ್ಕೆ ಹೋಗಿ ಬಂದಾಗ ನಮ್ಮ ನೆರೆಯ ಬಡ ರೈತನೊಬ್ಬ ನನ್ನ ಹತ್ತಿರ "ಅಣ್ಣಾ ಅದೆಲ್ಲಾ ಸರಿ, ಆದರೆ ನೀವು ದಿನವಿಡೀ ವಿಮಾನದಲ್ಲಿ ಕೂತು ಹೋಗುವಾಗ ಮಲಮೂತ್ರ ವಿಸರ್ಜನೆಗೆ ಏನು ಮಾಡಿದಿರಿ ? ನಗರಗಳ ಮೇಲೆ ವಿಮಾನ ಹಾರಿ ಹೋಗುವಾಗ ಹೊಲಸು ಜನರ ತಲೆಗೆ ಬೀಳುವುದಿಲ್ಲವೇ ?" ಎಂದು ಕೇಳಿದ. ಅವನಿಗೆ ನಿಜಸ್ಥಿತಿಯನ್ನು ಹೇಳಿ ಅವನ ಸಂಶಯವನ್ನು ನಿವಾರಿಸಬೇಕಾದರೆ ನನಗೆ ಸಾಕುಸಾಕಾಗಿ ಹೋಯಿತು. ವಿಮಾನ ಭೂಮಿಗೆ ಬರುವವರೆಗೆ ಮಲಮೂತ್ರ ಅಲ್ಲೇ ಸಂಗ್ರಹವಾಗಿರುವ ವಿಚಾರವನ್ನಂತು ಕೇಳಿ ಆತನು ಮತ್ತೆ ಅಸಹ್ಯ ಪಟ್ಟುಕೊಂಡ.

**ಎಂ. ವಿ. ಭಟ್**

# ನನ್ನ ಹಳ್ಳಿಯ ಚೆಲುವೆ

ನನ್ನ ಹಳ್ಳಿಯ ಚೆಲುವೆ ಗಟ್ಟಿ ಮನಸಿನ
ಹದಿಹರೆಯದಾಕಿ
ನೋಡುವವರ ಎದಿಯಾಗ ಹೊಂಗನಸ ಬಿತ್ತಿ
ಮಾಗಿ ಹೊತ್ತಿನ್ಹಾಂಗ ಸರಿದುಹೋಗಾಕಿ.

ತೆಳ್ಳನ ದೇಹಕ್ಕ ಹದಿನೆಂಟು ಮಳದ ಸೀರಿ
ನೆಲಕ್ಕೆಳದಾಡತ್ಯೆತಿ ಅದರದಡಿ.
ಒಪ್ಪ ಓರಣವಾಗಿ ಬೈತಲೆ ತಿದ್ದಿ ತೀಡಿ
ಬಿಟ್ಟಿದಾಳೋ ನೀಳ ಜಡಿ.

ಅವಳೆದೆಯ ಹರವು ತುಂಬಿ ತುಳುಕುವ
ಸಾಗರದ ಜಲವು
ಹಣೆಯಲ್ಲಿ ಕೆಂಪು ಬಿಂದಿ, ಹೊತ್ತು ಮುಳುಗುವ
ಸೂರ್ಯನ್ಹಾಂಗ ಚೆಲುವು.

ವಾರೀಯ ನೋಟ ಬೀರಿ ನೋಡ್ತಾಳ
ಚಿಗರಿಹಾಂಗ ಥೇಟ
ನೋಡಿದರ ನಿಂತೊಮ್ಮೆ ನೋಡಬೇಕು
ಮಾಡಿಸಿದ್ದಾಳೇನೋ ಮಾಟ

ಮಾತಿಗೆ ಮಾತು ಸೇರಸ್ತಾಳ ದಾರದೊಳಗ
ಮುತ್ತು ಪೋಣಿಸಿದ್ಹಾಂಗ
ನೇಮ ತಪ್ಪಿ ನಡೆದರೆ ಸಾಕು ಬಿಡುವುದಿಲ್ಲ
ಚಿಣಗಿ ಹಾಂವ ಗಂಟಲಕ್ಹಾರಿದಾಂಗ

ಯಾವ ಗುರುವಿನಲ್ಲಿ ಕಲಿತು ಬಂದಾಳೋ
ಹಸಿಗ್ವಾಡ್ಯಾಗ ಹಳ್ಳ ಬಗೆದ್ಹಾಂಗ ಮಾತು
ಯಾರಿದ್ದರೂನು ಕೇಳುವುದಿಲ್ಲ ವಾದ ಮಾಡತಾಳ
ತೆಂವಿಯ್ಯಾಗ ಎಳ್ಳು ಹುರಿದ್ಹಾಂಗ ವಕಾಲತ್ತು.

ಒಣಡೇಲಂತೂ ಇಲ್ಲವೆ ಇಲ್ಲ, ನಿರಾಡಂಬರಿ ಸುಂದರಿ
ಬಡವಿಯಾದರೂ ಮನ ಮಾನ ಕಾಪಾಡಿಕೊಂಡಾಳ.
ಷರತ್ತು ಹಾಕಿ, ಅವಳೆದೆಯ ಕದಿಯಬೇಕಂದವರಿಗೆ
ಹಾಡಹಗ್ಲೇ ಮಣ್ಣ ಮುಕ್ಕಿಸ್ಯಾಳ.




ನನ್ನ ಹಳ್ಳಿಯ ಚೆಲುವೆ ಗಟ್ಟಿ ಮನಸಿನ
ಹದಿಹರೆಯದಾಕಿ.
ನೋಡುವವರ ಎದಿಯಾಗ ಹೊಂಗನಸ ಬಿತ್ತಿ
ಮಾಗಿ ಹೊತ್ತಿನ್ಹಾಂಗ ಸರಿದು ಹೋಗಾಕಿ.

**ಎಸ್ಸಾರ್ ರಾಮರಥ**
ಸಂಶೋಧನಾ ವಿದ್ಯಾರ್ಥಿ, ಮಲಪ್ರಭ ವಿದ್ಯಾರ್ಥಿ
ವಸತಿ ನಿಲಯ ಕೊಠಡಿ, ಧಾರವಾಡ-೩

ನಿಜ ಹೇಳುವುದಾದರೆ ನಮ್ಮ ಪ್ರಜಾಪ್ರಭುತ್ವ ರಾಷ್ಟ್ರ ಇಂದು ಬಡವರಿಗಾಗಿ ಇಲ್ಲ. ಶ್ರೀಮಂತರೇ, ಬಲಾಢ್ಯರೇ, ಮಂತ್ರಿಗಳೇ, ಶಾಸಕರೇ ಮತ್ತು ಅಧಿಕಾರಿಗಳೇ ಇಲ್ಲಿಯ ಸಂಪತ್ತನ್ನೆಲ್ಲಾ ನುಂಗಿ ಅಸಹಾಯಕರನ್ನು, ಶ್ರಮಜೀವಿ ಬಡವರನ್ನು ಸುಲಿದು ತಿಪ್ಪೆಗೆ ಎಸೆದುಬಿಡುತ್ತಿದ್ದಾರೆ. ಹೆಚ್ಚಿನವರು ಅಶಿಕ್ಷಿತರಾಗಿರುವುದರಿಂದ ಮೂಢ ನಂಬಿಕೆಗಳ ದಾಸರಾಗಿ ಸಾಲ ಮಾಡಿಯಾದರೂ, ಹೊಟ್ಟೆಗೆ ಚಂಡಿ ಬಟ್ಟೆ ಕಟ್ಟಿಯಾದರೂ ದೇವಸ್ಥಾನಗಳಿಗೆ ಹೋಗಿ ಹರಕೆ ಸಂದಾಯ ಮಾಡಿ ಕಾಣಿಕೆ ಇತ್ತು ಬರಿಗೈಯಲ್ಲಿ ಹಿಂತಿರುಗುತ್ತಾರೆ.

ನಮ್ಮಲ್ಲಿಂದು ಕಾಣಿಕೆಯ ರೂಪದಲ್ಲಿ ಕೋಟಿಗಟ್ಟಲೆ ಹಣ ಸಂಪಾದನೆ ಇರುವ ದೇವಸ್ಥಾನಗಳಿವೆ. ದೇವಸ್ಥಾನದ ಅಧಿಕಾರಿ ವರ್ಗ ಸಂಪಾದನೆಯ ನಾಲ್ಕನೇ ಒಂದಂಶವನ್ನು ಜನಹಿತ ಕಾರ್ಯಕ್ಕೆಂದು ವಿನಿಯೋಗಿಸಿ, ಆದಾಯ ತೆರಿಗೆ ಇಲಾಖೆಯ ಕಣ್ಣಿಗೆ ಮಣ್ಣೆರಚಿ ಉಳಿದುದನ್ನು ತಮ್ಮ, ತಮ್ಮ ಕುಟುಂಬದ ಭೋಗಜೀವನಕ್ಕೆ ಉಪಯೋಗಿಸಿ ಬಿಡುತ್ತಾರೆ. ದುರದೃಷ್ಟದಿಂದ ಇಂತಹ ಖದೀಮರನ್ನೇ ನಾವು ಸಭೆ ಸಮಾರಂಭಗಳಿಗೆ ಆಹ್ವಾನಿಸಿ ಅವರ ಕಾಲಿಗೆ ಅಡ್ಡ ಬಿದ್ದು ಆಶೀರ್ವಾದ ಬೇಡುತ್ತೇವೆ. ಉಪದೇಶಕ್ಕೆ, ಮಾರ್ಗದರ್ಶನಕ್ಕೆ ಅವರಷ್ಟು ಯೋಗ್ಯರು ನಮಗೆ ಬೇರೆ ಯಾರೂ ಕಾಣುತ್ತಿಲ್ಲ. ದೇವಸ್ಥಾನದ ಆದಾಯದಲ್ಲಿ ಶೇ. ೯೦ರಷ್ಟು ಆದಾಯ ಬಡವರಿಂದ, ಕಪ್ಪು ಹಣ ಉಳ್ಳ ಚೋರರಿಂದ ಬರುತ್ತದೆ.

ಬೆಂಗಳೂರು ನಗರದಲ್ಲಿ ಮಂಗಳವಾರ, ಶುಕ್ರವಾರ ಮತ್ತು ಶನಿವಾರಗಳಂದು ನಿಮಗೆ ಕಾಳಿ, ಶನಿ ದೇವರುಗಳಿರುವ ರಸ್ತೆಯಿಂದ ಹಾದುಹೋಗ ಬೇಕೆಂದಾದರೆ ಹರ ಸಾಹಸ ಪಡಲೇಬೇಕು. ಬೆಳಿಗ್ಗೆ ಹೊರಟರೆ ಸಾಯಂಕಾಲ ಗಂತವ್ಯಸ್ಥಾನವನ್ನು ತಲುಪುವಿರಿ. ಸ್ವಂತ ವಾಹನದಲ್ಲಿ ಹೋಗುವುದಾದರಂತೂ ಅನೇಕ ಕಡೆ ಸುತ್ತು ಬಳಸಿ ಹೋಗಬೇಕಾಗಿ ಬರಲೂಬಹುದು. ದೇವರನ್ನ ನಂಬಬಾರದು, ಪೂಜಿಸಬಾರದೆಂದು ನಾನು ಹೇಳುವುದಿಲ್ಲ. ನಮ್ಮ ನಂಬಿಕೆ, ಪೂಜೆ ಹೃದಯಕ್ಕೆ ಸಂಬಂಧಿಸಿದ್ದಾಗಿದ್ದು ತೀರಾ ವೈಯಕ್ತಿಕವಾಗಿ ಇರಬೇಕು. ದೇವರು ಎಷ್ಟೇ ಪ್ರಭಾವಶಾಲಿಯಾಗಿದ್ದರೂ ಪರರಿಗೆ ತೊಂದರೆ ಕೊಡುವ, ಪರಧನವನ್ನು ಕಸಿದುಕೊಂಡು ಅನುಗ್ರಹಿಸುವ ಸರ್ವೇಶ್ವರನಾಗಿ ಖಂಡಿತಾ ಇರನು. ಒಂದು ವೇಳೆ ಅವನು ಅಂತಹ ಸ್ವಾರ್ಥಿಯಾಗಿದ್ದರೆ ನಮಗೆ ಅವನ ಅನುಗ್ರಹ ಬೇಡ. ಆಡಂಬರವಿಲ್ಲದ ನಮ್ಮ ಹೃದ್ಗತ ಪ್ರಾರ್ಥನೆಯೊಂದೇ ಅವನಿಗೆ ಸಾಕಾದರೆ ಅವನನ್ನು ಸದಾ ಪೂಜಿಸುತ್ತಿರೋಣ.

ಸಂಸ್ಕೃತದ ಮಹಾ ಕವಿ ಕಾಳಿದಾಸನ ಒಂದು ಮಾತಿದೆ. 'ಕತ್ತಲೆಯಾಗುತ್ತಾ ಬರುತ್ತಿರುವಾಗ ಮೊದಲು ತನ್ನ ಮನೆಯಲ್ಲಿ ದೀಪ ಉರಿಸಿ ಇಟ್ಟು ಆಮೇಲೆ ದೇವಸ್ಥಾನದಲ್ಲಿ ದೀಪ ಉರಿಸಿಟ್ಟು ಬಾ' ಎಂದು. ಆದುದರಿಂದ ಮೊದಲು ನಮ್ಮ, ನಮ್ಮ ದೇಶದ ಬಡತನವನ್ನು ನೀಗಿ ಸಂಪನ್ನರಾದ ಮೇಲೆ ಕೋಟಿಗಟ್ಟಲೆ ಖರ್ಚು ಮಾಡಿ ದೇವಸ್ಥಾನವನ್ನು ಕಟ್ಟೋಣ. ವಜ್ರದ ಕಿರೀಟದಿಂದ ಅವನ ತಲೆಯನ್ನು ಅಲಂಕರಿಸೋಣ. ಚಿನ್ನ, ಬೆಳ್ಳಿ, ವೈಢೂರ್ಯಗಳಿಂದ ಅವನನ್ನು ಶೃಂಗರಿಸೋಣ. ನಿರುದ್ಯೋಗಿ ಅನೇಕ (ಎಲ್ಲರೂ ಅಲ್ಲ) ಮಠಾಧಿಪತಿಗಳನ್ನು ಸಾಕಿ, ಆಮೇಲೆ ಅವರ ಆಶೀರ್ವಾದ ಅನುಗ್ರಹಕ್ಕೆ ಪಾತ್ರರಾಗೋಣ. ನಿಜ ಹೇಳುವುದಾದರೆ, ನಮ್ಮ ಸುಖದುಃಖಕ್ಕೆ ರೋಗರುಜಿನಗಳಿಗೆ ನಾವೇ ಕಾರಣರು. ದೇವರು ಕಾರಣನಲ್ಲ. ದೇವರಿಗೆ ಹರಕೆ ಹೇಳುವುದರಿಂದ ಕಾಣಿಕೆ ಹಾಕುವುದರಿಂದ ಅಥವಾ ಕುಂಭಾಭಿಷೇಕದಿಂದ ನಮ್ಮ ಕಷ್ಟ ತೊಲಗದು, ವೃಥಾ ಭ್ರಮೆ ಬೇಡ.

ಬಡವನೊಬ್ಬ ಸಾಲಸೂಲ ಮಾಡಿ ತನ್ನ ಮಗಳ ಮದುವೆ ಮಾಡುತ್ತಿರುವ ಈ ದೇಶದಲ್ಲಿ ನಾವು ಕಪ್ಪೆಗಳಿಗೆ ಮದುವೆ ಮಾಡಲು ಹೊರಟಿದ್ದೇವೆ. ಕತ್ತೆಗಳ ಕಾಲಿಗೆ ಅಡ್ಡ ಬೀಳಲು ಮುಂದಾಗುತ್ತಿದ್ದೇವೆ - ಸುಭಿಕ್ಷೆಗಾಗಿ ! ಇದಕ್ಕಿಂತ ಹೆಚ್ಚಿನ ದೀನ ಸ್ಥಿತಿ ಇನ್ನೇನಿದೆ ? ಮಳೆಯಾದರೂ ಹೇಗೆ ಬರಬೇಕು ? ಶಿವಮೊಗ್ಗದಿಂದ ಮಲೆನಾಡ ಕಡೆಗೆ ಹೋಗಿರಿ. ಕಾಡೆಲ್ಲಾ ನಾಡಾಗಿರುವುದನ್ನು ಕಾಣುವಿರಿ. ಪಶ್ಚಿಮಘಟ್ಟದತ್ತ ಸಾಗಿರಿ. ಕಾಡೆಲ್ಲಾ ಬರಿದಾಗಿದೆ. ಇಲ್ಲಿ ರಕ್ಷಕರೇ ಭಕ್ಷಕರಾಗಿ ಇಂದು ಒಳ್ಳೆಯ ಸ್ಥಾನಮಾನದಲ್ಲಿದ್ದಾರೆ. ಆಮೇಲೆ ವರ್ಷಕ್ಕೊಮ್ಮೆ ವನಮಹೋತ್ಸವವೆಂಬ ನಾಟಕವಾಡಿ ಕೈತೊಳೆದುಬಿಡುತ್ತೇವೆ. ನೇತಾರರ ಬಾಯಿಯಿಂದ ಉಪದೇಶಾಮೃತವನ್ನು ಪಡೆದು ಧನ್ಯರಾಗುತ್ತೇವೆ. ಈಗ ನೀವೇ ಹೇಳಿ. ಈ ದೇಶಕ್ಕೆ ಉಜ್ವಲ ಭವಿಷ್ಯ ಇದೆಯೇ ? ಬಡತನ ತೊಲಗಿ ಜನಸಾಮಾನ್ಯರು ಸುಖ ಶಾಂತಿಯಿಂದ ಇರಬಲ್ಲರೇ ?

**ಎಂ. ವಿ. ಭಟ್**
'ಶ್ರೀ ಮಿತ್ತೂರು',
ಮೇದರ ಹಳ್ಳಿ, ಚಿಕ್ಕಬಾಣಾವರ
ಬೆಂಗಳೂರು-೫೬೦ ೦೯೦

**ಈ** ನೆಲ ಕಂಡ ಅಸಾಧಾರಣ ಪ್ರತಿಭಾವಂತ, ರಂಗದಿಗ್ಗಜ ಬಿ. ವಿ. ಕಾರಂತ ಇನ್ನಿಲ್ಲ. ಅವರ ನಾಟಕಗಳನ್ನು ನೋಡದವರಿಗೆ ಅವು ಹೇಗಿದ್ದವು ಎಂಬುದರ ಕಲ್ಪನೆಯೂ ಬರಲು ಸಾಧ್ಯವಿಲ್ಲ. ಕಾರಂತರ ಒಂದು ನಾಟಕವನ್ನಾದರೂ ನೋಡಿದವರು ಅವರ ನಿಧನದಿಂದ ಕೇವಲ ಕರ್ನಾಟಕದ ಅಲ್ಲ, ಇಡೀ ಭಾರತದ ರಂಗಭೂಮಿಗೆ ಆಗಿರುವ ಅಪಾರ ನಷ್ಟವನ್ನು ಅರಿಯಬಲ್ಲರು. ಬಾಲ್ಯದಿಂದಲೇ ತನ್ನನ್ನು ರಂಗಕಲೆಗೆ ಅರ್ಪಿಸಿಕೊಂಡ ಬಿ. ವಿ. ಕಾರಂತರು ವಿಶಾಲವಾದ ಆಲದ ಮರದಂತೆ ಬೆಳೆದು ಕರ್ನಾಟಕದ ಕೀರ್ತಿಯನ್ನು ದೇಶದ ಉದ್ದಗಲಕ್ಕೂ ಹರಡಿದರು. ಅನೇಕ ನಾಟಕ ತಂಡಗಳು ಈ ಮರದ ಬಿಳಲುಗಳಂತೆ ಹುಟ್ಟಿಕೊಂಡು ರಂಗಕಲೆಯನ್ನು ಬೆಳಗುತ್ತಿವೆ. ಭಾರತದ ಅನೇಕ ರಾಜ್ಯಗಳ ರಂಗ ಬೆಳವಣಿಗೆಗೆ ಕಾರಂತರು ಕಾರಣರಾದರು. ಚಲನಚಿತ್ರ - ದಿಗ್ದರ್ಶನದಲ್ಲೂ ಇವರು ತಮ್ಮ ಪ್ರತಿಭೆಯನ್ನು ಪ್ರದರ್ಶಿಸಿ ಈತ ಇನ್ನೊಬ್ಬ ಸತ್ಯಜಿತ್ ರಾಯ್ ಎಂದು ಕೆ. ಎ. ಅಬ್ಬಾಸ್‌ರಂತಹವರೇ ಹೇಳುವಂತಾಯಿತು. ಎಲ್ಲರೂ ಕಾರಂತರನ್ನು ರಂಗಭೂಮಿಯ ಮಾಂತ್ರಿಕ ಎಂದೇ ಹೇಳುತ್ತಾರೆ.

ಕಾರಂತರ ಸಾಧನೆ, ಪ್ರತಿಭೆ ಮುಂತಾದುವನ್ನು ಕುರಿತಂತೆ ಅನೇಕ ಲೇಖಕರು ಬೇರೆ ಬೇರೆ ಭಾಷೆಗಳಲ್ಲಿ ಲೇಖನಗಳನ್ನೂ, ಪುಸ್ತಕಗಳನ್ನೂ ಬರೆದಿದ್ದಾರೆ. ಅವರ ಕಲಾವಂತಿಕೆಯನ್ನು ಕುರಿತು ಕಲಾ ವಿಮರ್ಶಕರು ಬರೆದ ಲೇಖನಗಳ ಸಂಗ್ರಹವು ಕನ್ನಡದಲ್ಲಿ ಪ್ರಕಟವಾಗಿದೆ. ಜಯದೇವ್ ತನೇಜಾ ಅವರು ಕಾರಂತರ ಜೀವನ-ಸಾಧನೆಯನ್ನು ಕುರಿತು ಹಿಂದಿ ಭಾಷೆಯಲ್ಲಿ ಬರೆದ ಬೃಹತ್ ಗ್ರಂಥ ದೆಹಲಿಯಿಂದ ಪ್ರಕಟವಾಗಿದೆ.

ಬಿ. ವಿ. ಕಾರಂತರ ಪರಿಚಯ ನನಗಾದದ್ದು ಸುಮಾರು ೧೯೫೨ರಲ್ಲಿ. ಆಗ ಅವರು ಮಲ್ಲೇಶ್ವರದ ಲಿಂಕ್ ರೋಡಿನಲ್ಲಿ ಬೆಳ್ಳಾವೆ ನರಹರಿ ಶಾಸ್ತ್ರಿಗಳ ಮನೆಯ ಮೇಲು ಭಾಗದಲ್ಲಿದ್ದ ಚಿಕ್ಕ ರೂಮಿನಲ್ಲಿ ಒಬ್ಬರೇ ವಾಸವಾಗಿದ್ದರು. ರೂಮಿನ ಹೊರಗೆ ತಣ್ಣೀರು ಸ್ನಾನ ಮಾಡಬಹುದಾಗಿತ್ತಾದರೂ, ಶೌಚಾಲಯವಿಲ್ಲದೆ ಅವರು ಬಹಳ ಬವಣೆ ಪಡಬೇಕಾಗಿತ್ತು. ನಾನು ಮಲ್ಲೇಶ್ವರದ ಈಜುಕೊಳ ಬಡಾವಣೆಯ ಒಂದು ಚಿಕ್ಕ ವಠಾರದಲ್ಲಿ ವಾಸವಾಗಿದ್ದೆ. ಕಾರಂತರೂ ನನ್ನ ಹಾಗೆ ಹಿಂದಿ ಅಧ್ಯಾಪಕರಾಗಿದ್ದರು. ಹಿಂದಿ ಭಾಷೆಯೇ ನಮ್ಮಿಬ್ಬರ ಸ್ನೇಹದ ಬೆಸುಗೆಯಾಯಿತು. ನಗರದ ದಂಡು ಪ್ರದೇಶದಲ್ಲಿ ವಿಕ್ಟೋರಿಯಾ ರೋಡ್‌ನಲ್ಲಿರುವ ಧನರಾಜ್ ಫೂಲ್‌ಚಂದ್ ಹಿಂದಿ ಮಾಧ್ಯಮಿಕ ಬಾಲಕ ಬಸ್ತಿ ಎಂಬ ಶಾಲೆಯಲ್ಲಿ ಕಾರಂತರು ಅಧ್ಯಾಪಕರಾಗಿದ್ದರು. ಸಂಬಳ ಐವತ್ತೆಂಟು ರೂಪಾಯಿಗಳು. ಪಾಠ ಬೋಧಿಸುವುದಷ್ಟೇ ಅಲ್ಲದೆ, ಅವರು ಮಕ್ಕಳಿಂದ ನಾಟಕಗಳನ್ನೂ ಆಡಿಸುತ್ತಿದ್ದರು. ಒಂದು ಚುಟಕವನ್ನೇ ಆಧಾರವಾಗಿಟ್ಟುಕೊಂಡು ಪುಟ್ಟ ಮಕ್ಕಳಿಂದ ಒಂದೆರಡು ನಿಮಿಷಗಳ ನಾಟಕಗಳನ್ನು ಆಡಿಸುತ್ತಿದ್ದರು. ಇವುಗಳನ್ನು ಕಾರಂತರು ಚುಟುಕಾಂಕ ಎಂದು ಕರೆದರು. ಆಗ ಕಾರಂತರು ದಿಲ್‌ರುಬಾ ವಾದ್ಯವನ್ನು ನುಡಿಸುತ್ತಿದ್ದರು. ಕಬೀರ್ ದಾಸ್ ಮುಂತಾದವರ ಪದಗಳಿಗೆ ರಾಗ ಸಂಯೋಜನೆ ಮಾಡುತ್ತಿದ್ದರು.

ಆರ್ಥಿಕ ಮುಗ್ಗಟ್ಟು ಅವರನ್ನು ಎಂದೂ ಬಿಟ್ಟಿದ್ದೇ ಇಲ್ಲ. ಅವರು ಹೈದರಾಬಾದಿನಲ್ಲಿದ್ದಾಗ ನಾನು ಅಲ್ಲಿಗೆ ಹೋಗಿ, ಅಲ್ಲಿಂದ ನಾವಿಬ್ಬರೂ ಅಜಮೇರ್ ಬೋರ್ಡ್‌ನ ಇಂಟರ್‌ಮೀಡಿಯಟ್ ಪರೀಕ್ಷೆ ಬರೆಯಲು ಭೋಪಾಲ್‌ಗೆ ಹೊರಟೆವು. ಅದಾದ ಮೇಲೆ ಕಾರಂತರು ಬೆಂಗಳೂರಿಗೆ ವಾಪಸು ಬಂದು ಬಸವನಗುಡಿಯಲ್ಲಿ ಮಹಾಲಕ್ಷ್ಮಿ ಟಿಫಿನ್ ರೂಮ್ ಪಕ್ಕದಲ್ಲಿರುವ ಕಟ್ಟಡದ ಮೊದಲ ಅಂತಸ್ತಿನ ಒಂದು ರೂಮಿನಲ್ಲಿ ವಾಸಿಸತೊಡಗಿದರು.

ಬಿ. ವಿ. ಕಾರಂತರು ಹಿಂದಿ ಭಾಷೆ ಕಲಿತು ಪದವಿ ಪರೀಕ್ಷೆಗಳಿಗೆ ತಯಾರಿ ನಡೆಸುತ್ತಿದ್ದಾಗ ಅವರ ಗುರುಗಳಾಗಿದ್ದವರು ಶ್ರೀ ಎನ್. ಡಿ. ಕೃಷ್ಣಮೂರ್ತಿಯವರು. ೧೯೩೬ರಲ್ಲಿ ಅಲಹಾಬಾದ್‌ನಲ್ಲಿ ಪ್ರೇಮ ಚಂದರ ಅಧ್ಯಕ್ಷತೆಯಲ್ಲಿ ಪ್ರಗತಿಶೀಲ ಸಾಹಿತಿಗಳ ಸಮ್ಮೇಳನ ನಡೆಯಿತು. ಮೂವತ್ತರ ದಶಕದಲ್ಲಿ ಹಿಂದಿ ಭಾಷೆಯ ಅನೇಕ ದಿಗ್ಗಜ ಕವಿಗಳ ಮೇಲೆ ಮಾರ್ಕ್ಸ್‌ವಾದ ತೀವ್ರ ಪರಿಣಾಮ ಬೀರಿತ್ತು. ಅಂತಹ ಕವಿಗಳ ಕಾವ್ಯವನ್ನು ಅಭ್ಯಸಿಸಿದ ಯುವಕ ಕಾರಂತ ಬಹಳ ಪ್ರಭಾವಿತರಾದರು. ಕಾಮ್ರೇಡ್ ಎನ್. ಡಿ. ಕೃಷ್ಣಮೂರ್ತಿ ಸ್ವಾತಂತ್ರ್ಯ ಹೋರಾಟಗಾರರಾಗಿದ್ದು ಜೈಲ್ ವಾಸವನ್ನು ಅನುಭವಿಸಿ ಹಿಂಸೆಗೊಳಗಾದವರು. ಕಮ್ಯೂನಿಸ್ಟ್ ಪಾರ್ಟಿಯ ಸ್ಥಾಪಕ ಸದಸ್ಯರಾಗಿದ್ದು ಬೆಂಗಳೂರು ಚಾಮರಾಜಪೇಟೆಯಿಂದ "ಯುಗಾಂತರ" ಎಂಬ ಕಮ್ಯೂನಿಸ್ಟ್ ವಿಚಾರಧಾರೆಯ ಪತ್ರಿಕೆಯನ್ನು ಹೊರತಂದು ಪ್ರಸಿದ್ಧರಾಗಿದ್ದ ಕಾಮ್ರೇಡ್ ಎನ್. ಡಿ. ಶಂಕರ್‌ರವರ ತಮ್ಮಂದಿರೇ ಈ ಎನ್. ಡಿ. ಕೃಷ್ಣಮೂರ್ತಿ. ಅವರು ಬಿ. ವಿ. ಕಾರಂತರನ್ನು ಬೆಂಗಳೂರಿನ



# ಬಿ. ವಿ. ಕಾರಂತರ ಜೀವನದ ಒಂದು ಇಣುಕು ನೋಟ

**ವೆಂಕಟರಾಜ್ ವಿರಾಜ್**

■

**ಸಮಾಜದ ವಿಕಾಸದ ಅಂಗವಾಗಿ ಜನರ ಆಶೋತ್ತರಗಳಿಗೆ ತುಮುಲಗಳಿಗೆ ಸ್ಪಂದಿಸುತ್ತಾ ಹೊಸ ರೂಪ ಮತ್ತು ಪ್ರಸ್ತುತತೆಗಳನ್ನು ಮೈಗೂಡಿಸಿಕೊಂಡು ಬೆಳೆಯುತ್ತಾ ಹೋಗುವುದು ಕಲೆಯ ವೈಶಿಷ್ಟ್ಯ. ಒಮ್ಮೊಮ್ಮೆ ಅದು ದಿಕ್ಕು ತಪ್ಪಿದಾಗ ಇಲ್ಲವೇ ನಿಷ್ಕ್ರಿಯಗೊಂಡಾಗ ಅದನ್ನು ಸರಿಪಡಿಸಲು ಅಸಾಧಾರಣ ಪ್ರತಿಭೆ ಮತ್ತು ಮುನ್ನೋಟಗಳನ್ನುಳ್ಳ ಪ್ರತಿಭೆಯ ಅವಶ್ಯಕತೆ ಉಂಟಾಗುತ್ತದೆ. ನಾಟಕ ಕಲೆಯೂ ಈ ಮಾತಿಗೆ ಹೊರತಲ್ಲ. ಈ ಮಾತು ಕನ್ನಡ ರಂಗಭೂಮಿಗೂ ಅನ್ವಯಿಸುತ್ತದೆ.**

**ಅಂಥ ಪ್ರತಿಭೆಯನ್ನು ಹೊತ್ತು, ಸುಮಾರು ಎಪ್ಪತ್ತರ ದಶಕದಲ್ಲಿ ಕನ್ನಡ ರಂಗಭೂಮಿಗೆ ಮತ್ತೊಮ್ಮೆ ಹಿಂದಿರುಗಿದ ಬಿ. ವಿ. ಕಾರಂತರು ಇಡೀ ರಂಗ ಚಳುವಳಿಗೇ ಹೊಸ ಚೈತನ್ಯ ತುಂಬಿದ ಅದ್ಭುತ ಮಾಂತ್ರಿಕ. ಬಹು ಮುಖ ಪ್ರತಿಭೆಯ ಕಾರಂತರು ನಿರ್ದೇಶನ, ರಂಗ ಸಂಗೀತ, ಚಲನಚಿತ್ರ ಸಂಗೀತಗಳ ಮೂಲಕ, ತಮ್ಮ ಅಸಾಧಾರಣ ಸೃಜನಶೀಲತೆಯಿಂದ ಕರ್ನಾಟಕದಲ್ಲಿಯೂ ಅಖಿಲ ಭಾರತ ಮಟ್ಟದಲ್ಲಿಯೂ ಕಲಾ ಚಟುವಟಿಕೆಗಳಿಗೆ ಹೊಸ ಮೆರುಗನ್ನು ನೀಡಿ ಈಗ ನಿರ್ಗಮಿಸಿದ್ದಾರೆ.**

**ಅವರು ಆಡಿಸುತ್ತಿದ್ದ ನಾಟಕಗಳಲ್ಲಿದ್ದಂತೆಯೇ ಅವರ ವೈಯಕ್ತಿಕ ಬದುಕಿನಲ್ಲಿಯೂ ಏರುಪೇರುಗಳು ಮೆಲೋಡ್ರಾಮಗಳು ಕ್ಲೈಮಾಕ್ಸ್‌ಗಳೂ ತುಂಬಿಕೊಂಡಿದ್ದವು. ಅವುಗಳ ಕಿರುಪರಿಚಯವನ್ನು ಕಾರಂತರ ಆತ್ಮೀಯ ಸಂಗಾತಿ ಶ್ರೀ ವೆಂಕಟರಾಜ್ ಅವರು ಹೊಸತುಗಾಗಿ ಮಾಡಿಕೊಟ್ಟಿದ್ದಾರೆ.**

ಕಮ್ಯೂನಿಸ್ಟ್ ಪಾರ್ಟಿಗೆ ಪರಿಚಯಿಸಿ ಅವರನ್ನು ಪಾರ್ಟಿಯ ಸದಸ್ಯರನ್ನಾಗಿ ಮಾಡಿದರು. ಬಿ. ವಿ. ಕಾರಂತರು ಸುಮಾರು ೪ ವರ್ಷಗಳ ಕಾಲ ಪಾರ್ಟಿಯ ಸದಸ್ಯರಾಗಿದ್ದು ಪಾರ್ಟಿಯ ಸಭೆಗಳಿಗೆ ಹಾಜರಾಗುತ್ತಿದ್ದರು. ಈ ಸಂದರ್ಭದಲ್ಲಿ ಕಾರಂತರಿಗೆ ಕಾಮ್ರೇಡ್ ಸಿ. ವಿ. ಜಯತೀರ್ಥರ ಪರಿಚಯವಾದುದೇ ಅಲ್ಲದೆ ಹಿಂದಿ ಭಾಷೆಯ ಪ್ರತಿಭಾವಂತ ಲೇಖಕರೂ ವಿದ್ವಾಂಸರೂ ಆದ ಕಾಮ್ರೇಡ್ ಎ. ಬಿ. ಸ್ವಾಮಿಯವರ ಪರಿಚಯವಾಯಿತು. ಕಾಶಿಯವರಾದ ಎ. ಬಿ. ಸ್ವಾಮಿಯವರು (ಆನಂದ ಭಿಕ್ಷು ಸ್ವಾಮಿ) ಕಟ್ಟಾ ಮಾರ್ಕ್ಸ್‌ವಾದಿಗಳಾಗಿದ್ದರು. ಹಿಂದಿಯ ಸುಪ್ರಸಿದ್ಧ ಕಾದಂಬರಿ ಸಾರ್ವಭೌಮ ಪ್ರೇಮಚಂದ್ ಅವರು ನಡೆಸುತ್ತಿದ್ದ 'ಹಂಸ್' ಪತ್ರಿಕೆಯಲ್ಲಿ ಇವರ ಹಿಂದಿ ಕಥೆಗಳೂ ಪ್ರಕಟವಾಗುತ್ತಿದ್ದವು. ಯಾವುದೋ ಕಾರಣದಿಂದ ಎ. ಬಿ. ಸ್ವಾಮಿಯವರು ಏಕಾಕಿಯಾಗಿ ಬೆಂಗಳೂರಿನಲ್ಲಿಯೇ ವಾಸಿಸುತ್ತಿದ್ದರು. ಇವರ ಸಣ್ಣ ಮನೆ ಚಿಕ್ಕಪೇಟೆಯ ಬೆಣ್ಣೆ ಗೋವಿಂದಪ್ಪ ಗಲ್ಲಿಯಲ್ಲಿ ಒಂದು ಮಹಡಿಯಲ್ಲಿತ್ತು. ಎ. ಬಿ. ಸ್ವಾಮಿಯವರು ಕಾರಂತ ಹಾಗೂ ಸಿ. ವಿ. ಜಯತೀರ್ಥರೊಂದಿಗೆ ಪ್ರಗತಿವಾದಿ ವಿಚಾರಧಾರೆಯ ಸಾಹಿತ್ಯವನ್ನು ಪ್ರೋತ್ಸಾಹಿಸಲು ಕರ್ನಾಟಕ ಲೇಖಕರ ಸಂಘವನ್ನು ಸ್ಥಾಪಿಸುವ ವಿಚಾರ ಪ್ರಸ್ತಾಪಿಸಿದರು. ಆಗ ಬಿ. ವಿ. ಕಾರಂತರು ನನ್ನನ್ನು ಬರಹೇಳಿದರು. ಹೀಗೆ ಕರ್ನಾಟಕ ಲೇಖಕರ ಸಂಘದ ಸ್ಥಾಪನೆಯಾಯಿತು. ಇದರಿಂದ ನನಗೆ ಮಿತ್ರ ಲಾಭವಾಯಿತು. ಮೊದಲ ದಿನವೇ ನಾನು ಮತ್ತು ಸಿ. ವಿ. ಜಯ ತೀರ್ಥ ಗಾಢಮಿತ್ರರಾಗಿಬಿಟ್ಟೆವು. ಕೆಲವೇ ದಿನಗಳಲ್ಲಿ ಅವರು ನನ್ನನ್ನು ಕಮ್ಯೂನಿಸ್ಟ್ ಪಾರ್ಟಿಗೆ ಸೇರಿಸಿಕೊಂಡರು. ಆಗ ಬಸವನಗುಡಿಯಲ್ಲಿರುವ ಹೋಂ ಸ್ಕೂಲನ್ನು ಮಿಸ್. ರಾಬಿನ್‌ಸನ್ ಎಂಬ ಅಮೇರಿಕನ್ ಮಹಿಳೆ ಬಹಳ ಯೋಗ್ಯ ರೀತಿಯಲ್ಲಿ ನಡೆಸುತ್ತಿದ್ದರು. ಆ ಸ್ಕೂಲಿನಲ್ಲಿ ಅಧ್ಯಾಪಕನಾಗಿದ್ದ ನಾನು ಕೆಂಪೇಗೌಡ ರೋಡಿನ ಫುಟ್‌ಪಾತ್ ಮೇಲೆ ಸೋವಿಯತ್ ಪುಸ್ತಕಗಳನ್ನು ಹರಡಿಕೊಂಡು ಮಾರಾಟ ಮಾಡಿದ್ದೆ. ಈಗಲೂ ನೆನಸಿಕೊಂಡರೆ ಹೆಮ್ಮೆ ಎನಿಸುತ್ತದೆ. ನಾಲ್ಕು ಜನರ ಮುಂದೆ ಎದ್ದು ನಿಂತು ಮಾತನಾಡಲು ಹೆದರುತ್ತಿದ್ದ ನನ್ನನ್ನು (ಬರೆಯುವ ಅಭ್ಯಾಸ ಇತ್ತು) ಲೇಖಕರ ಸಂಘದ ಕಾರ್ಯದರ್ಶಿಯನ್ನಾಗಿ ಮಾಡಿದರು. ಭಿನ್ನ ವಿಚಾರಧಾರೆಯವರಾದ ಸಾಹಿತಿ ಶ್ರೀ ಸಿ. ಕೆ. ನಾಗರಾಜರಾವ್ ಅವರನ್ನು ಸಂಘದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಂಡಿದ್ದೆವು.

ಪ್ರತಿ ಭಾನುವಾರ ಬೆಳಿಗ್ಗೆ ಬೆಣ್ಣೆ ಗೋವಿಂದಪ್ಪ ಗಲ್ಲಿಯಲ್ಲಿ ವಿಭಿನ್ನ ವಿಚಾರಧಾರೆಗಳನ್ನೊಳಗೊಂಡ ಬರಹಗಾರರ ಜಮಾವಣೆಯಾಗುತ್ತಿತ್ತು. ಲೇಖಕರು ಸ್ವರಚಿತ ಕಥೆ ಕವನಗಳ ವಾಚನ ಮಾಡುತ್ತಿದ್ದರು. ಒಬ್ಬರ ವಾಚನ ಮುಗಿದ ಕೂಡಲೇ ಹಾಜರಿದ್ದ ಪ್ರತಿಯೊಬ್ಬರೂ ತಮ್ಮ ತಮ್ಮ ವಿಮರ್ಶೆಯನ್ನು ಹೇಳುತ್ತಿದ್ದರು. ಈ ಸಭೆಗಳಿಗೆ ಬೆಂಗಳೂರಿನ 'ಮಜ್ಲಿಸ್-ಎ-ಅದಬ್' (ಸಾಹಿತ್ಯ ಸಭೆ) ನ ಮಜಹರ್ ಉಮೀದ್ ಜಿಯಾಉಲ್ಲಾ ಮುಂತಾದ ಸಾಹಿತಿಗಳೂ ಬಂದು ತಮ್ಮ ತಮ್ಮ ರಚನೆಗಳನ್ನು ಉರ್ದು ಭಾಷೆಯಲ್ಲಿ ಓದುತ್ತಿದ್ದರು. ಅವರು ಓದುತ್ತಿದ್ದಂತೆ ಅದರ ಕನ್ನಡ ಅನುವಾದವನ್ನೂ ಮಾಡುತ್ತಿದ್ದೆವು.

ಕರ್ನಾಟಕ ಲೇಖಕರ ಸಂಘದ ಉದ್ದೇಶ ಉತ್ತಮ ಸಾಹಿತ್ಯ ಸೃಷ್ಟಿ ಮಾತ್ರವಲ್ಲ, ಲೇಖಕರ ಹಕ್ಕು ಬಾಧ್ಯತೆಗಳಿಗೂ ಹೋರಾಟ ನಡೆಸುವದಾಗಿತ್ತು. ಪತ್ರಿಕೆಗಳ ಕಾರ್ಯಾಲಯಗಳಲ್ಲಿ ಪ್ರತಿಯೊಬ್ಬರಿಗೂ ಹಣ ಸಂದಾಯವಾಗುತ್ತದೆ: ಮೊಳೆ ಜೋಡಿಸುವವನಿಗೆ, ಮುದ್ರಣ ಯಂತ್ರ ನಡೆಸುವವನಿಗೆ, ಅಟೆಂಡರ್‌ಗೆ, ಕೊನೆಗೆ ಕಸ ಗುಡಿಸುವವರಿಗೂ ಹಣ ಕೊಡಲಾಗುತ್ತದೆ. ಆದರೆ ಲೇಖಕರಿಗೆ ಮಾತ್ರ ಹಣ ಕೊಡುವ ಪದ್ಧತಿ ಇರಲಿಲ್ಲ. ಇದರ ವಿರುದ್ಧ ಹೋರಾಡುವುದೂ ಸಂಘದ ಗುರಿಯಾಗಿತ್ತು. ಪತ್ರಿಕೆಗಳಲ್ಲಿ ನಮ್ಮ ಹೆಸರು ಬಂದರೆ ಸಾಕು, ಹಣ ಬೇಡ ಎನ್ನುವ ಲೇಖಕರಿಂದ ಎಂತಹ ಸಾಹಿತ್ಯವನ್ನು ನಿರೀಕ್ಷಿಸಬಹುದು ! ಸಾಹಿತ್ಯದ ವಾಣಿಜ್ಯೀಕರಣವಾಗಿ ಲಾಭವೇ ಮುಖ್ಯವಾಗಿದ್ದ ಪರಿಸ್ಥಿತಿಯ ಮೇಲೆ ಬೆಳಕು ಚೆಲ್ಲಲು ಅರವತ್ತನೇ ದಶಕದ ಪ್ರಾರಂಭದಲ್ಲಿ ಬಿ. ವಿ. ಕಾರಂತರು 'ಸಾಹಿತ್ಯ ಸ್ಟ್ಯಾಕಿಂಗ್ ಕಂಪನಿ' ಎಂಬ ನಾಟಕವನ್ನು 'ದಾಢೀವಾಲ' ಎಂಬ ಹೆಸರಿನಲ್ಲಿ ಬರೆದು ಆಡಿಸಿದರು. ಈ ನಾಟಕ ಪ್ರಯೋಗದಲ್ಲಿ ಮಂಝೂರ್ ಅಹಮದ್ ಮುಂತಾದ ಪ್ರಗತಿಶೀಲ ಲೇಖಕರೂ ಭಾಗವಹಿಸಿದ್ದರು. ಕಾರಂತರ ಈ ನಾಟಕ ಹಾಗೂ ವಿವಿಧ ಲೇಖಕರ ''ಒಳದನಿ'' ಎಂಬ ಕಥಾ ಸಂಕಲನವನ್ನು ಕರ್ನಾಟಕ ಲೇಖಕರ ಸಂಘ ಪುಸ್ತಕ ರೂಪದಲ್ಲಿ ಪ್ರಕಟಿಸಿತು.



ಬಿ. ವಿ. ಕಾರಂತ - ಪ್ರೇಮಾ ಕಾರಂತ

ಈ ಸಂಘವು ಶಿಕ್ಷಣ ಮಂತ್ರಿಗಳಾಗಿದ್ದ ಅಣ್ಣಾರಾವ್ ಗಣಮುಖಿ, ಅ. ನ. ಕೃಷ್ಣರಾವ್, ನವರತ್ನ ರಾಮರಾವ್ ಮುಂತಾದವರನ್ನು ಬರಮಾಡಿಕೊಂಡು ಅರವತ್ತರ ದಶಕದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಎರಡು ದಿನಗಳ ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಿತು. ತಂತಿ ವಿಳಾಸಕ್ಕಾಗಿ ನಾವು ಕೊಟ್ಟ 'ಸ್ಪುಟ್ನಿಕ್' ಎಂಬ ಹೆಸರು ಅನೇಕ ಪತ್ರಿಕಾ ವರದಿಗಾರರನ್ನು ಆಕರ್ಷಿಸಿ. ಯಾರಪ್ಪಾ ಈ 'ಸ್ಪುಟ್ನಿಕ್ ರೈಟರ್ಸ್' ಎಂದು ಕುತೂಹಲ ಪಡುವಂತಾಯ್ತು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಮ್ಮ ಲೇಖಕರ ಸಭೆ ನಡೆಯುತ್ತಿದ್ದಾಗ, ದ. ರಾ. ಬೇಂದ್ರೆಯವರು ಬಂದಿದ್ದರು. ಅವರು ಪ್ರತಿವಾರದ ನಮ್ಮ ಈ ಸಾಹಿತ್ಯ ಸಭೆಗಳಿಗೆ ''ಕಾವ್ಯಾರಾಮ'' ಎಂದು ಹೆಸರಿಟ್ಟರು. ಸಾಹಿತ್ಯದ ಉದ್ದೇಶ ಆರಾಮವಲ್ಲವಾದುದರಿಂದ ನಮ್ಮ ಕೆಲವು ಕಾಮ್ರೇಡ್‌ಗಳಿಗೆ ಈ ಹೆಸರು ಒಪ್ಪಿತವಾಗಲಿಲ್ಲ!

ಗೋವಾ ಸತ್ಯಾಗ್ರಹದಲ್ಲಿ ಭಾಗವಹಿಸಲು ಕಾಂಗ್ರೆಸ್, ಕಮ್ಯೂನಿಸ್ಟ್ ಮುಂತಾದವರ ದೊಡ್ಡ ಜಾಥಾ ಹೊರಟಾಗ ಬಿ. ವಿ. ಕಾರಂತರೂ ಯಾರ ಮಾತನ್ನೂ ಕೇಳದೆ ಗೋವಾ ವಿಮೋಚನೆಗೆ ಹೊರಟೇಬಿಟ್ಟರು. ಅಲ್ಲಿ ಪೊಲೀಸರು ಬಸ್‌ನಲ್ಲಿ ಕುಳಿತಿದ್ದ ಇವರ ಗಡ್ಡವನ್ನು ಹಿಡಿದು ಎಳೆದಾಡಿದರಂತೆ, ಇವರು ಆಗ ತಮ್ಮ ಇಡೀ ತಲೆಯನ್ನು ಕಿಟಕಿಯಿಂದ ಹೊರಗೆ ಹಾಕಿ ಬೇಕಾದ್ದು ಮಾಡಲಿ ಎಂದುಬಿಟ್ಟರಂತೆ. ಬೂಟ್ಸ್ ಕಾಲಿನಿಂದ ಮುಖದ ಮೇಲೆ ಹೊಡೆತ ಬಿದ್ದು ಕಣ್ಣಿನ ಹತ್ತಿರ ಮೂಗಿನ ಮೇಲೆ ಗಾಯವಾಗಿತ್ತು. ಎರಡು ದಿನ ಲಾಕಪ್ಪಿನಲ್ಲಿಟ್ಟು ತರುವಾಯ ಎಲ್ಲಿಯೋ ನೀರಿನಲ್ಲಿ ಇವರನ್ನೆಲ್ಲಾ ಬಿಸಾಡಿಬಿಟ್ಟರಂತೆ. ಕತ್ತಿನವರೆಗೂ ನೀರಿತ್ತು ಎಂದು ತಿಳಿಸಿದ್ದರು. ಕಾರಂತರ ಬಗ್ಗೆ ಕೃತಿ ರಚಿಸಿರುವ ಜಯದೇವ ತನೇಜಾರವರಿಗೆ ಕಾರಂತರು ''ಆಗ ನಾನು ಕಮ್ಯೂನಿಸ್ಟ್ ಪಾರ್ಟಿಯಲ್ಲಿದ್ದೆ. ಕಾರ್ಡ್ ಹೋಲ್ಡರ್ ಆಗಿರಲಿಲ್ಲ; ಕಲ್ಚರಲ್ ವಿಂಗ್‌ನಲ್ಲಿದ್ದೆ'' ಎಂದು ಹೇಳಿದ್ದಾರೆ. ಇದು ಕಾರಂತರು ರೂಪುಗೊಳ್ಳುತ್ತಿದ್ದ ಕಾಲ. ಆಗ ಅವರು ಮಾನ್ಯ ಕಾಮ್ರೇಡ್ ನಂಬೂದರಿಪಾಡ್ ರವರನ್ನು ತುಂಬಾ ಮೆಚ್ಚಿಕೊಂಡಿದ್ದರು.



ಬಿ. ವಿ. ಕಾರಂತ್, ವೆಂಕಟರಾಜ್ ವಿರಾಜ್, ಎಸ್.ಡಿ. ಕೃಷ್ಣಮೂರ್ತಿ, ಹೆಚ್. ವಿ. ರಾಮಚಂದ್ರರಾವ್

ಕಾರಂತರು ಬಾಲ್ಯದಲ್ಲಿ ಬರಿಗೈಯಲ್ಲಿ ಮನೆಬಿಟ್ಟು ಗುಬ್ಬಿ ಕಂಪನಿ ಸೇರಿದಾಗ ಅವರಿಗೆ ಯಾವ ಆಧಾರವೂ ಇರಲಿಲ್ಲ. ಕಂಪನಿ ಮನೆಯಲ್ಲಿದ್ದುಕೊಂಡೇ ಅವರು ಹಿಂದಿ, ಹಾರ್ಮೋನಿಯಂ

ಮುಂತಾದವುಗಳನ್ನೆಲ್ಲಾ ಕಲಿತರು. ವಿಶ್ವವಿದ್ಯಾಲಯದ ಪದವಿ ಪಡೆಯಲು ಅವರು ಬೆಂಗಳೂರು ಬಿಟ್ಟು ಬನಾರಸ್‌ಗೆ ಹೋಗಿ ಬಿರ್ಲಾ ಹಾಸ್ಟೆಲ್ ಸೇರಿದಾಗ ಅವರ ಆಪ್ತ ಸ್ನೇಹಿತರೇ ಅವರ ಜೀವನಕ್ಕೆ ಆಧಾರವಾಗಿದ್ದರು. ಗುಬ್ಬಿ ವೀರಣ್ಣನವರು ಪ್ರತಿ ತಿಂಗಳೂ ಸ್ವಲ್ಪ ಹಣವನ್ನು ಕಳುಹಿಸುತ್ತಿದ್ದರು. ಮಿಕ್ಕದ್ದನ್ನು ಕೆಲ ಸ್ನೇಹಿತರು ಕಳುಹಿಸುತ್ತಿದ್ದರು. ಅವರು ನನಗೆ ಬರೆದ ಒಂದು ಪತ್ರದಲ್ಲಿ ''ನನ್ನನ್ನು ರೂಪಿಸುವಲ್ಲಿ ಸ್ನೇಹಿತರೇ ಮಹತ್ತ್ವಪೂರ್ಣ ಪಾತ್ರ ವಹಿಸಿದ್ದಾರೆ, ಭಗವಂತನಲ್ಲ'' ಎಂದು ಬರೆದಿದ್ದಾರೆ.

೧೯೫೮ರಲ್ಲಿ ಬಿ. ಎ. ಪರೀಕ್ಷೆ ಬರೆಯಲು ನಾನು ಬನಾರಸ್‌ಗೆ ಹೋಗಿದ್ದೆ. ನಾವಿಬ್ಬರೂ ದ್ವಿತೀಯ ಭಾಷೆಯಾಗಿ ಕನ್ನಡ ಭಾಷೆಯನ್ನು ಆಯ್ಕೆ ಮಾಡಿಕೊಂಡಿದ್ದೆವು. ನಮ್ಮ ಪಠ್ಯ ಪುಸ್ತಕಗಳಲ್ಲಿ ಒಂದು ಕಾದಂಬರಿ, ಶಿವರಾಮಕಾರಂತರ 'ಚೋಮನದುಡಿ'. ಆ ದಿನ ಪರೀಕ್ಷೆ ಬರೆದು ಮುಗಿಸಿ ಇಬ್ಬರೂ ವಿಶ್ವವಿದ್ಯಾಲಯದ ಆವರಣದಲ್ಲೇ ಅಡ್ಡಾಡುತ್ತಿದ್ದೆವು. ಹೊರಗೆ ಹೋಗಲು ಜೇಬಿನಲ್ಲಿ ಕಾಸಿಲ್ಲ. ಇದ್ದಕ್ಕಿದ್ದಂತೆ ಕಾರಂತರು ಎತ್ತರದ ವಾಟರ್ ಟ್ಯಾಂಕಿನ ಕಬ್ಬಿಣದ ಏಣಿಯನ್ನು ಹತ್ತಲಾರಂಭಿಸಿದರು. ನನಗೋ ಹೆದರಿಕೆ. ಆದರೂ ಅವರ ಹಿಂದೆಯೇ ನಾನೂ ಹತ್ತಿದೆ. ಅಲ್ಲಿ ಶುರುವಾಯಿತು ನಮ್ಮ ಶೃಂಗಸಭೆ. ಪರೀಕ್ಷೆಯಲ್ಲಿ ಹೇಗೆ ಬರೆದಿದ್ದೀಯಾ ಎಂದು ಕೇಳಿದರು. ''ಚೋಮ, ಅವನ ದುಡಿ, ಅವನ ಎದೆಯ ಬಡಿತ ಅಂತ ಏನೇನೋ ಬರೆದಿದ್ದೇನೆ. ಒಟ್ಟಾರೆ ಸಮರ್ಪಕವಾಗಿ ಉತ್ತರಿಸಿದ್ದೇನೆ'' ಎಂದೆ. ಆಗ ಕಾರಂತರು ಎಲ್ಲಿಯೋ ದೃಷ್ಟಿಯನ್ನು ನೆಟ್ಟು ''ಈ ಕಾದಂಬರಿಯನ್ನು ಸಿನಿಮಾ ಮಾಡಬೇಕಯ್ಯ'' ಎಂದು ಉದ್ಗಾರವೆತ್ತಿದರು. ಆಗ ಕಾರಂತರು ಇನ್ನೂ ವಿದ್ಯಾಭ್ಯಾಸವನ್ನೇ ಮುಗಿಸಿರಲಿಲ್ಲ. ಕೈಯಲ್ಲಿ ಒಂದು ಬಿಡಿಕಾಸಿಲ್ಲ. ಆದರೂ ಎಂತಹ ವಿಚಿತ್ರ! ಮುಂದೊಂದು ದಿನ ಅವರ ಕಲ್ಪನೆ ನಿಜವಾಗಿ ಸಾಕಾರಗೊಂಡು 'ಚೋಮನದುಡಿ' ಚಿತ್ರ ಅಂತರರಾಷ್ಟ್ರೀಯ ಮನ್ನಣೆ ಪಡೆದುದೇ ಅಲ್ಲದೆ ಅವರಿಗೆ ಪ್ರಶಸ್ತಿಯನ್ನೂ ತಂದುಕೊಟ್ಟಿತು.

ಮುಂದಿನ ವರ್ಷ ಬಿ. ವಿ. ಕಾರಂತರು ಪ್ರೇಮಾ ಅವರನ್ನು ಮದುವೆಯಾದರು. ಇದಕ್ಕೂ ಎನ್. ಡಿ. ಕೃಷ್ಣಮೂರ್ತಿಯವರೇ ಕಾರಣ. ಆಗ ಪ್ರೇಮಾ ಅವರು ಬಸವನಗುಡಿಯ ಹೋಂ ಸ್ಕೂಲಿನಲ್ಲಿ ಅಧ್ಯಾಪಕಿಯಾಗಿದ್ದರು. ನಾನೂ ಅದೇ ಸ್ಕೂಲಿನಲ್ಲಿ ಅಧ್ಯಾಪಕನಾಗಿದ್ದೆ. ಆಗ ಪ್ರೇಮಾ ಅವರಿಗೆ ಕಾರಂತರ ಪರಿಚಯವಿರಲಿಲ್ಲ. ಶ್ರೀಮತಿ ಪ್ರೇಮಾ ಅವರು ಶಿಡ್ಲಘಟ್ಟದವರು. ಅದೇ ಊರಿನ ನಮ್ಮ ಮಿತ್ರ ಶ್ರೀ ಎಚ್. ವಿ. ರಾಮಚಂದ್ರರಾವ್‌ರವರು (ಬೆಂಗಳೂರು ಆಕಾಶವಾಣಿಯ ಡೈರೆಕ್ಟರ್ ಆಗಿ ಈಗ ನಿವೃತ್ತರಾಗಿರುವವರು) ಎನ್. ಡಿ. ಕೃಷ್ಣಮೂರ್ತಿಯವರನ್ನು ಕಾರಂತ್-ಪ್ರೇಮಾ ಅವರ ವಿವಾಹ ಸಾಧ್ಯವೋ ಎಂದು ಕೇಳಿದರು. ಕೃಷ್ಣಮೂರ್ತಿಯವರ ಪತ್ನಿ ಶ್ರೀಮತಿ ಚಂಪಾರವರು ಪ್ರೇಮಾ ಅವರ ಜೊತೆ ಟಿ. ಸಿ. ಎಚ್. ಮಾಡಿದ್ದರು. ಹೀಗಾಗಿ ನಾನು ಮತ್ತು ಎನ್. ಡಿ. ಕೃಷ್ಣಮೂರ್ತಿಯವರು ಕಾರಂತರಿಗೆ ಪ್ರೇಮಾರವರ ಪರಿಚಯ ಮಾಡಿಸಿ ಇಬ್ಬರನ್ನೂ ಲಾಲ್‌ಬಾಗ್‌ನ ಬಾಲವನದಲ್ಲಿ ಕೂರಿಸಿ, ಅವರ ಮುಂದೆ ಕಡಲೆಕಾಯಿ ಗುಡ್ಡೆ ಹಾಕಿ, ನೀವು ನೀವು ಮಾತನಾಡಿಕೊಳ್ಳಿ ಎಂದು ಹೇಳಿ ನಾವಿಬ್ಬರೂ ಹೊರಗೆ ಹೋಗಿ ಕಾಮತ್ ಹೋಟಲಿನಲ್ಲಿ ಕುಳಿತೆವು. ಅವರಿಬ್ಬರೂ ಗಂಟೆಗಟ್ಟಳೆ ಮಾತನಾಡುತ್ತಿದ್ದರು. ಮದುವೆಗೆ ಮುನ್ನ ಗಡ್ಡ ತೆಗೆಯಬೇಕೆಂದು ಪ್ರೇಮಾರವರು ಸೂಚನೆ ಇತ್ತರು. ಮುಂದೆ ಇದು ಎಂತಹ ಅಪರೂಪದ ಜೋಡಿಯಾಯಿತು! ಪ್ರತಿಭಾವಂತರಾದ ಪ್ರೇಮಾರವರೂ ಕಾರಂತರ ಎತ್ತರಕ್ಕೇ ಬೆಳೆಯತೊಡಗಿದರು.

ವಿವಾಹದ ನಂತರ ದಂಪತಿಗಳು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಮುಖ್ಯವಾಗಿ ಆರ್ಥಿಕ ಸಮಸ್ಯೆ. ಕಾರಂತರು ಪತ್ನಿಯನ್ನು ತಮ್ಮ ಜೊತೆಗೆ ಬನಾರಸ್‌ಗೆ ಕರೆದುಕೊಂಡು ಹೋಗುವಂತಿರಲಿಲ್ಲ. ಪ್ರೇಮಾ ಅವರು ಹೋಂ ಸ್ಕೂಲಿನ ಕೆಲಸವನ್ನು ಬಿಟ್ಟಿದ್ದರು. ಪತ್ನಿಯನ್ನು ಕೆಲ ದಿನಗಳಿಗಾಗಿ ಮದರಾಸಿನಲ್ಲಿ ಜಿ. ವಿ. ಐಯ್ಯರ್ ಕುಟುಂಬದೊಡನೆ ಬಿಟ್ಟು ಕಾರಂತ್ ತಮ್ಮ ವ್ಯಾಸಂಗವನ್ನು ಪೂರ್ತಿ ಗೊಳಿಸಲು ಬನಾರಸ್‌ಗೆ ಹೋದರು. ಈ ಸ್ಥಿತಿಯಲ್ಲಿ ಅವರು ಯಾವ ರಾಜಕೀಯ ಚಟುವಟಿಕೆಗಳಲ್ಲೂ ಹೆಚ್ಚು ಸಕ್ರಿಯವಾಗಿ ಭಾಗವಹಿಸುವಂತಿರಲಿಲ್ಲ. ಆಗ್ಗೆ ಬನಾರಸ್ ವಿಶ್ವವಿದ್ಯಾಲಯದಲ್ಲಿ ನೌಟಿಯಾಲ್ ಎಂಬುವರು ವಿದ್ಯಾರ್ಥಿ ಸಂಘದ ಅಧ್ಯಕ್ಷರಾಗಿದ್ದರು. ಬನಾರಸ್‌ನಲ್ಲಿ ಒಂದು ದಿನ ಕಾರಂತರು ಉತ್ತರ ಪ್ರದೇಶದ ಕಮ್ಯೂನಿಸ್ಟ್ ಪಕ್ಷದ ಒಬ್ಬ ನಾಯಕರ ಪರಿಚಯ ಮಾಡಿಸಿದಂತೆ ಜ್ಞಾಪಕ. ಅವರ ಹೆಸರು ರುಸ್ತುಂ ಸೈಟಿನ್ ಇರಬಹುದು. ಈ ವಿಷಯ ನನ್ನ ಸ್ಮೃತಿಗಹ್ವರದಲ್ಲಿ ಎಲ್ಲಿಯೋ ಹುದುಗಿಹೋಗಿದೆ.



ಮಾರ್ಚ್ ೨೦೦೦, ಕಾರಂತ ದಂಪತಿಗಳೊಂದಿಗೆ ವಿರಾಜ್

ನಿಜ ಹೇಳಬೇಕೆಂದರೆ ಬಿ. ವಿ. ಕಾರಂತರು ಗುಬ್ಬಿ ಥಿಯೇಟರ್ ಸೇರಿದಾಗಿನಿಂದ ಕೊನೆಗಾಲದವರೆಗೂ ನಾಟಕ ಕಲೆ, ರಂಗಭೂಮಿ, ಇವುಗಳಿಗೆ ಪೂರಕವಾದ ಸಂಗೀತವನ್ನು ಬಿಟ್ಟು ಇನ್ನಾವ ವಿಷಯವನ್ನೂ ಗಂಭೀರವಾಗಿ ಪರಿಗಣಿಸಿದವರೇ ಅಲ್ಲ. ಅಷ್ಟು ತನ್ಮಯತೆ. ಎಂ. ಎ. ಮುಗಿಸಿ ಡಾಕ್ಟರೇಟ್‌ಗಾಗಿ ಥೀಸಿಸ್ ಬರೆಯಲು ಕಾರಂತರು ಯೋಚಿಸಿದ್ದರು. ಕೊನೆಗೊಂದು ದಿನ ದೆಹಲಿಯಿಂದ ಕಾರಂತ ದಂಪತಿಗಳಿಗೆ ಒಂದೇ ಪೋಸ್ಟ್‌ನಲ್ಲಿ ಶುಭ ಸಮಾಚಾರ ಹೊತ್ತ ಎರಡು ಪತ್ರಗಳು ಬಂದವು. ದೆಹಲಿಯ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾದಲ್ಲಿ ತರಬೇತಿ ಪಡೆಯಲು ಕಾರಂತರನ್ನು ಆಯ್ಕೆ ಮಾಡಿ ಸ್ಕಾಲರ್‌ಷಿಪ್ ಕೊಡಲಾಯಿತು ಹಾಗೂ ಶ್ರೀಮತಿ ಪ್ರೇಮಾರವರಿಗೆ ದೆಹಲಿಯ ಒಂದು ಸ್ಕೂಲಿನಲ್ಲಿ ಅಧ್ಯಾಪಕಿಯ ಕೆಲಸ ಸಿಕ್ಕಿತು. ಆಗ ಇಬ್ಬರೂ ಒಟ್ಟಿಗೇ ಇರುವ ಅವಕಾಶ ದೊರೆಯಿತು.

೧೯೬೬ರಲ್ಲಿ ಕರ್ನಾಟಕ ಸರಕಾರ ಕಾರಂತರನ್ನು ಆಯ್ದ ಕೆಲವು ರಂಗಾಸಕ್ತರಿಗೆ ತರಬೇತಿ ಕೊಡಲು ಬೆಂಗಳೂರಿಗೆ ಕರೆಸಿಕೊಂಡಿತ್ತು. ಆಗ ಕಾರಂತರು ''ನಿನ್ನ ಮನೆಯಲ್ಲೇ ನಾನು ಇರಬೇಕಾಗುತ್ತದೆ. ನಿನಗೇನಾದರೂ ತೊಂದರೆಯಾದರೆ ತಡೆದುಕೋ, ಬೇರೆ ದಾರಿ ಇಲ್ಲ'' ಎಂದು ಬರೆದರು. ಮಲ್ಲೇಶ್ವರದ ಈಜುಕೊಳದ ಬಡಾವಣೆಯ ವಠಾರದಲ್ಲಿ ನನ್ನ ಚಿಕ್ಕ ಮನೆ. ಅಲ್ಲಿಯೇ ಒಂದು ಚಿಕ್ಕ ಕೋಣೆಯಲ್ಲಿ ಕಾರಂತರು ನನ್ನೊಂದಿಗೆ ಒಂದು ತಿಂಗಳ ಕಾಲ ವಾಸಿಸಿದ್ದರು. ಈ ಸಂದರ್ಭದಲ್ಲಿ ನಡೆದ ಒಂದು ಮನೋರಂಜಕ ಘಟನೆಯನ್ನು ಹೇಳುತ್ತೇನೆ : ಒಂದು ದಿನ ಕಾರಂತರು ಪ್ರಶಿಕ್ಷಣಾರ್ಥಿಗಳ ಸಲುವಾಗಿ ಯಾವುದೋ ಒಂದು ಮಾಡೆಲ್ ರಚಿಸುತ್ತಾ ನನಗೆ ರಂಗಸಜ್ಜಿಕೆಯಲ್ಲಿ ಏನು ಹೊಸತು ಬಂದಿದೆ ಎಂದು ವಿವರಿಸುತ್ತಿದ್ದರು. ಆಗ ಸ್ವಲ್ಪ ದಿನ ಕಾರಂತರು ದಾಡಿಯನ್ನು ತೆಗೆದುದೇ ಅಲ್ಲದೆ ಬಹಳ ಸಣ್ಣದಾದ ಮೀಸೆ ಬಿಟ್ಟಿದ್ದರು. ಒಂದೊಂದೇ ಕೂದಲು ಸಾಲಾಗಿ ನಿಂತಂತೆ, ಮೂಗಿನ ಕೆಳಗೆ ಪೆನ್ಸಿಲ್‌ನಿಂದ ಗೆರೆ ಎಳೆದಂತಿತ್ತು. ಅದೇ ಸಮಯಕ್ಕೆ ನಮ್ಮ ಮನೆಯ ಹತ್ತಿರವೇ ವಾಸಿಸುತ್ತಿದ್ದ ಸಿ. ವಿ. ಜಯತೀರ್ಥರು ನಮ್ಮ ಮನೆಗೆ ಬಂದರು. ಆಗ ಜಯತೀರ್ಥರಿಗೆ ದಟ್ಟವಾದ ದೊಡ್ಡ ಮೀಸೆ ಇತ್ತು. ಕಾರಂತರು ನನಗೆ ವಿವರಿಸುತ್ತಾ ''ನೋಡಯ್ಯಾ, ಈಗ ಸಜೆಸ್ಟಿವ್ ಆರ್ಟ್ ಅಂತ ಶುರುವಾಗಿದೆ. ರಂಗ ಮಂಚದ ಮೇಲೆ ಇಡೀ ಕಾಡಿನ ದೃಶ್ಯವನ್ನು ತೋರಿಸುವುದು ಸಾಧ್ಯವಿಲ್ಲ ತಾನೆ ! ಹಾಗೆ ಮಾಡಿದರೂ ವೃಥಾ ಶ್ರಮ, ಮುಖ್ಯ ವಿಷಯದ ಕಡೆ ಗಮನವಿರುವುದಿಲ್ಲ. ಅಲ್ಲದೆ ಪ್ರೇಕ್ಷಕರೇನೂ ದಡ್ಡರಲ್ಲ. ಈಗ ಈ ಸಜೆಸ್ಟಿವ್ ಆರ್ಟ್ ಪ್ರಕಾರ ಒಂದು ಮರದ ಕೊಂಬೆಯನ್ನು ಹಾಕಿದರೂ ಅದು ಕಾಡು ಎಂದು ತಿಳಿದುಕೋಬೇಕು. ಅದೇ ನಾವು ದರ್ಶಕರಿಗೆ ಸಜೆಸ್ಟ್ ಮಾಡುವುದು...'' ಅಷ್ಟು ಹೊತ್ತಿಗೆ ಒಳಗೆ ಬಂದಿದ್ದ ಜಯತೀರ್ಥರು ಕಾರಂತರ ಮೀಸೆಯನ್ನು ನೋಡಿದ್ದೇ ತಡ ''ಇದೇನು ಮಹರಾಯ್ರ, ಮೀಸೆ ಹಿಂಗಿದೆ'' ಎಂದು ಗಹಗಹಿಸಿ ನಗತೊಡಗಿದರು. ಆಗ ನಾನು ಜಯತೀರ್ಥರಿಗೆ ಹೇಳಿದೆ ''ನಗಬೇಡ್ರೀ, ಈಗ ಇವನು ಸಜೆಸ್ಟಿವ್ ಆರ್ಟ್‌ನ ಸಾಧನೆಯಲ್ಲಿ ತೊಡಗಿದ್ದಾನೆ. ಈಗ ಇವನ ಮೂಗಿನ ಕೆಳಗೆ ಎರಡೇ ಕೂದಲಿದ್ದರೂ

ನೀವು ಅದನ್ನು ಮೀಸೆ ಎಂದು ಪರಿಗಣಿಸಬೇಕು. ಇಟ್ ಈಸ್ ಜಸ್ಟ್ ಎ ಸಜೆಷನ್ ಅಂತೆ'', ಎಂದು ಹೇಳಿದೆ. ಕಾರಂತರು ಹೊಟ್ಟೆ ಹುಣ್ಣಾಗುವಂತೆ ನಕ್ಕರು. ಮುಂದೆ ಬರ ಬರುತ್ತಾ ಇಂತಹ ಮುಕ್ತ ನಗೆ ಅವರ ಜೀವನದಲ್ಲಿ ಕಡಿಮೆಯಾಗತೊಡಗಿತು. ಹಾಗೆಯೇ ನಗುತ್ತಿರುವಂತಾಗಿದ್ದರೆ ಅವರಿಗೆ ಈ ರೋಗ ಬಾಧಿಸುತ್ತಿರಲಿಲ್ಲವೇನೋ. ಕ್ಯಾನ್ಸರ್ ಇಲ್ಲದಿದ್ದರೆ ಕಾರಂತರು ಕೊನೆಯ ಪಕ್ಷ ಇನ್ನೂ ಹತ್ತು ವರ್ಷ ಆರಾಮವಾಗಿ ಜೀವಿಸಬಹುದಾಗಿತ್ತು. ರುಗ್ಣಾವಸ್ಥೆಯಲ್ಲೂ ಕಾರಂತರು ಒಬ್ಬರೇ ಬೊಂಬಾಯಿ, ದೆಹಲಿ, ಅಸ್ಸಾಂ, ಮುಂತಾದ ಪ್ರದೇಶಗಳಿಗೆ ಹೋಗಿ ರಂಗಶಿಕ್ಷಣವನ್ನು ಕೊಡುತ್ತಿದ್ದರು.

ಕಡು ಬಡತನದಲ್ಲೂ, ಹೊಟ್ಟೆಗೆ ಊಟ ದೊರಕದ ಕಾಲದಲ್ಲೂ ಕಾರಂತರು ಪುಸ್ತಕಗಳನ್ನು ಕೊಂಡುಕೊಳ್ಳುತ್ತಲೇ ಇದ್ದರು. ಇವರಂತಹ ಪುಸ್ತಕ ಪ್ರೇಮಿಗಳು ಬಲು ಅಪರೂಪ. ಅವರ ಮನೆಯಲ್ಲಿ ನಾಟಕಶಾಸ್ತ್ರ ಹಾಗೂ ಇತರ ಕಲೆಗಳಿಗೆ ಸಂಬಂಧಿಸಿದ ಪುಸ್ತಕಗಳ ದೊಡ್ಡ ಭಂಡಾರವೇ ಇದೆ. ಅವರು ನಿಧನ ಹೊಂದುವ ಕೆಲವು ದಿನಗಳ ಮೊದಲು ಪುಸ್ತಕಗಳನ್ನು ಕೊಳ್ಳುತ್ತಿದ್ದರು. ಯಾರೋ ಪತ್ರಕರ್ತರು ನಿಮ್ಮಲ್ಲಿ ಏನಿದೆ ಎಂದು ಕೇಳಿದಾಗ ಕಾರಂತರು ''ನನ್ನಲ್ಲಿ ಪುಸ್ತಕಗಳಿವೆ'' ಎಂದು ಉತ್ತರಿಸಿದರು. ಒಂದಂತೂ ನಿಜ, ಕಾರಂತರು ಸಮಾಜದಿಂದ ಏನು ಪಡೆದರೋ ಅದಕ್ಕೆ ನೂರರಷ್ಟು ಸಾವಿರದಷ್ಟು ಬಿಟ್ಟು ಹೋಗಿದ್ದಾರೆ.

ಈಗ ಬಹಳ ಪ್ರಸಿದ್ಧರಾಗಿರುವ ಅನೇಕ ಹಿಂದಿ ಸಿನೆಮಾ ನಟರು ಕಾರಂತರಿಂದ ತರಬೇತಿಯನ್ನು ಪಡೆದು ಕೋಟ್ಯಾಧೀಶರಾಗಿದ್ದಾರೆ. ಆದರೆ ಕಾರಂತರು ಅನುಭವ ಸಂಚಯ, ಮಿತ್ರ ಸಂಚಯ, ಪುಸ್ತಕ ಸಂಚಯ ಮಾಡಿದರೇ ಹೊರತು ಧನ ಸಂಚಯ ಎಂದೂ ಮಾಡಲೇ ಇಲ್ಲ. ಕೇವಲ ಎರಡೇ ವರ್ಷಗಳ ಹಿಂದೆ ''ನಾನು ಬೊಂಬಾಯಿಗೆ (ಅಥವಾ ಇನ್ಯಾವುದೋ ಜಾಗಕ್ಕೆ?) ಒಂದು ತಿಂಗಳಿಗಾಗಿ ಹೋಗುತ್ತಿದ್ದೇನೆ, ಸ್ವಲ್ಪ ಹಣ ಬರುತ್ತೆ. ಆಗ, ಅಂದರೆ ೨-೩ ತಿಂಗಳಲ್ಲಿ, ವಾಪಸು ಮಾಡುತ್ತೇನೆ, ಬೇರೆ ಯಾರನ್ನೂ ಕೇಳಲಾರೆ, ನೀನು ೨೦,೦೦೦ ರೂಪಾಯಿ ಕೊಟ್ಟಿರು'' ಅಂತ ಕೇಳಿದರು. ನಾನು ಮಾರನೆಯ ದಿನವೇ ಗಿರಿನಗರದ ಅವರ ಮನೆಗೆ ಹೋಗಿ ಪ್ರೇಮಾ ಅವರಿಗೆ ಕಾಣದಂತೆ ೨೦,೦೦೦ ರೂಪಾಯಿ ಕೊಟ್ಟು ಬಂದೆ. ೩೧ನೇ ತಾರೀಖು ಡಿಸೆಂಬರ್ ೨೦೦೦ ದಂದು ನಮ್ಮ ಮನೆಯ ಹತ್ತಿರವೇ ಇರುವ ಶ್ರೀ ಗಿರೀಶ್ ಕಾರ್ನಾಡ್ ಅವರ ಮನೆಗೆ ಪಾರ್ಟಿಗಾಗಿ ಬಂದ ಕಾರಂತರು ನನ್ನ ಮನೆಗೆ ಬಂದು ''ನಾಳೆ ಆದರೆ ಹೊಸ ವರ್ಷ ಬಂದುಬಿಡುತ್ತದೆ, ನಾನು ಮಾತಿಗೆ ತಪ್ಪಿದಂತಾಗುತ್ತದೆ. ಆದ್ದರಿಂದ ಇವತ್ತೇ ತಂದಿದ್ದೇನೆ, ತೆಗೆದುಕೋ'' ಎಂದು ಇಪ್ಪತ್ತು ಸಾವಿರ ರೂಪಾಯಿಗಳನ್ನು ವಾಪಸು ಕೊಟ್ಟುಬಿಟ್ಟರು. ಈ ಘಟನೆ ಬಗ್ಗೆ - ಬರೆಯಲು ಮನಸ್ಸು ಬಾರದು, ಬಹಳ ಮುಜುಗರವಾಗುತ್ತದೆ. ಆದರೆ ಏಕೆ ಬರೆದೆನೆಂದರೆ ಕಾರಂತರು ಕೊನೆಗಾಲದಲ್ಲಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ, ತಿಳಿಯದ ಕೆಲವರು ಕಾರಂತರಿಗೇನೂ ಹಣದ ಕೊರತೆ ಇಲ್ಲ ಬೇಕಾದಷ್ಟಿದೆ, ಇಲ್ಲ ಎಂದು ಸುಮ್ಮನೆ ಹೇಳುತ್ತಿದ್ದಾರೆ, ಎಂದಿದ್ದನ್ನು ಕೇಳಿದ್ದೇನೆ. ಈ ಮಹಾನ್ ವ್ಯಕ್ತಿಯ ಬಗ್ಗೆ ಹೀಗೆಯೆ ಮಾತನಾಡುವುದು! ಇದು ಚಾರಿತ್ರ್ಯ ವಧೆಯಲ್ಲವೆ? ತಿಳಿಯದೆ ಏಕೆ ಮಾತನಾಡಬೇಕು?

ಕಾರಂತರು ೧೯೫೩ರಿಂದ ೧೯೬೫ರವರೆಗೂ ಹೈದರಾಬಾದ್ ಮತ್ತು ಬನಾರಸ್‌ಗಳಿಂದ ರಾಜು ಭೈಯಾ (ಅಂದರೆ ನಾನು) ಹೆಸರಿಗೆ ಬರೆದ ಒಂದು ನೂರು ಪತ್ರಗಳು ನನ್ನಲ್ಲಿವೆ. ಇವುಗಳನ್ನು ಹಾಳು ಮಾಡದೆ ನಾನು ಏಕೆ ಸಂಗ್ರಹಿಸಿ ಇಟ್ಟೆನೋ ನನಗೆ ತಿಳಿಯದು. ಹಣದ ಅಭಾವದಿಂದಾಗಿ ಒಂದೊಂದು ಪೋಸ್ಟ್ ಕಾರ್ಡ್‌ನಲ್ಲೂ ಒಂದು ಒಂದೂವರೆ ಪುಟಗಳಷ್ಟು ವಿಷಯವನ್ನು ಹಿಂದೀ ಭಾಷೆಯಲ್ಲಿ ಶಿರೋರೇಖೆ ಇಲ್ಲದೆ ಸಣ್ಣಗೆ ಬರೆದಿದ್ದಾರೆ. ಈ ಪತ್ರಗಳನ್ನು ಓದಿದರೆ ಈ ವ್ಯಕ್ತಿ ಎಂತೆಂತಹ ಪರಿಸ್ಥಿತಿಗಳನ್ನು ಎದುರಿಸಿ ಜೀವನ ಸಾಗಿಸಿದ್ದಾರೆ ಎಂದು ತಿಳಿಯುತ್ತದೆ. ಓದಿದವರ ಕಣ್ಣಲ್ಲಿ ನೀರು ಬಾರದೇ ಇರುವುದಿಲ್ಲ. ಬಿ. ವಿ. ಕಾರಂತರ ಚೇತನ ಈಗಿನ ರಂಗಕರ್ಮಿಗಳಿಗೆ ದಾರಿ ದೀಪವಾಗಲಿ. ಅವರ ಆದರ್ಶಗಳನ್ನು ಮುಂದುವರಿಸಿಕೊಂಡು ಹೋಗಲಿ. ಒಂದು ದಿನ ನಾನು ಕಾರಂತರಿಗೆ ''ಏನಯ್ಯಾ, ಕೆಲವರು ಕಾರಂತರಿಗಿಂತಲೂ ಚೆನ್ನಾಗಿ ನಾಟಕಗಳನ್ನು ಮಾಡುತ್ತೇವೆ ಎಂದು ಹೇಳುತ್ತಿದ್ದಾರಲ್ಲ'' ಅಂದೆ. ಅದಕ್ಕೆ ಕಾರಂತರು ''ಅದನ್ನೇ ತಾನೆ ನಾನೂ ಬಯಸುವುದು. ಖಂಡಿತ ಅವರು ಚೆನ್ನಾಗಿ ಮಾಡಲಿ'' ಅಂದರು.

**ವೆಂಕಟರಾಜ್ ವಿರಾಜ್**
೬೫೮, ೩೦ನೇ ಮುಖ್ಯರಸ್ತೆ, ೧೮ನೇ ಅಡ್ಡರಸ್ತೆ, ೧ನೇ ಹಂತ, ಜೆ. ಪಿ. ನಗರ, ಬೆಂಗಳೂರು-೫೬೦ ೦೭೮


ಬಿಲ್ ಗೇಟ್ಸ್
2000 ಕೋ.ರೂ. ಬಂಡವಾಳ ಹೂಡಿಕೆ


ಕಾಂಬೋಡಿಯಾಕ್ಕೆ ಭಾರತದ ಸಾಲ


ಇವರದ್ದು ಬಲವಂತದ ಮತಾಂತರವೋ ಸ್ವಯಂಸ್ಫೂರ್ತಿಯಿಂದ ಆದದ್ದೋ?
ತ. ನಾಡಿನಲ್ಲಿ ಬಲವಂತದ ಮತಾಂತರಕ್ಕೆ ನಿಷೇಧ


ಚುನಾವಣೆಯಲ್ಲಿ ಯಶಸ್ಸು
ಮುಸ್ಲಿಮರು
ಮೋದಿ

ಪ್ರೇರಣೆ(ಮಲಯಾಳಿ ಮೂಲ) :
**ವೈಕಂ ಮೊಹಮದ್ ಬಷೀರ್**




# ಆಪದ್ಬಾಂಧವ

ಒಮ್ಮೊಮ್ಮೆ ಮನುಷ್ಯಾಗ ಪಕ್ಕಾ ಉದ್ದೇಶಗಳು ಬರೂದಿಲ್ಲ. ಬರೂದಿಲ್ಲ ಅನ್ನೂದ್ಕಿಂತ ಇರೂಽದಽ ಇಲ್ಲ ಅನ್ನೂದು ಚೊಲೋ ಆಕ್ಕೈತಿ. ನಿಮಗೂ ಹಂಗಾಗಿರಬಹುದು. ಹಿಂಗಽ ನಿಮ್ಮೂರು, ಮನಿ ಬಿಟ್ಟು ಸೊಲ್ಪ ದಿವಸ, ಬ್ಯಾರೇ ದೂರದ ಒಂದು ಊರಿಗೆ ಹೋಗಿರ್ತೀರಿ ಅನ್ಕೊಳ್ರಿ. ಅಲ್ಲೀ ಭಾಷಾ ನಿಮಗ ಬರೂದಿಲ್ಲ. ಇಂಗ್ಲಿಷ್, ಹಿಂದಿ ನಿಮಗ ಬರ್ತಾವ ಖರೆ, ಆದರೆ ಅಲ್ಲೀ ಜನಕ್ಕ ತಿಳಿಯೂದಿಲ್ಲ. ಹಂಗಾದಾಗ ಭಾಳ ತ್ರಾಸ ಆಕ್ಕೈತಿ. ಒಮ್ಮೊಮ್ಮೆಂತೂ ಒಬ್ಬೊಬ್ರಿಗೆ ಇವೆರಡು ಸಮೇತ ಬರೂದಿಲ್ಲ. ಅವಾಗರೆ ಇನ್ನಷ್ಟು ಫಜೀತಿ ಖಾಯಂ ಆಗಿ, ನಾವು ಮಂಗ್ಯಾಗೋಳಾಗಿ ಬಿಡ್ತೇವಿ. ಸುಮ್ ಸುಮ್ಮನ ಎಂಥಾ ಸಮಸ್ಯಾದಾಗ ಸಿಗೇ ಬಿದ್ವ್ಯಲ್ಲಪಾ ಅನಿಸಿಬಿಡ್ತದೆ. ಅವಾಗೇನರೇ, ಯಾರರೇ ಒಂತಟುಕು ಉಪಕಾರ, ಗಿಪಕಾರ ಮಾಡಿಬಿಟ್ರಂತೂ, ದೇವರಽ ಖುದ್ದು ಬಂದು, ಜೀವಾ ಉಳಿಸಿದಂಗ ಆಕ್ಕೈತಿ. ಮುಂದಮುವ್ವತ್ತು ವರ್ಷ ಕಳಿದ್ರೂ, ಹಂಗ ಉಪಕಾರ ಮಾಡಿದಾಂವ, ನಮ್ಮ ನೆನಪಿನ ಹಗೇವಿನ್ಯಾಗ ಖಾಯಂ ಜ್ವಾಳದ ಕಾಳಾಗಿ ಕುಂತುಬಿಡ್ತಾನ. ಹೌದಿಲ್ಲ ಹೇಳ್ರಿ. ಒಮ್ಮೊಮ್ಮಿ ಈ ಉಪಕಾರ ಮಾಡೂ ಮಂದೀಮ್ಯಾಲ ನಂಬಿಕೀನ ಬರಾಂಗಿಲ್ಲ ನೋಡ್ರಿ. ಯಾಕಂದ್ರ ಈಗೀಗ ಹಂತಾ ಮಂದಿ ಬಾಳ ತುಟ್ಟೀ ಆಗ್ಯಾರಲ್ರೀ, ಅದಕ.

ನನ್ನ ಜೀವನದಾಗಿನ ಒಂದು ಭಲೇ ಗಮ್ಮತ್ತಿನ ವಿಚಾರ ನಾ ನಿಮಗ ಹೇಳ್ತೀನಿ ನೋಡ್ರಿ. ಅದನ್ನ ನಾ ಎಂದೂ ಮರಿಯಾಂವಲ್ಲ. ನಮ್ಮ ಸುತ್ತ ಇರೋ ಮಂದ್ಯಾಗ ಸೊಲ್ಪ ಮಂದಿ ಒಳ್ಳೇವ್ರು ಇರ್ತಾರ್ರಿ. ಒಂದೀಸು ಮಂದಿ ಅಗದೀ ಕೆಟ್ಟ ಇರತಾರ. ಕಳ್ಳರೂ, ಕಾಕರೂ ಬೇಕಾದಂಗ ಸಿಗತಾರೇನ್ಯಪಾ. ಮತ್ತ ಮೈ ಅಂಬೂ ಮರಕ್ಕ ಬ್ಯಾನಿ ಗೆದ್ದಲ ಹತ್ತಿ ಈಗಽ ಆಗಽ ಅನ್ನೋ ಅಂತಾವರೂ ಇರ್ತಾರ. ತಮ್ಮದಽ ತಲೀ ಕೆಟ್ಟು ಮಸರು ಗಡಿಗ್ಯಾಗಿ, ಮತ್ತೊಬ್ಬರ ತಲೀ ಕೆಡಿಸೂ ಮಂದಿ ಏನು ಕಮ್ಮಿ ಇಲ್ಲ. ಹಿಂಗಾಗಿ ನಾವು ಈಟಕೂ, ಆಟಕೂ ಅಳದೂ ತೂಗಿ ಮುಂದ ಹೆಜ್ಜೀ ಇಡಬೇಕಾಕ್ಕೈತಿ. ಯಾಕಂತಂದ್ರ, ಜಗತ್ತಿನ್ಯಾಗ ಒಳ್ಳೇದಕ್ಕಿಂತ ಹೆಚ್ಚು ಕೆಟ್ಟದ್ದು ಇರೂದಽ ಸಾಮಾನ್ಯ ಸಂಗ್ತಿ. ಹೌದಿಲ್ರಿ ? ಇದೆಲ್ಲಾ ಸೇರ್ ಉಪ್ಪು ತಿಂದು ನೀರು ಕುಡ್ದಾವ್ರಿಗಷ್ಟೇ ತಿಳಿಯೋ ಮಾತು. ನಾ ಆಗ್ಲೇ ಹೇಳಿದೆ ನೋಡ್ರಿ, ನನ್ನ ಗಮ್ಮತ್ತಿನ ಸಂಗ್ತಿ. ಹೆಂಗೈತಿ ನೋಡ್ರಿ.

ಒಮ್ಮಿ ಕೆಲಸದ ಮ್ಯಾಲ ಒಂದ ವಿಚಿತ್ರ ಊರಿಗೆ ಹೋಗೋ ಅವಕಾಶ ನನಗ ಬಂತು. ದೊಡ್ಡ ದೊಡ್ಡ ಗುಡ್ಡಗಳಂಬೋ ರಾಕ್ಷಸರ ನಡುವೆ, ಕಣಿವೀ ಹಂಗಿದ್ದ ಪ್ರದೇಶದಾಗ, ಇದ್ದ ಊರದು. ಅಲ್ಲಿದ್ದ ನರಮನುಷ್ಯಾರಿಗೆ ಕರುಣಾ, ದಯ ಅಂಬೂ ಒಳ್ಳೇ ಗುಣಗಳ ವಾಸನೀನ ಗೊತ್ತಿರ್ಲಿಲ್ಲ. ದಿನಾ ಒಂದಕೂ, ಕೊಲೆ, ಖೂನಿ, ಸುಲಿಗಿ, ಪಿಕ್‌ಪಾಕೆಟ್‌ನಂತಾ ಕರಕುಶಲ ಚಟುವಟಿಕೆಗೊಳು ಆಗೇ ಆಗ್ತಿದ್ವು. ಅಲ್ಲೀ ಮಂದೀ ಬ್ಯಾರೆ ಯುದ್ಧದಾಗ ಕೆಲಸ ಮಾಡ್ತಿದ್ದವರು. ದುಡ್ಡಿನ ಸಲುವಾಗಿ ಖೂನಿ ಮಾಡ್ಲಿಕ್ಕೂ ಹೇಸದಂತಾ ಮಂದಿ ಅದು. ರೊಕ್ಕಕ್ಕ ಅವರು ಕೊಡ್ತಿದ್ದ ಮಹತ್ವ ಕಂಡು ನನಗರೆ ಭಾಳ ವಿಚಿತ್ರ ಅನ್ನಿಸ್ತಿತ್ತು.

ಹಂತಾ ಊರಾಗ, ಒಂದು ಸಣ್ಣ ಓಣ್ಯಾಗ, ಮೂಲ್ಯಾಗಿದ್ದ ಕಾಗೀ ಗೂಡಿನಂತಾ ಮನ್ಯಾಗ......, ಮನೀ ಎಲ್ಲಿಂದ ಬಂತು ಖೋಲ್ಯಾಗ ಇರೂಽ ಸಕಲ ಸೌಭಾಗ್ಯ ನನ್ನದಾಗಿತ್ತು. ಯಾಕಂದ್ರ, ನನ್ನ ನೌಕರಿ ಅಂಥಾದ್ದಿತ್ತು. ಫ್ಯಾಕ್ಟರೀಯೊಳಗ ಕೆಲಸ ಮಾಡ್ತಿದ್ದ ಕಾರ್ಮಿಕರಿಗೆ, ರಾತ್ರಿ ಒಂಭತ್ತೂವರೀಂದ, ಹನ್ನೊಂದು ಹೊಡಿಯೂತನ, ಇಂಗ್ಲಿಷು ಕಲಸೋ ಕೆಲಸ ನನ್ನದಾಗಿತ್ತು. ಹಿಂಗಾಗಿ ನಾ ಅಲ್ಲಿರಬೇಕಾಗಿತ್ತು. ನಾನರೆ ಅವರಿಗೇಟು ಹೇಳ್ತಿದ್ದೆ. ಅಷ್ಟಽ ಒಂದೀಟು ಇಂಗ್ಲಿಷಿನ್ಯಾಗ ಅಡ್ರಸ್ ಬರಿಯೂದು, ಓದೂದು ಮಾತ್ರ. ಹಂಗ್ ಕಲತು, ಮತ್ತೊಬ್ಬರಿಗೆ ಅಡ್ರಸ್ ಬರದಕೊಟ್ರ, ಸಿಗ್ತಿದ್ದ ನಾಲ್ಕೆಂಟಾಣೆಗೆ ಅವರು ಕಲೀತಿದ್ರು. ನಾ ಕಲಿಸ್ತಿದ್ದೆ. ಇಲ್ಲಾಂದ್ರ ನಾ ಮತ್ತೊಬ್ಬರಿಗೆ ಬರ್ದು ಕೊಟ್ಕೋತ ಕೂಡಬೇಕಾಗ್ತಿತ್ತು. ಅದನ್ನ ತಪ್ಪಿಸ್ಲಿಕ್ಕೆ ಇವರಿಗೆ ನಾ ಹೇಳಿ ಕೊಡ್ತಿದ್ದೆ. ಹಂಗ ಒಂಚೂರು ರೊಕ್ಕ ಸೇರಿದ್ವು. ಆದಾಗೆಲ್ಲಾ ನಾ ಎಲ್ಲಾ ಟೈಮಿನ್ಯಾಗೂ ಮಕ್ಕೊಂಡೇ ಇರಾಂವ ಏನ್ರೀ. ಆದ್ರ ಸಂಜೀ ಮುಂದ ನಾಕಕ್ಕೆ ಎದ್ದುಬಿಡ್ತಿದ್ದೆ. ಹಂಗ್‌ನಾ ಮಾಡ್ತಿದ್ದದ್ದು, ಮಧ್ಯಾಹ್ನ ಊಟದ ಖರ್ಚು ಮತ್ತ ಸಂಜೀ ಚಹಾದ ಖರ್ಚು ಎರಡನ್ನೂ ಉಳಸಾಕ.

ಒಂದಿವ್ಸ ದಿನಾ ಏಳು ಹಂಗ ಎದ್ದಾಂವನ, ನನ್ನ ಕೆಲಸಾ ಎಲ್ಲಾ ಮುಗಿಸಿ, ಸಂಜೀ ಚಹಾ, ರಾತ್ರಿ ಊಟ ಒಮ್ಮೆಲೇ ಮುಗಿಸಿದ್ರಾತು ಅಂತ ಖೋಲಿಯಿಂದ ಹೊರಗ ಬಿದ್ದೆ. ಅವತ್ತ ಏನನ್ನಿಸ್ತೋ ಸೂಟು ಹಾಕಬೇಕು ಅಂತ ಅನ್ನಿಸಿದ್ದಕ್ಕ ನಾ ಸೂಟ ಹಾಕಿದ್ದೆ ಅನ್ನೂದನ್ನ ನೀವ ತಿಳಕೋಬೇಕು. ಕೋಟಿನ ಕಿಶೇದಾಗ ಪರ್ಸ ಇಟಗೊಂಡು ನಡೆದೆ. ಅದರಾಗ ಹದನಾಕು ರೂಪಾಯಿ ರೊಕ್ಕ ಇದ್ದುವೇನ್ರಿ ! ಅವಾಗಿನ ನನ್ನ ಜೀವನದ ಉಳಿತಾಯ ಅಂದ್ರ ಅಷ್ಟಿತ್ತ ನೋಡ್ರಿ.

ಬೆಲ್ಲಕ್ಕ ಇರುಬಿ ಹಿಂಡು ಮುಕುರಿದ್ದಂಗ ಇದ್ದ ಹೊಟೇಲ್ ಒಂದ ಇತ್ತು. ನಾ ಅಲ್ಲಿಗೇನು ಭಾಳಾ ಹೋಗಿದ್ದಿಲ್ಲೆನ್ರಿ. ಅವತ್ತ ಹೋದೆ. ಹೊಟ್ಟಿ ತುಂಬೂ ಮಟಾ ಉಂಡೆ. ಚಪಾತಿ, ಕೋಳೀಪಲ್ಯಾ. ಅದನ್ನೇನ್ ಕೇಳ್ತೀರಿ. ಮತ್ತ ಮ್ಯಾಲ ಚಹಾ ಬ್ಯಾರೆ ತರಸ್ಕೊಂಡು ಕುಡದೆ, ಹನ್ನೊಂದಾಣೀ ಬಿಲ್ಲು ನನ್ನ ಟೇಬಲ್ಲಿಗೆ ಬಂತು.

ರೊಕ್ಕಾ ಕೊಡಬೇಕಂತ ಪಾಕೀಟದಾಗ ಕೈ ಹಾಕಿದೆ ನೋಡ್ರೀ. ಒಂದೇ ಸಲಕ್ಕ ಮೈಪೂರಾ ದಳದಳ ಬೆವತಂಗಾತು. ಅಲ್ಲೀತನಾ ಕಂಠಮಟಾ ಉಂಡಿದ್ದೆಲ್ಲಾ ಒಮ್ಮಿಗೇ ಜೀರ್ಣನಽ ಆದಂಗಾತು. ಯಾಕಂತೀರೇನು ? ಕೋಟಿನ್ ಕಿಶೇದಾಗ ಇಟಗೊಂಡಿದ್ದ ಪರ್ಸರೀ, ಮಂಗಮಾಯಾಗೇತಿ !

"ಅರೇ ! ಯಾರೋ ನನ್ನ ಪಾಕಿಟು ಹೊಡದಾರಲ್ರೀ. ಎಂಥಾ ಅನಾಹುತಾತು", ಅಂತ ನನ್ನ ಬಾಯಿಂದ ಒಂದು ಮಾತು ಹೊರಗ ಬಿತ್ತು. ನನ್ನ ಟೇಬಲ್ ಹತ್ರಾನಽ ಆ ಹೋಟೆಲ್ ಮಾಲೀಕನ ಗಲ್ಲಾದ ಡಬ್ಬಿ ಇತ್ತು. ಅಂವಗ ನಾ ಅಂದ್ ಮಾತು ಕಿವೀಗಿ ಬಿತ್ತು. ಅಂಥಾ ತುಂಬಿದ ಮಂದ್ಯಾಗ ಅಂವಾ ಒಂದ್ ದೊಡ್ಡ ಅವಾಜ ಒಗದ. ನನ್ನ ಸನೀಪ ಬಂದಾವನ ನನ್ನ ಕೋಟಿನ ಕಿವಿ ಹಿಡಿದು, ನನ್ನ ಹಿಂದಕೂ, ಮುಂದಕೂ ಅಳ್ಳಾಡಿಸಿ, ಹೇಳಿದ.

"ಯಾಕ್ರೀ ಸಽರ. ಇಂಥಾ ಆಟ ಇಲ್ಲಿ ನಡಿಯೂದಿಲ್ಲ. ತಿಳೀತೇನು. ನಾನು ಇಂಥಾವ್ರಿಗೆ ಭಾಳ ಮಂದೀ ನೋಡೀನಿ. ಸೀದಾ ಸೀದಾ ರೊಕ್ಕ ಇಡ್ರೀ ದಾರಿ ಬಿಡ್ರೀ.... ಇಲ್ಲಾಂ ತಂದ್ರ... ಕಣ್ಣುಗುಡ್ಡಿ ಕಿತ್ತು ಗಲ್ಲಾದಾಗ ಇಟ್ಕೋತೀನಿ."

ಅವನ ಮಾತು ಕೇಳಿ ನನಗ ಕೈಕಾಲು ಥಣ್ಣಗಾಗಿ ಹೋದ್ವು. ಸುತ್ತ ನಿಂತಿದ್ದ ಮಂದೀ ಕಡೆ ನೋಡಿದೆ. ಒಂದೇ ಒಂದು ಮಾರೀಯೊಳಗರೇ ಕರುಣಾ, ದಯಾ ಅಂಬೂದು ಕಂಡುಬರಲಿಲ್ಲ. ಎಲ್ಲಾರೂ ಹಸಿದಿದ್ದ ತೋಳದಂಗ ಕಾಣಿಸ್ತಿದ್ರು.

ಆ ಮಾಲೀಕ ಒಬ್ಬಾಂವ, ಕಣ್ಣುಗುಡ್ಡೀ ಕಿತ್ತತೇನಿ ಅಂತಂದಾನಂದ್ರ, ಕಿತ್ತೇ ಬಿಡೋ ಮನಿಷ್ಯಾನಂಗ ಇದ್ದ. ಧೈರ್ಯ ಮಾಡಿ ಹೇಳಿದೆ:

''ಇಲ್ಲಿ ನೋಡ್ರೀ ಇವರೇ, ಇಗಾs ಈ ನನ್ನ ಕೋಟ ಬಿಚ್ಚಿ ಇಲ್ಲಿಟ್ಟು ಹೋಗಿರ್ತೀನ್ರಿ. ಹೋಗಿ ರೊಕ್ಕ ತಂದು ನಿಮಗ ಒಪ್ಪಿಸ್ತೇನ್ರಿ. ದಯಮಾಡಿ ತಪ್ಪು ತಿಳೀಬ್ಯಾಡ್ರಿ.''

ಅಂವಗ ಅದು ಸರಿ ಅನ್ನಿಸ್ತು ಕಾಣಸ್ತೈತಿ. ಕೋಟ ಕಳಿದು ಅಲ್ಲಿಡು ಅಂದ.

ನಾ ನನ್ನ ಕೋಟು ಕಳಿದು ಅವನ ಮುಂದಿಟ್ಟೆ. ಅದು ಅಲ್ಲಿಗೆ ನಿಲ್ಲನಿಲ್ಲ ನೋಡ್ರೀ.

ಅಂವಾ ನನ್ನ ಶರ್ಟನೂ ಬಿಚ್ಚಿ ಇಡಾಕ ಹೇಳಿದ.

ನಾ ನನ್ನ ಶರ್ಟ ತಗದು ಅಂವಗ ಕೊಟ್ಟೆ.

ಮತ್ತ, ನನ್ನ ಎರಡೂ ಕಾಲಿನ ಬೂಟು ಬಿಚ್ಚಿಡ್ರಿ ಅಂದ.

ವಿಧಿ ಇರಲಿಲ್ಲ. ಪ್ರತಿಭಟನಾ ಮಾಡೂ ಅಷ್ಟು ದಮ್ಮು ನನಗಿರಲಿಲ್ಲ. ಬೂಟ ಸಮೇತ ಬಿಚ್ಚಿಟ್ಟೆ.

ಕಡೀಕ ಪುಣ್ಯಾತ್ಮ (ಪಾಪಾತ್ಮನ ಇದ್ದ ಅಂವಾ) ನನ್ನ ಪ್ಯಾಂಟನೂ ಕಳೀ ಅಂದ! ನನ್ನ ಕಣ್ಣು ಕಿತ್ತು, ಮತ್ತ ಮ್ಯಾಲ ಗೊಮಟೇಶನ್ನ ಮಾಡಿ ಮನೀಗೆ ಕಳಿಸೋ ಯೋಚನಾ ಅವನಿಗೆ ಬಾಳ ಇತ್ತ ಕಾಣಸ್ತೈತಿ.

ಅಷ್ಟರಾಗ ಧೈರ್ಯ ಮಾಡಿ ನಾ ಅಂದೆ :

''ಸsರ ನನ್ನ ಬಿಟ್ಟುಬಿಡ್ರಿ. ಒಳಗ ಏನೂ ಇಲ್ಲ.''

ಅಲ್ಲೀ ಜನ ಎಲ್ಲಾ ಘೊಳ್ ಅಂತ ನಗಾಕ ಚಾಲೂ ಮಾಡಿದ್ರು.

ಅಂವಾ ಅಂದ : ''ಏ ತಗೀರಿ ಸಾಕು. ನಾ ಹಂಗ ಸುಲಭಕ್ಕ ನಂಬೂ ಮನಷ್ಯಾ ಅಲ್ಲ. ಹಿಂಗ್ ಒಲ್ಲ್ಯ ಅಂತೀರಿ ಅಂದ್ರ, ಒಳಾಗ ರೊಕ್ಕ ಇದ್ದೇ ಇರತಾವು. ಜಲ್ದೀ ತಗೀರಿ.''

ನನ್ನ ಕೈಯಾಗಂತೂ, ಪ್ಯಾಂಟ ಕಳಿಯೂದು ಸಾಧ್ಯಾನೇ ಇರಲಿಲ್ಲ. ಅಷ್ಟು ಮಂದೀ ಮುಂದ, ಒಬ್ಬ ಕುರುಡ ಬರೇ ಬತ್ಲೆ ನಿಂತ ಚಿತ್ರ ನನ್ನ ಕಣ್ಣಗ ಬಂದು, ಕಣ್ಣೆಲ್ಲಾ ಮಂಜ ಮಂಜಾದ್ವು. ಬದುಕು ಅಲ್ಲಿಗೇ ಮುಗದs ಹೋತು ಅಂತ ಅನಿಸಿಬಿಡ್ತು. ಆತು, ಇನ್ನೇನು, ದೇವರ ಇಚ್ಛಾದಾಗ, ನನ್ನ ಮರ್ಯಾದೀ ಹಿಂಗ ಹೋಗಬೇಕಾಗೇತಿ ಅಂತ ಐತೋ ಏನೋ, ತಡಿಯೋರ್ಯಾರು ? ಆಗಿದ್ದಾಗ್ಲಿ ಅಂತ ಪ್ಯಾಂಟಿನ ಬಟನ್ ಉಚ್ಚಾಕ ಚಾಲೂ ಮಾಡಿದೆ. ಒಂದೊಂದs ಬಟನ್ ತೆಗೆದೆ. ಇನ್ನೇನ ಕಳೀಬೇಕು, ಒಂದ ಗಟ್ಟಿ ದನಿ ಕೇಳಿಸ್ತು.

''ನಿಂದರ್ರಿ, ನಿಮ್ಮ ರೊಕ್ಕಾ ನಾ ಕೊಡ್ತೀನಿ.''

ಮಂದಿ ಎಲ್ಲಾ ದನಿ ಬಂದ ಕಡೆ ಹೊಳ್ಳಿ ನೋಡ್ತು.

ಅಗದೀ ಟಿಪ್‌ಟಾಪ್ ಪ್ಯಾಂಟ, ಶರ್ಟ ಹಾಕ್ಕೊಂಡಿದ್ದಾಂವ ಒಬ್ಬ ಪುಣ್ಯಾತ್ಮ ಅಲ್ಲಿ ನಿಂತಿದ್ದ. ಬಿಳೀ ಪ್ಯಾಂಟು, ಕೆಂಪು ಬಣ್ಣದ ಶರ್ಟ ಹಾಕಿದ್ದ. ಕಣ್ಣಂತೂ ಒಳ್ಳೇ ನೀಲಿಗಾಜಿನ ಗೋಲಿ ಇದ್ದಂಗ ಇದ್ವು. ಗಿರಿಜಾ ಮೀಸೀ ಬ್ಯಾರೇ ಬಿಟ್ಟಿದ್ದ. ಆ ಊರಾಗ ನೀಲಿ ಕಣ್ಣಿನ ಮಂದಿ ಅಂಥಾ ವಿಶೇಷದವರೇನಲ್ಲ ಬಿಡ್ರಿ. ಅಂವಾ ಸೀದಾ ಮಾಲಕ ನಿಂತಕಡೆ ಬಂದು,

''ಇವ್ರು ಉಂಡಿದ್ದ ರೊಕ್ಕ ಎಷ್ಟಾಗೇದ್ರಿ ?'' ಅಂದ.

''ಹನ್ನೊಂದಾಣೆ'' ಮಾಲಕ ಅಂದ. ಅವನ ದರ್ಪ ಈಗ ಒಮ್ಮೆಲೇ ಕಮ್ಮಿ ಆದಂಗ ಕಾಣಸ್ತು.

ಅಂವಾ ಅಷ್ಟು ರೊಕ್ಕ ಎಣಿಸಿ ಇವನ ಕೈಯಾಗ ಇಟ್ಟ, ನನ್ನ ಕಡೀ ತಿರುಗಿ ಅಂದ.

''ಸsರ ನೀವು ನಿಮ್ಮ ಅರಿವೀ ಹಾಕ್ಕೋರಿ.''

ನನಗ ಅಷ್ಟೇ ಸಾಕಾಗಿತ್ತು. ಲಗೂಲಗೂ ಎಲ್ಲಾ ಇಸ್ಕೊಂಡು ಹಾಕ್ಕೊಂಡೆ.

''ಬರ್ರಿ'' ಅಂವಾ ಕರೆದ. ನಾ ಸುಮ್ಮನ ಮೂಕ ಎತ್ತು ಹೊಂಟಂಗ ಅವನ ಬೆನ್ನ ಹಿಂದ ನಡದೆ. ಮನಸಿನ ತುಂಬಾ ಪುಣ್ಯಾತ್ಮನ ಉಪಕಾರನೇ ತುಂಬಿಹೋಗಿತ್ತು.

ಖರೇವಂದ್ರೂ, ಆ ದೇವರು ಕಳಿಸ್ಯಾನ. ಇಲ್ಲಾಂದ್ರ ನನ್ನ ಮರ್ಯಾದೀ! ಶಿವನೇ. ಒಂದ ಮೊಮೆಂಟಕ್ಕ ನಾ ಭಾಳ ಭಾವುಕ ಆಗೀನಿ ಅನ್ನಸ್ತು. ಏನ ಮಾತಾಡ್ಲಿ, ಏನs ಬಿಡ್ಲಿ ಅನ್ನೂ ಹಂಗಾಗಿತ್ತು. ಸ್ವಲ್ಪ ದೂರ ಸುಮ್ಮನ ನಡೆದ ಮ್ಯಾಲ ನನಗ ಏನಾರೆ ಮಾತಾಡಬೇಕು ಅನ್ನಸ್ತು.

''ಇವರs ನಿಮ್ಮಿಂದ ಭಾಳ ಉಪಕಾರಾತ್ರಿ. ಈ ಊರಿಗೆ ಬಂದಾಗಿಂದ ಇಷ್ಟ ಒಳ್ಳೇ ಮಂದೀನ್ನ ನಾ ಕಂಡಿದ್ದೇ ಇಲ್ಲ.''

ಅಂವಾ ಸುಮ್ಮನ ಒಂದ್ ನಗಿ ನಕ್ಕ.

ಮತ್ತೊಂದೀಟು ದೂರ ನಡೆದಮ್ಯಾಲ ಅವನೇ ಕೇಳಿದ.

''ನಿಮ್ಮ ಹೆಸರೇನಂದ್ರಿ ?''

ಅಷ್ಟ ಕೇಳಿದ್ದ ಸಾಕಾತು ನನಗ. ನನ್ನ ಹೆಸರು, ಊರು, ಆ ಊರಿಗ್ಯಾಕ ಬಂದೀನಿ. ಎಲ್ಲಾ ವಡವಡ ಹೇಳಿಬಿಟ್ಟೆ. ತಿರುಗಿ ಅವನ ಹೆಸರು ಕೇಳಿದೆ.

''ನನಗ ಯಾವ ಹೆಸರೂ ಇಲ್ಲ. ಅನಾಮಧೇಯ ಅಂತ ಬೇಕಾರ ಕರ್ರ್ಯೋರಿ.''

ನಾ ಅಂದೆ, ''ಹಂಗ್ಯಾಕಂತೀರಿ, ನಿಮ್ಮ ಹೆಸರು ಭಾಳ ಮಾಡಿ 'ಆಪದ್ಬಾಂಧವ' ಇರಲಿಕ್ಕ ಬೇಕು. ಹ್ಹಹ್ಹ.''

ಆದರೆ ಈ ಸಲ ಅವ ನಗಲಿಲ್ಲ. ಸುಮ್ಮ ಮತ್ತಿಷ್ಟು ದೂರ ನಡದ್ವಿ. ಒಂದು ಸೇತುವಿ ಬಂತು. ಜಾಗಾ ಅಗದೀ ನಿರ್ಜನ ಇತ್ತು. ಅಂವ ನಿಂತ. ನಾನೂ ನಿಂತೆ. ಸುತ್ತಲೂ ಒಮ್ಮೆ ಅಂವಾ ನೋಡಿದ. ಯಾರೂ ಕಾಣಲಿಲ್ಲ.

''ಇಲ್ಲಿ ನೋಡ್ರಿ ಇವರs, ಇನ್ನ ನೀವು ನಡೀರಿ. ತಿರುಗಿ ಈ ಕಡಿ ಕಣ್ಣ ಸಮೇತ ಹಾಯಿಸಬಾರದು. ನನ್ನಂತಾ ಒಬ್ಬ ಮನುಷ್ಯನ್ನ ನೋಡಿದೇನಪಾ ಅಂತ ಯಾರಾರೆ ನಿಮಗ ಕೇಳಿದರಂದ್ರ ಇಲ್ಲ ಅನಬೇಕು. ತಿಳೀತೇನು ?''

ನನಗ ಒಂದೀಟು ಅನುಮಾನ ಬಂತು. ಅಂವಾ ಅಂದಿದ್ದೂ ಸೊಲ್ಪ ಅರ್ಥ ಆತು. ಸುಮ್ಮ 'ಹೂಂ' ಅಂದೆ.

ಅಂವಾ, ತನ್ನ ಹಂತ್ಯಾಕ ಇದ್ದ ನಾಲ್ಕೈದು ಪರ್ಸ್ ಹೊರಗ ತಗದ.

''ಐದು ! ........ಶಿವ ಶಿವಾ, ಅರೇ, ನನ್ನ ಪರ್ಸ್ ! ಅದರಾಗ ಐತಲ್ಲ !''

''ಇದರಾಗ ನಿಮ್ದು ಪಾಕೀಟ ಯಾವದರಿ ? ಆರಿಸ್ಕೋರಿ'' ಅವ ಮುಂದ ಚಾಚಿದ. ನಾ ನನ್ನ ಪರ್ಸ ತೊಗೊಂಡೆ.

''ತಗದ ನೋಡ್ರಿ ರೊಕ್ಕ ಅದಾವೇನ ನೋಡ್ಕೋರಿ.''

ನಾ ತಗದ ನೋಡಿದೆ. ಚೂರಂದ್ರ ಚೂರೂ ಕೊಂಕಲಾರದಂಗ ರೊಕ್ಕ ಒಳಗ ಕುಂತಿದ್ದವು. ಮತ್ತೆ ನನ್ನ ಪರ್ಸು ನನ್ನ ಕೋಟಿನ ಕಿಶೆ ಸೇರಿತು.

ಅಂವಾ ಕಣ್ಣೇಲೇ ನನಗ ಅಲ್ಲಿಂದ ಹೋಗಲಿಕ್ಕೆ ಸೂಚನಾ ಕೊಟ್ಟ.

'' ಹೋಗಿ ಬರ್ರಿ. ದೇವರು ನಿಮಗ ಒಳ್ಳೇದs ಮಾಡ್ಲಿ.''

ನಾನೂ ಗಟ್ಟಿ ಧೈರ್ಯ ಮಾಡಿ ಅಂವಗ ತಿರಗಿ ಅಂದೆ, ''ದೇವರು ನಿಮಗೂ ಒಳ್ಳೇದs ಮಾಡ್ಲಿ.''


ಕನ್ನಡಕ್ಕೆ : **ಛಾಯಾಭಗವತಿ**

c/o ಶ್ರೀ ಬಿ. ಮಂಜುನಾಥ, ನಂ. ೨೬೬, ೩ನೇ [illegible]

೨ನೇ ಬ್ಲಾಕ್, ವಿದ್ಯಾವರ್ಧಕ ಮಹಿಳಾ ಕಾಲೇಜು [illegible]

ಬಸವೇಶ್ವರನಗರ, ಬೆಂಗಳೂರು - [illegible]

# ಕರ್ನಾಟಕ ರಾಜ್ಯೋತ್ಸವ

''ಎಲ್ಲಾದರು ಇರು ಎಂತಾದರು ಇರು ಎಂದೆಂದಿಗೂ ನೀ ಕನ್ನಡವಾಗಿರು
ಕನ್ನಡ ಗೋವಿನ ಓ ಮುದ್ದಿನ ಕರು ಕನ್ನಡತನ ಒಂದಿದ್ದರೆ ನೀನೆಮಗೆ ಕಲ್ಪತರು''

*-ರಾಷ್ಟ್ರಕವಿ ಕುವೆಂಪು*

ಕನ್ನಡ ಕುಲಪುತ್ರರೆಲ್ಲರ ಅವಿರತ ಶ್ರಮ ಮತ್ತು ಮಹತ್ಕಾರ್ಯದ ಫಲವೇ ಏಕೀಕೃತ ಕರ್ನಾಟಕ. 1956 ನವೆಂಬರ್ 1 ರಂದು ಚೆಲುವ ಕನ್ನಡನಾಡು – ''ಕರ್ನಾಟಕ''ದ ಉದಯ.

ಈ ಕರ್ನಾಟಕ ಮನ ಪುಳಕಿತಗೊಳಿಸುವ ಪುಣ್ಯಭೂಮಿ. ಅಸಾಧಾರಣವಾದುದನ್ನು ಸಾಧಿಸಲು ಸ್ಫೂರ್ತಿ ನೀಡುವ ನೆಲ, ಕಲೆಗಳ ತವರು. ಸಾಹಿತ್ಯ ಸಂಸ್ಕೃತಿಗಳ ಆಗರ. ಜ್ಞಾನದ ಅಪೂರ್ವ ಭಂಡಾರ. ಪಂಪ, ರನ್ನ, ಪೊನ್ನ, ಜನ್ನರಂತಹ ಕವಿಪುಂಗವರೂ, ಬಸವ, ಅಲ್ಲಮರಂತಹ ಶ್ರೇಷ್ಠ ವಚನಕಾರರೂ, ದಾಸವರೇಣ್ಯರೂ ತಮ್ಮ ತನುಮನಧನಗಳಿಂದ ಕನ್ನಡ ಸಾಹಿತ್ಯ, ಸಂಸ್ಕೃತಿಯನ್ನು ಶ್ರೀಮಂತಗೊಳಿಸಿ ಚಿರಸ್ಮರಣೀಯರಾಗಿದ್ದಾರೆ. ಸಾಹಿತ್ಯ ಕ್ಷೇತ್ರದ ಅತ್ಯುನ್ನತ ಪ್ರಶಸ್ತಿ ''ಜ್ಞಾನಪೀಠ ಪ್ರಶಸ್ತಿ'' ವಿಜೇತರಾದ ಕುವೆಂಪು, ದ. ರಾ. ಬೇಂದ್ರೆ, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಶಿವರಾಮ ಕಾರಂತ, ವಿ. ಕೃ. ಗೋಕಾಕ್, ಯು. ಆರ್. ಅನಂತಮೂರ್ತಿ, ಗಿರೀಶ್ ಕಾರ್ನಾಡ್‌ರಂತಹ ಖ್ಯಾತ ಸಾಹಿತಿಗಳು, ಕಲಾವಿದರು, ಸಂಗೀತಜ್ಞರು, ವಿಜ್ಞಾನಿಗಳು, ಕ್ರೀಡಾಪಟುಗಳು ತಮ್ಮ ಅಪ್ರತಿಮ ಸಾಧನೆಗಳಿಂದ ವಿಶ್ವಭೂಪಟದಲ್ಲಿ ಕರ್ನಾಟಕದ ಛಾಪು ಮೂಡಿಸಿರುವುದು ನಾಡಿನ ಜನತೆ ಹೆಮ್ಮೆ ಪಡುವ ಸಂಗತಿ.

ಇಂತಹ ಶ್ರೇಷ್ಠ ಸಾಹಿತ್ಯ ಮತ್ತು ಸಂಸ್ಕೃತಿಯ ವಾರಸುದಾರರಾದ ನಾವು ಕನ್ನಡಾಂಬೆಯ ಕೀರ್ತಿ ಎಲ್ಲೆಡೆ ಮೊಳಗುವಂತೆ ಕಾರ್ಯತತ್ಪರರಾಗೋಣ. ಭಾವೈಕ್ಯತೆಯನ್ನು ಬೆಳಗೋಣ.

## ಸಾಂಸ್ಕೃತಿಕ ಪರಂಪರೆಯ ಪೋಷಣೆ

- ಕಲೆ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಅಪ್ರತಿಮ ಸೇವೆ ಸಲ್ಲಿಸಿದ ಕಲಾವಿದರ ಮಾಸಾಶನವನ್ನು 250 ರಿಂದ 500 ರೂಗಳಿಗೆ ಹೆಚ್ಚಿಸಲಾಗಿದೆ.
- ವಿನೂತನ ''**ದಾಸ ಸಾಹಿತ್ಯವಾಹಿನಿ**'' ಯೋಜನೆಯ ಮೂಲಕ ದಾಸವರೇಣ್ಯರ 16,000ಕ್ಕೂ ಹೆಚ್ಚು ದಾಸರ ಕೀರ್ತನೆಗಳನ್ನು ಕಂಪ್ಯೂಟರ್‌ನಲ್ಲಿ ಅಳವಡಿಸಿ ವಿಶ್ವದೆಲ್ಲೆಡೆ ಲಭ್ಯವಾಗುವಂತೆ ವ್ಯವಸ್ಥೆ ಕಲ್ಪಿಸಲಾಗಿದೆ.
- ಯುವಜನಾಂಗದಲ್ಲಿ ಸಾಂಸ್ಕೃತಿಕ ಜಾಗೃತಿ ಮೂಡಿಸಲು ಯುವ ಪ್ರತಿಭೆ– ''**ಸ್ಪಂದನ**'' ವಿಶೇಷ ಕಾರ್ಯಕ್ರಮ.
- ಎಲ್ಲ ಕಲೆಗಳನ್ನೂ ಒಂದೇ ಸೂರಿನಡಿ ತರುವ ''**ಕಲಾಗ್ರಾಮ**'' ಯೋಜನೆ.
- ಸಾಹಿತ್ಯ, ಸಂಗೀತ ಇತ್ಯಾದಿ ಕಲೆಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದ ಚೇತನಗಳಿಗೆ ರಾಜ್ಯ ಹಾಗೂ ರಾಷ್ಟ್ರಮಟ್ಟದ ಪ್ರಶಸ್ತಿಗಳು.
- ಸಾಂಸ್ಕೃತಿಕ ಡೈರೆಕ್ಟರಿ - ರಾಜ್ಯಾದ್ಯಂತ ಎಲ್ಲಾ ಜಾನಪದ ಮತ್ತು ಇತರ ಕಲಾವಿದರ ಮಾಹಿತಿ ಕಂಪ್ಯೂಟರ್‌ನಲ್ಲಿ ಅಳವಡಿಕೆ.
- ಪ್ರಾಚ್ಯ ವಸ್ತುಗಳ ಡೈರೆಕ್ಟರಿ ಮೂಲಕ ರಾಜ್ಯದ 3,000ಕ್ಕೂ ಹೆಚ್ಚು ಐತಿಹಾಸಿಕ ಸ್ಮಾರಕಗಳು ಹಾಗೂ ಎಲ್ಲ ವಸ್ತು ಸಂಗ್ರಹಾಲಯಗಳ ಬಗ್ಗೆ ಮಾಹಿತಿ ಹಾಗೂ ಭಾವಚಿತ್ರಗಳು ಕಂಪ್ಯೂಟರ್‌ನಲ್ಲಿ ಅಳವಡಿಕೆ.
- ಸಾಂಸ್ಕೃತಿಕ ಚಟುವಟಿಕೆಗಳ ವಿಕೇಂದ್ರಿಕರಣ - ತಾಲ್ಲೂಕು ಕೇಂದ್ರಗಳ ಸಾಂಸ್ಕೃತಿಕ ಸಂಸ್ಥೆಗಳಿಗೆ 25,000 ರೂಗಳ ಧನ ಸಹಾಯ.

## ಕನ್ನಡಕ್ಕೆ ಹೆಚ್ಚಿನ ಒತ್ತಾಸೆ

- 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ಬಿ. ಇ., ಎಂ. ಬಿ. ಬಿ. ಎಸ್. ಮತ್ತು ಬಿ. ಡಿ. ಎಸ್. ಕೋರ್ಸ್‌ಗಳ ಪ್ರವೇಶದಲ್ಲಿ ಶೇ. 5ರಷ್ಟು ಸಮಾನಾಂತರ ಒಳ ಮೀಸಲಾತಿ.
- ವೃತ್ತಿ ಶಿಕ್ಷಣ ಮತ್ತು ಉನ್ನತ ಶಿಕ್ಷಣದ ಇತರೆ ಕೋರ್ಸ್‌ಗಳಿಗೂ ಶೇ. 5ರಷ್ಟು ಸಮಾನಾಂತರ ಮೀಸಲಾತಿಯ ವಿಸ್ತರಣೆ.
- 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ಸರ್ಕಾರಿ ಉದ್ಯೋಗಗಳಲ್ಲಿ ಶೇ. 5ರಷ್ಟು ಸಮಾನಾಂತರ ಒಳ ಮೀಸಲಾತಿ.
- ತಾಂತ್ರಿಕ ಮತ್ತು ವೈದ್ಯಕೀಯ ಪದವಿ ಕೋರ್ಸುಗಳಲ್ಲಿ ಮೊದಲ ವರ್ಷದಲ್ಲಿ ಒಂದು ಪಠ್ಯ ವಿಷಯವಾಗಿ ಕನ್ನಡದ ಅಳವಡಿಕೆ.
- ಪದವಿ ಪೂರ್ವ ತರಗತಿಯಲ್ಲಿ ಐಚ್ಛಿಕ ಕನ್ನಡ ವಿಷಯ ಆರಂಭ.


**ಕರ್ನಾಟಕ ವಾರ್ತೆ**

**ಸರ್ವರಿಗೂ 47ನೇ ಕನ್ನಡ ರಾಜ್ಯೋತ್ಸವದ ಶುಭಾಶಯಗಳು**

# ಕರ್ನಾಟಕದ ವಿದ್ಯುತ್ ಪರಿಸ್ಥಿತಿ ಹಾಗೂ ಕರ್ನಾಟಕದ ವಿದ್ಯುತ್ ನಿಗಮದ ಪಾತ್ರ

ಎ. ಸಿ. ರಂಗರಾಜನ್, ಟಿ. ಎ. ರಂಗಮಣಿ

**ವಿದ್ಯುತ್ ಪರಿಸ್ಥಿತಿಯ ಬಗ್ಗೆ ಒಂದು ನೋಟ**

ಭಾರತದ ವಿದ್ಯುತ್ ಉತ್ಪಾದನೆಯ ಈಗಿನ ಸ್ಥಾಪಿತ ಸಾಮರ್ಥ್ಯ ೧,೦೫,೦೦೦ ಮೆ. ವ್ಯಾ. ಹಾಗೂ ವಾರ್ಷಿಕ ಉತ್ಪಾದನೆ ೫,೧೫,೦೦೦ ದಶಲಕ್ಷ ಯೂನಿಟ್‌ಗಳು. ಈಗಿನ ಸ್ಥಾಪಿತ ಸಾಮರ್ಥ್ಯದಿಂದ ಲಭ್ಯವಾಗುವ ಗರಿಷ್ಠ ಬೇಡಿಕೆಯ ಪೂರೈಕೆ ಸುಮಾರು ಶೇ. ೭೦ರಷ್ಟು, ಅಂದರೆ, ಸುಮಾರು ೭೦,೦೦೦ ಮೆ. ವ್ಯಾ. ಏಕೆಂದರೆ ವಿದ್ಯುತ್ ಘಟಕಗಳ/ಪ್ರಸರಣ ಮಾರ್ಗಗಳ ನಿರ್ವಹಣೆ, ಅಣೆಕಟ್ಟುಗಳಲ್ಲಿ ದುರಸ್ತಿ ಹಾಗೂ ನೀರಿನ ಮಟ್ಟದ ಕೊರತೆ, ಇತ್ಯಾದಿ ಕಾರಣಗಳಿಂದ ಸ್ಥಾಪಿತ ಸಾಮರ್ಥ್ಯವನ್ನು ಸಂಪೂರ್ಣವಾಗಿ ಬಳಸಿಕೊಳ್ಳಲು ಆಗುವುದಿಲ್ಲ. ೨೦೧೧-೧೨ರ ಸುಮಾರಿಗೆ ಗರಿಷ್ಠ ವಿದ್ಯುತ್ ಬೇಡಿಕೆ ೧,೫೭,೧೦೭ ಮೆ. ವ್ಯಾ. ಮುಟ್ಟುವ ಅಂದಾಜಿದೆ. ಅಂದರೆ ಆ ವೇಳೆಗೆ ನಮ್ಮ ರಾಷ್ಟ್ರದ ಉತ್ಪಾದನಾ ಸಾಮರ್ಥ್ಯವನ್ನು ದ್ವಿಗುಣಗೊಳಿಸಬೇಕಾಗಿದೆ. ಕಳೆದ ೫೦ಕ್ಕಿಂತ ಹೆಚ್ಚಿನ ವರ್ಷಗಳ ಸಾಧನೆಯನ್ನು ಮುಂದಿನ ಹತ್ತು ವರ್ಷಗಳಲ್ಲಿ ದುಪ್ಪಟ್ಟುಗೊಳಿಸಬೇಕಾಗಿದೆ. ಈ ವರ್ಷ ರಾಷ್ಟ್ರದ ಬಹುತೇಕ ರಾಜ್ಯಗಳು ಮುಂಗಾರಿನ ಮಳೆಯ ಅಭಾವದಿಂದ ಹಿಂದೆಂದಿಗಿಂತಲೂ ಹೆಚ್ಚಿನ ವಿದ್ಯುತ್ ಕೊರತೆಯನ್ನು ಅನುಭವಿಸುತ್ತಿವೆ. ಈ ಕೊರತೆಯು ಸುಮಾರು ಶೇಕಡಾ ೧೫-೨೦ರಷ್ಟು ಇದೆ. ಕರ್ನಾಟಕದಲ್ಲೂ ಇದೇ ಪರಿಸ್ಥಿತಿಯುಂಟಾಗಿದೆ. ನಮ್ಮ ಈಗಿನ ಸ್ಥಾಪಿತ ಸಾಮರ್ಥ್ಯ ಸುಮಾರು ೬,೩೦೦ ಮೆ. ವ್ಯಾ.ಗಳಷ್ಟು. ಇದರಲ್ಲಿ ಕೇಂದ್ರದ ಯೋಜನೆಗಳಿಂದ ನಮ್ಮ ರಾಜ್ಯದ ಪಾಲು ೮೪೦ ಮೆ. ವ್ಯಾ. (ಇದು ಕಾಲ ಕಾಲಕ್ಕೆ ೮೦೦-೯೦೦ ಮೆ. ವ್ಯಾ. ಇರುತ್ತದೆ) ಮತ್ತು ಖಾಸಗಿ ಕ್ಷೇತ್ರದಿಂದ ಸ್ಥಾಪಿತವಾದ ಸುಮಾರು ೯೭೦ ಮೆ. ವ್ಯಾ. ಕೂಡ ಸೇರಿವೆ. ಈಗಿನ ವಾರ್ಷಿಕ ವಿದ್ಯುತ್ ಉತ್ಪಾದನೆ ಸುಮಾರು ೩೦,೦೦೦ ದಶಲಕ್ಷ ಯೂನಿಟ್‌ಗಳು. ದೈನಂದಿನ ಬಳಕೆ ಈಗ ಸುಮಾರು ೮೭ ದಶಲಕ್ಷ ಯೂನಿಟ್‌ಗಳು ಹಾಗೂ ಗರಿಷ್ಠ ಪೂರೈಕೆಯ ಮಟ್ಟ ಸುಮಾರು ೪,೫೦೦-೫,೦೦೦ ಮೆ. ವ್ಯಾ. ಗಳು.

ಹಲವು ಅಧ್ಯಯನಗಳ ಪ್ರಕಾರ ೨೦೧೧-೧೨ರ ವೇಳೆಗೆ ನಮ್ಮ ರಾಜ್ಯದ ವಿದ್ಯುತ್ ಬೇಡಿಕೆ ೧೦,೦೦೦ ಮೆ. ವ್ಯಾ. ಮುಟ್ಟುವ ನಿರೀಕ್ಷೆಯಿದೆ. ಅಂದರೆ ಇಲ್ಲಿಯೂ ಸಹ ಈಗಿನ ಉತ್ಪಾದನಾ ಸಾಮರ್ಥ್ಯವನ್ನು ಮುಂದಿನ ೧೦ ವರ್ಷಗಳಿಗಿಂತ ಒಳಗಾಗಿಯೇ ದ್ವಿಗುಣಗೊಳಿಸಬೇಕಾಗಿದೆ. ಈ ಬೇಡಿಕೆಯ ಏರಿಕೆಗೆ ಹಲವಾರು ಕಾರಣಗಳಿವೆ. ನಮ್ಮ ಎಲ್ಲಾ ಚಟುವಟಿಕೆಗಳಿಗೂ ವಿದ್ಯುತ್ ಒಂದು ಮುಖ್ಯವಾದ ಅವಶ್ಯಕತೆಯಾಗಿದೆ. ಆಧುನೀಕರಣ, ಕಂಪ್ಯೂಟರೀಕರಣ, ಕೈಗಾರಿಕೀಕರಣ, ಇತ್ಯಾದಿ, ಇತ್ಯಾದಿ. ೭೦-೮೦ರ ದಶಕಗಳಿಗೆ ಹೋಲಿಸಿದರೆ ನಮ್ಮ ಜೀವನ ಮಟ್ಟ ಹೆಚ್ಚಾಗುತ್ತಿದೆ. ಟಿ. ವಿ., ಫ್ರಿಜ್, ಫೋನ್, ಕಂಪ್ಯೂಟರ್ ಈಗ ಜನಸಾಮಾನ್ಯರ ಅಗತ್ಯ ವಸ್ತುಗಳಾಗಿವೆ. ಕರ್ನಾಟಕದಲ್ಲೂ ಈ ವರ್ಷ ಮುಂಗಾರಿನ ಮಳೆಯ ಅಭಾವದಿಂದ ವಿದ್ಯುತ್ ಕೊರತೆ ಎದುರಿಸುತ್ತಿದ್ದೇವೆ. ಈ ಕೊರತೆ ಶೇ. ೧೫-೨೦ರಷ್ಟೆಂದು ಅಂದಾಜು ಮಾಡಲಾಗಿದೆ. ವಿದ್ಯುತ್ ಬೇಡಿಕೆಯನ್ನು ಅಂದಾಜು ಮಾಡಲು ಹಲವಾರು ಅಧ್ಯಯನಗಳನ್ನು ಕಾಲಕಾಲಕ್ಕೆ ಕೈಗೊಂಡು ಬೇಡಿಕೆಯ ವಾರ್ಷಿಕ ಹೆಚ್ಚಳವು ೬-೯%ರಷ್ಟಿದೆ ಎಂಬ ಅಂದಾಜಿದೆ. ವಿದ್ಯುತ್ ಬೇಡಿಕೆಯನ್ನು ನಿಖರವಾಗಿ ಅಂದಾಜು ಮಾಡುವುದು ಒಂದು ಕ್ಲಿಷ್ಟಕರ ಕಾರ್ಯವೇ ಸರಿ.

ಮಳೆಯ ವೈಫಲ್ಯದಿಂದ ವಿದ್ಯುತ್ ಕಡಿತಗಳನ್ನು ಜಾರಿಗೊಳಿಸಿದಾಗೆಲ್ಲಾ, ಕೈಗಾರಿಕೆಗಳು ಹೆಚ್ಚು ಹೆಚ್ಚು ಡೀಸೆಲ್ ಜನರೇಟರ್‌ಗಳನ್ನು ಅವಲಂಬಿಸಲು ಆರಂಭಿಸಿ ಈಗ ಈ ಪರ್ಯಾಯ ವ್ಯವಸ್ಥೆ ಕೈಗಾರಿಕಾ ಕ್ಷೇತ್ರದ ಅವಿಭಾಜ್ಯ ಅಂಗವಾಗಿದೆ. ವಿದ್ಯುತ್ ಬೇಡಿಕೆಯ ಹೆಚ್ಚಳದ ಅಂದಾಜನ್ನು ಜನಜೀವನ, ಆಹಾರ ಉತ್ಪಾದನೆ, ಕೈಗಾರಿಕೆ, ಇತ್ಯಾದಿ ಕ್ಷೇತ್ರಗಳ ಬರಲಿರುವ ಬೆಳವಣಿಗೆಯನ್ನು ಆಧರಿಸಿ ಮಾಡಿದಾಗ್ಯೂ ಅದನ್ನು ನಿಖರವಾಗಿ ಮಾಡುವುದು ಕಷ್ಟ. ಕಳೆದ ವರ್ಷಗಳ ಹೆಚ್ಚಳದ ಪ್ರಕಾರ ಅಂದಾಜು ಮಾಡಿದರೆ, ಆಯಾ ವರ್ಷದ ಬೇಡಿಕೆ ಆಯಾ ವರ್ಷದ ನಿರೀಕ್ಷಿತ ವಿದ್ಯುತ್ ಕಡಿತ ಮತ್ತು ಬದಲಾದ ಜನಜೀವನದ ಅಗತ್ಯಗಳನ್ನು ಆಧರಿಸಿರುತ್ತದೆ. ಇತ್ತೀಚಿನ ವರ್ಷಗಳಲ್ಲಿ ಬ್ಯಾಟರಿ ಆಧಾರಿತ UPS (Uninterrupted Power Supply)ಗಳನ್ನು ಕೇವಲ ಕಚೇರಿಗಳು ಕಂಪ್ಯೂಟರ್ ಕ್ಷೇತ್ರಗಳಲ್ಲದೆ ಮನೆಗಳಲ್ಲೂ ಉಪಯೋಗಿಸುತ್ತಾರೆ. ಬೆಳಗಿನ ಹಾಗೂ ಸಂಜೆಯ ಗರಿಷ್ಠ ಬೇಡಿಕೆಯನ್ನು ಪೂರೈಸಲಾಗದೆ ಲೋಡ್ ಶೆಡಿಂಗ್ ಮಾಡಿದಾಗ, ಈ ಯು ಪಿ ಎಸ್ ಗಳನ್ನು ಪರ್ಯಾಯ ವ್ಯವಸ್ಥೆಯಾಗಿ ಉಪಯೋಗಿಸುತ್ತಾರೆ. ಆದರೆ ಇದಕ್ಕೆ ಬೇಕಾದ ವಿದ್ಯುತ್‌ನ್ನು ವಿದ್ಯುತ್ ಜಾಲದಿಂದ ಮೊದಲೇ ಚಾರ್ಜ್ ಮಾಡಲು ತೆಗೆದುಕೊಂಡಿರುವುದರಿಂದ ಲೋಡ್ ಶೆಡಿಂಗ್‌ನಿಂದ ಶಕ್ತಿಯ ಉಳಿತಾಯ ನಿರೀಕ್ಷೆಯ ಮಟ್ಟದಲ್ಲಿ ಆಗುವುದಿಲ್ಲ. ಗರಿಷ್ಠ ಬೇಡಿಕೆಯ ಸಮಯದಲ್ಲಿ ತಾತ್ಕಾಲಿಕವಾಗಿ ಕೊರತೆಯನ್ನು ನೀಗಿಸಿಕೊಳ್ಳಬಹುದಷ್ಟೆ.



(ಆಧಾರ : ಗರಿಷ್ಠ ಬೇಡಿಕೆಯ ವಿವರಗಳನ್ನು ಕೇಂದ್ರ ವಿದ್ಯುತ್ ಪ್ರಾಧಿಕಾರದ ದಾಖಲೆಗಳಿಂದ ಪಡೆಯಲಾಗಿದೆ.)

*ಪ್ರಪಂಚದ ಕೆಲವು ರಾಷ್ಟ್ರಗಳೊಂದಿಗೆ ವಿದ್ಯುತ್ ಉತ್ಪಾದನೆ ವಿವರಗಳ ಹೋಲಿಕೆ*

| ರಾಷ್ಟ್ರ | ಯೂನಿಟ್‌ಗಳಲ್ಲಿ ತಲಾವಾರು ವಿದ್ಯುತ್ ಬಳಕೆ (ಕಿ. ವ್ಯಾ. ಅ.) | ಒಟ್ಟು ಉತ್ಪಾದನಾ ಸಾಮರ್ಥ್ಯ ಮೆ. ವ್ಯಾ. | ವಿವಿಧ ಮೂಲಗಳಿಂದ ಶೇಕಡಾವಾರು ಉತ್ಪನ್ನ | | |
|---|---|---|---|---|---|
| | | | ಕಲ್ಲಿದ್ದಲು/ ಅನಿಲ | ಜಲ ವಿದ್ಯುತ್ | ಅಣು ವಿದ್ಯುತ್ |
| ಕರ್ನಾಟಕ | ೩೯೦ | ೫೪೬೩ (೨೦೦೨) | ೩೯.೩೨% | ೫೮.೯೧% | - |
| ಭಾರತ | ೪೧೬ | ೧೦೫೦೦ (೨೦೦೨) | ೭೧% | ೨೫% | ೨.೭% |
| ಅಮೇರಿಕಾ | ೧೩೩೫೫ | ೭೭೫೯೦೦ (೧೯೯೯) | ೭೨.೪% | ೧೨.೭% | ೧೨.೫% |
| ಫ್ರಾನ್ಸ್ | ೭೧೭೫ | ೧೦೮೩೦೦ (೧೯೯೯) | ೨೩.೬% | ೧೯.೨% | ೫೭% |
| ಜಪಾನ್ | ೮೦೦೮ | ೨೨೬೪೦೦ (೧೯೯೯) | ೭೦.೩% | ೯.೫% | ೨೦% |
| ಚೀನಾ | ೮೭೨ | ೨೭೭೧೦೦ (೧೯೯೯) | ೭೫.೭% | ೨೩.೭% | ೦.೮% |

ನವೀಕರಿಸಬಹುದಾದ (Renewable) ಮೂಲಗಳಾದ ಗಾಳಿ, ಸೌರಶಕ್ತಿ, ಇತ್ಯಾದಿಗಳಿಂದ ಉತ್ಪಾದಿಸಲ್ಪಡುತ್ತಿರುವ ವಿದ್ಯುತ್ ಈ ಮೇಲಿನ ಮೂಲಗಳಿಗೆ ಹೋಲಿಸಿದರೆ ಅತಿ ಕಡಿಮೆ ಹಾಗೂ ಈ ಮೂಲಗಳಿಂದ ಭಾರೀ ಪ್ರಮಾಣದ ಕೇಂದ್ರಗಳ ಸ್ಥಾಪನೆ ಸಾಧ್ಯವಿಲ್ಲದಿರುವುದರಿಂದ, ಈ ನಿಟ್ಟಿನಲ್ಲಿ ಮಾಹಿತಿಯನ್ನು ಇಲ್ಲಿ ಪ್ರಸ್ತುತಪಡಿಸಿಲ್ಲ.

**ಶಕ್ತಿಯ ವಿವಿಧ ಮೂಲಗಳು**

ಬೃಹತ್ ವಿದ್ಯುತ್ ಉತ್ಪಾದನಾ ಕೇಂದ್ರಗಳನ್ನು ಈ ಕೆಳಗಿನ ಶಕ್ತಿಯ ಮೂಲಗಳಿಂದ ಸ್ಥಾಪಿಸಬಹುದು:

- ಜಲವಿದ್ಯುತ್
- ಶಾಖೋತ್ಪನ್ನ - ಕಲ್ಲಿದ್ದಲು, ಡೀಸೆಲ್, ಅನಿಲ
- ಅಣು ವಿದ್ಯುತ್

ಅವಿರತವಾದ ಬೃಹತ್ ಪ್ರಮಾಣದ ವಿದ್ಯುತ್ ಪೂರೈಕೆಗೆ ಬೃಹತ್ ಕೇಂದ್ರಗಳು ಅವಶ್ಯಕವಾಗಿವೆ. ಹಾಗೂ ಕ.ವಿ.ನಿ.ನಿ. ಸಂಸ್ಥೆ ೨೫ ಮೆ.ವ್ಯಾ.ಗಳಿಗಿಂತ ಹೆಚ್ಚಿನ ಸಾಮರ್ಥ್ಯದ ಕೇಂದ್ರಗಳನ್ನು ಮಾತ್ರ ಸ್ಥಾಪಿಸಬಹುದು ಎಂಬ ಸಾಮಾನ್ಯ ನಿಯಮವಿದೆ. ಆದ್ದರಿಂದ ಈ ಲೇಖನವನ್ನು ಬೃಹತ್ ವಿದ್ಯುತ್ ಕ್ಷೇತ್ರಕ್ಕೆ ಮಾತ್ರ ಸೀಮಿತಗೊಳಿಸಲಾಗಿದೆ.

ಜಲವಿದ್ಯುತ್ ಘಟಕಗಳನ್ನು ಕಡಿಮೆ ಅವಧಿಯಲ್ಲಿ ಸುಲಭವಾಗಿ ಅರ್ಧ ಗಂಟೆಯ ಒಳಗೆ ಚಾಲನೆಗೊಳಿಸಿ, ಗರಿಷ್ಠ ಬೇಡಿಕೆಯ (peak load) ಸಮಯದಲ್ಲಿ ಅವುಗಳ ಸಂಪೂರ್ಣ ಸಾಮರ್ಥ್ಯವನ್ನು ಉಪಯೋಗಿಸಿ ನಡೆಸುತ್ತಾರೆ. ಕಲ್ಲಿದ್ದಲು ಆಧಾರಿತ ಶಾಖೋತ್ಪನ್ನ ಘಟಕಗಳನ್ನು ದಿನಪೂರ್ತಿ ಬಹುತೇಕ ಪೂರ್ಣ ಪ್ರಮಾಣದಲ್ಲಿ ನಡೆಸುತ್ತಾರೆ. ಜಲವಿದ್ಯುತ್ ಘಟಕಗಳಂತೆ ಇವುಗಳಿಂದ ವಿದ್ಯುತ್ ಉತ್ಪಾದನೆಯಲ್ಲಿ ಏರಿಳಿತ ಮಾಡಲಾಗುವುದಿಲ್ಲ. ಸಾಮಾನ್ಯವಾಗಿ ಶಾಖೋತ್ಪನ್ನ (ಕಲ್ಲಿದ್ದಲು, ಅನಿಲ ಹಾಗೂ ಡೀಸೆಲ್) ಮತ್ತು ಜಲವಿದ್ಯುತ್ ಸಾಮರ್ಥ್ಯದ ಅನುಪಾತ ೭೫ : ೨೫ ಇರುತ್ತದೆ. ನಮ್ಮ ರಾಷ್ಟ್ರಮಟ್ಟದಲ್ಲಿ ಇದೇ ಅನುಪಾತವಿದ್ದು, ನಮ್ಮ ರಾಜ್ಯದಲ್ಲಿ ಶಾಖೋತ್ಪನ್ನ ಕೇಂದ್ರಗಳಿಗೆ ಕಲ್ಲಿದ್ದಲಿನ ಗಣಿಗಳು ಇಲ್ಲದಿರುವುದರಿಂದ ಜಲವಿದ್ಯುತ್ ಕೇಂದ್ರಗಳ ಸಾಮರ್ಥ್ಯವೇ ಹೆಚ್ಚು. ರಾಯಚೂರು ಹಾಗೂ ಬೆಂಗಳೂರಿನ ಯಲಹಂಕ, ಇತ್ಯಾದಿ ಶಾಖೋತ್ಪನ್ನ ಕೇಂದ್ರಗಳ ಸ್ಥಾಪನೆಯಿಂದ ಈಗಿನ ಅನುಪಾತ ೪೦ : ೬೦ಕ್ಕೆ ಮುಟ್ಟಿದೆ.

ಒಂದು ಮೆ. ವ್ಯಾ. ಸಾಮರ್ಥ್ಯದ ಕೇಂದ್ರವನ್ನು ಸತತವಾಗಿ ಪೂರ್ತಿ ಸಾಮರ್ಥ್ಯದಲ್ಲಿ ನಡೆಸಿದರೆ ೧೦೦೦ x ೨೪ x ೩೬೫ ಅಂದರೆ ವರ್ಷಕ್ಕೆ ೮.೭೬ ದಶಲಕ್ಷ ಯೂನಿಟ್‌ಗಳು ದೊರೆಯುತ್ತವೆ. ಆದರೆ ಜಲವಿದ್ಯುತ್ ಸ್ಥಾವರಗಳನ್ನು ಶೇ. ೬೦ಕ್ಕಿಂತ ಕಡಿಮೆ ಸಾಮರ್ಥ್ಯದಲ್ಲಿ (ಪ್ಲಾಂಟ್ ಲೋಡ್ ಫ್ಯಾಕ್ಟರ್) ನಡೆಯುವಂತೆ ವಿನ್ಯಾಸ ಗೊಳಿಸಲಾಗುತ್ತದೆ. ಅಂದರೆ ಪೂರ್ತಿ ಸಾಮರ್ಥ್ಯದಲ್ಲಿ ದಿನದ ಕೆಲವು ಗಂಟೆಗಳು ಹಾಗೂ ಅಣೆಕಟ್ಟುಗಳಲ್ಲಿ ಹೆಚ್ಚಿನ ನೀರು ಶೇಖರವಾಗಿದ್ದಾಗಲೂ (ಅಣೆಕಟ್ಟು ಉಕ್ಕಿ ಹರಿಯುವ ಮುನ್ನ) ಪೂರ್ತಿ ಸಾಮರ್ಥ್ಯದಲ್ಲಿ ನಡೆಸಿ ಮಿಕ್ಕ ಸಮಯಗಳಲ್ಲಿ ಸಾಮಾನ್ಯವಾಗಿ ಜಲ ವಿದ್ಯುತ್ ಕೇಂದ್ರಗಳನ್ನು ಗರಿಷ್ಠ ಬೇಡಿಕೆ ಪೂರೈಸಲು ಉಪಯೋಗಿಸುತ್ತಾರೆ. ವಿದ್ಯುತ್ ಘಟಕಗಳ ಕಾಲಕಾಲಿಕ ನಿರ್ವಹಣೆ ಮತ್ತು ದುರಸ್ತಿಯ ಸಂದರ್ಭಗಳಲ್ಲಿ ಉತ್ಪಾದನೆಯನ್ನು ನಿಲ್ಲಿಸಬೇಕಾಗುತ್ತದೆ. ಇವೆಲ್ಲವನ್ನೂ ಸೇರಿಸಿದರೆ, ಉತ್ತಮವಾದ ಶಾಖೋತ್ಪನ್ನ ಕೇಂದ್ರಗಳು ಶೇ.೮೦ರಷ್ಟು ಸಾಮರ್ಥ್ಯದಲ್ಲಿ (ಪ್ಲಾಂಟ್ ಲೋಡ್ ಫ್ಯಾಕ್ಟರ್) ನಡೆಯುತ್ತವೆ. ನಮ್ಮ ದೇಶದಲ್ಲಿ ಶಾಖೋತ್ಪನ್ನ ಸ್ಥಾವರಗಳ ಸರಾಸರಿ ಪಿ.ಎಲ್.ಎಫ್. ಶೇ.೭೦ರಷ್ಟಿದ್ದರೆ, ರಾಯಚೂರು ಶಾಖೋತ್ಪನ್ನ ಕೇಂದ್ರದ ಪಿ.ಎಲ್.ಎಫ್. ಶೇ.೮೧ರಷ್ಟಿದೆ. ಈ ಕಾರಣಕ್ಕಾಗಿ ಪ್ರತಿ ವರ್ಷ ರಾಯಚೂರು ಘಟಕ ಕೇಂದ್ರ ವಿದ್ಯುತ್ ಪ್ರಾಧಿಕಾರದ ಪ್ರಶಸ್ತಿಗೆ ಪಾತ್ರವಾಗಿದೆ.

**ಕರ್ನಾಟಕ ವಿದ್ಯುತ್ ನಿಗಮದ ಪಾತ್ರ**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕ.ವಿ.ನಿ.ನಿ.) ಮುಂಚೂಣಿಯಲ್ಲಿರುವ ರಾಜ್ಯದ ವಿದ್ಯುತ್ ಉತ್ಪಾದನಾ ಸಂಸ್ಥೆಯಾಗಿದ್ದು, ೨೫ ಮೆ. ವ್ಯಾ. ಸಾಮರ್ಥ್ಯಕ್ಕಿಂತ ದೊಡ್ಡ ಘಟಕಗಳನ್ನು ನಿರ್ಮಾಣ ಮಾಡುತ್ತದೆ. ಈ ಸಂಸ್ಥೆಯನ್ನು ೧೯೭೦ರಲ್ಲಿ ವಿದ್ಯುತ್ ಉತ್ಪಾದನೆ ಗೆಂದೇ ಸ್ಥಾಪಿಸಲಾಯಿತು. ರಾಷ್ಟ್ರದಲ್ಲಿ ಮೊಟ್ಟಮೊದಲ ಬಾರಿಗೆ ಸರ್ಕಾರಿ ವಲಯದಲ್ಲಿ ಉತ್ಪಾದನೆ, ಪ್ರಸರಣೆ ಹಾಗೂ ವಿತರಣೆಗಳನ್ನು ೧೯೭೦ರಷ್ಟು ಹಿಂದೆಯೇ ಕರ್ನಾಟಕದಲ್ಲಿ ಬೇರ್ಪಡಿಸಲಾಯಿತು. ೧೯೯೧ರಿಂದ ಆಗುತ್ತಿರುವ ರಾಷ್ಟ್ರೀಯ ವಿದ್ಯುತ್ ಸುಧಾರಣೆಯ

## ಖಾಸಗೀ ಕ್ಷೇತ್ರದ ಪಾತ್ರ

ಹೊತ್ತಾರೆ ಏಳೂವರೆ ಗಂಟೆ. ಸಾಲು ದೀಪಗಳು ಈ ಬೀದಿಯನ್ನು ಇನ್ನೂ ಬೆಳಗುತ್ತಿವೆ. ಎಲ್ಲಿಂದಲೋ ಒಬ್ಬ ಹದಿವಯಸ್ಸಿನ ಹುಡುಗ ಸೈಕಲ್ಲಿನ ಮೇಲೆ ಸರಿದು ಬಂದು, ಹಾಗೆಯೇ ಸರ್ಕಸ್ಸು ಮಾಡುತ್ತ ಕಂಬದಿಂದ ನೇತಾಡುತ್ತಿರುವ ತಂತಿಯ ಗಂಟನ್ನು ಬಿಚ್ಚುತ್ತಾನೆ. ನಿಮಿಷಾರ್ಧದಲ್ಲಿ ಮಾಯವಾಗುತ್ತಾನೆ. ಇದು ವಿದ್ಯುತ್ ಪ್ರಸರಣದ ಖಾಸಗೀ ವ್ಯವಹಾರದ ದಿನನಿತ್ಯ ನಿರ್ವಹಣೆಯ ವೈಖರಿ. ನಮ್ಮ ಕಾಲೋನಿಗೆ ವಿದ್ಯುತ್ ಇಲಾಖೆಯ ದುಂಬಾಲು ಬಿದ್ದು ವಿದ್ಯುತ್ ಕರೆಸಿಕೊಂಡಾಗ ಎರಡು ದಶಕಗಳ ಹಿಂದೆ ಈ ಬೆಳಗ್ಗೆ ಆರಿಸುವ ಹಾಗೂ ಸಂಜೆ ಹತ್ತಿಸುವ ಕೆಲಸ ನಾವೇ ಮಾಡುತ್ತಿದ್ದೆವು ಮುಫತ್ತಾಗಿ. ಆಗ ತಂತಿ ನೇತಾಡುತ್ತಿರಲಿಲ್ಲ. ಕಟ್‌ಔಟ್ ಇಟ್ಟು ಸುಕ್ಷೇಮವಾಗಿರುತ್ತಿತ್ತು. ಮಕ್ಕಳನ್ನು ಈ ಕೆಲಸಕ್ಕೆ ನಿಯಮಿಸಿರಲಿಲ್ಲ. ಸರ್ಕಾರಿ ಕ್ಷೇತ್ರದಲ್ಲಿ ಉತ್ಪತ್ತಿಯಾದ ವಿದ್ಯುತ್ತನ್ನು ಹಂಚಿ ವ್ಯಾಪಾರ ಮಾಡುವುದನ್ನೇ ಉದ್ಯಮವೆನ್ನುವ ನಮ್ಮ ನಾಡಿನಲ್ಲಿ ಕೇವಲ ದಳ್ಳಾಳಿಗಳೇ ವ್ಯಾಪಾರಿಗಳೇ ಇದ್ದಾರೆಯೇ ವಿನಃ ಸಾಹಸಿ ಖಾಸಗಿ ಉದ್ಯಮಿಗಳೇ ಇಲ್ಲ. ೧೯೯೧-೯೨ರಲ್ಲಿ ಹೇಳುತ್ತಿದ್ದರು – ನಿಮ್ಮ ರೈಲುಗಾಡಿ, ನಿಮ್ಮ ಹಳಿ, ನಿಮ್ಮ ಸ್ಟೇಷನ್‌ನಲ್ಲಿ ನಮಗೊಂದು ಮಗ್ಗುಲು ಜಾಗ ಕೊಡಿ. ನಾವೂ ವ್ಯಾಪಾರ ಮಾಡುತ್ತೇವೆ. ನಿಮ್ಮ ಟೆಲಿಫೋನ್ ಎಕ್ಸ್‌ಚೇಂಜ್‌ನಲ್ಲಿ ಸ್ವಲ್ಪ ಜಾಗ ಕೊಡಿ ನಾವೂ ಟೆಲಿಫೋನ್ ವ್ಯಾಪಾರ ಮಾಡುತ್ತೇವೆ. ಇದಕ್ಕೆ ಖಾಸಗೀಕರಣ ಎಂದರು !

ರಾಷ್ಟ್ರದ ಒಟ್ಟಾರೆ ಯೋಜನೆಯನ್ವಯ ಖಾಸಗೀಕ್ಷೇತ್ರಕ್ಕೆ ವಿದ್ಯುತ್ ಉತ್ಪಾದನೆಯಲ್ಲಿ ಮಹತ್ವದ ಪಾತ್ರ ನಿಗದಿಯಾಗಿದೆ. ಈಗಾಗಲೇ ಖಾಸಗೀ ಕ್ಷೇತ್ರ ಸಣ್ಣಪುಟ್ಟ ಘಟಕಗಳ ಮೂಲಕ ೬,೭೬೮.೨೧ ಮೆ.ವ್ಯಾ. ಸಾಮರ್ಥ್ಯವನ್ನು ಸಾಧಿಸಿದೆ. ಆದರೆ ಮೀಸಲಾತಿ ಯೋಜನೆಗಳಂತೆ ೨೮,೫೪೫ ಮೆ.ವ್ಯಾ. ಸಾಮರ್ಥ್ಯದ ಕಾರ್ಯಕ್ರಮ ಈ ಕ್ಷೇತ್ರದಿಂದ ಆಗಬೇಕಾಗಿದೆ. ಬಂಡವಾಳ ಬೇಕಾಗಿರುವುದು ಸುಮಾರು ೧,೦೩,೬೮೯ ಕೋಟಿ ರೂ.ಗಳು. ಬಂಡವಾಳ ಸಮಸ್ಯೆಯಲ್ಲ. ಪ್ರೊ॥ ಬ್ರಹ್ಮಾನಂದರು ಹೇಳುವಂತೆ ಶೇ. ೧೨ರ ಬಡ್ಡಿ ದರದಲ್ಲಿ ಬಹುಕಾಲೀನ ಸಾರ್ವಜನಿಕ ಸಾಲ ತೆಗೆಯಬಹುದು. ಆದರೆ ವ್ಯಾಪಾರಿಗಳು ಬಯಸುವ ತುರ್ತಾದ ಅತೀವವಾದ ಲಾಭ ಇದರಲ್ಲಿ ದಕ್ಕುವುದಿಲ್ಲ. ಖಾಸಗೀ ಕ್ಷೇತ್ರದ ಈ ಯೋಜನೆ ಕಾಲೆಳೆಯುತ್ತಿದ್ದು, ರಾಷ್ಟ್ರದ ಗುರಿ ತಲುಪದ ಆತಂಕವಿದೆ. ಬುದ್ಧಿವಂತಿಕೆಯೆಂದರೆ ಇವನ್ನು ಸರ್ಕಾರೀ ಕ್ಷೇತ್ರವೇ ತನ್ನ ಕೈಗೆ ತೆಗೆದುಕೊಳ್ಳಬೇಕು. ಗುರಿ ಸಾಧಿಸುವುದು ಮುಖ್ಯ. ಈ ಕ್ಷೇತ್ರದಲ್ಲಿ ಖಾಸಗೀ-ಸರ್ಕಾರಿ ದ್ವಂದ್ವಕ್ಕೆ ಅರ್ಥವಿಲ್ಲ. ಖಾಸಗಿಯವರು ಸಾಧ್ಯವಾದಷ್ಟು ಸಾಧಿಸುತ್ತಾ ಹೋಗಲಿ. ಸರ್ಕಾರೀ ಕ್ಷೇತ್ರದ ಕೆಪಿಟಿಸಿಎಲ್‌ನಂಥ ಸಂಸ್ಥೆಗಳು ಸಮರ್ಥ ನಿರ್ವಹಣೆಗೆ ದೇಶಾದ್ಯಾಂತ ಹೆಸರು ಪಡೆದಿವೆ. ಡೆಂಗ್ ಹೇಳುವಂತೆ ಬೆಕ್ಕು ಕರಿಯದೋ ಬಿಳಿಯದೋ ಇಲಿ ಹಿಡಿಯುವುದು ಮುಖ್ಯ.

ಕೆ. ಎಸ್. ಪಾರ್ಥಸಾರಥಿ

ಕ್ರಮಗಳಲ್ಲಿ ಈಗ ಈ ಬೇರ್ಪಡಿಕೆಯನ್ನು ಇತರ ರಾಜ್ಯಗಳಲ್ಲೂ ತರಲಾಗುತ್ತಿದೆ.

ನಮ್ಮ ರಾಜ್ಯದಲ್ಲಿ ಕಲ್ಲಿದ್ದಲಿನ ಗಣಿಗಳಿಲ್ಲದಿದ್ದುದರಿಂದ ಶಾಖೋತ್ಪನ್ನ ಸ್ಥಾವರಗಳನ್ನು ಸ್ಥಾಪಿಸುವ ಯೋಜನೆಗಳನ್ನು ಈ ಹಿಂದೆ ಕೈಗೊಂಡಿರಲಿಲ್ಲ. ಜಲವಿದ್ಯುತ್ ಯೋಜನೆಗಳಿಂದಲೇ ನಮ್ಮ ಬೇಡಿಕೆ ಬಹುತೇಕ ಪೂರೈಕೆಯಾಗುತ್ತಿತ್ತು. ೬೦-೭೦ರ ದಶಕದಲ್ಲಿ ಪೂರ್ಣಗೊಂಡ ಶರಾವತಿ ಜಲವಿದ್ಯುತ್ ಯೋಜನೆ ನಮ್ಮ ರಾಜ್ಯದ ಬೆನ್ನೆಲುಬಾಗಿತ್ತು. ಇಲ್ಲಿ ೧೯೬೪ರಿಂದ ೧೯೭೭ರ ಅವಧಿಯಲ್ಲಿ ೮೯.೧ ಮೆ. ವ್ಯಾ. ಸಾಮರ್ಥ್ಯದ ೧೦ ಘಟಕಗಳನ್ನು ಸ್ಥಾಪಿಸಲಾಯಿತು. ಈಗ ಈ ಘಟಕಗಳನ್ನು ಉನ್ನತೀಕರಣಗೊಳಿಸಲಾಗಿದೆ. ಪ್ರತಿ ಘಟಕದ ಈಗಿನ ಸಾಮರ್ಥ್ಯ ೧೦೩೫ ಮೆ. ವ್ಯಾ. ಮತ್ತು ಕೇಂದ್ರದ ಒಟ್ಟು ಸಾಮರ್ಥ್ಯ ೧೦೩.೫ ಮೆ. ವ್ಯಾ. ಇದು ಈಗಲೂ ನಮ್ಮ ದೇಶದ ಅತಿ ದೊಡ್ಡ ಜಲವಿದ್ಯುತ್ ಕೇಂದ್ರವಾಗಿದೆ. ಮೇಲೆ ಹೇಳಿದಂತೆ ಜಲವಿದ್ಯುತ್ ಕೇಂದ್ರಗಳನ್ನು ಪ್ರಪಂಚದ ಎಲ್ಲೆಡೆ ಗರಿಷ್ಠ ಬೇಡಿಕೆ ಪೂರೈಸಲು ಕೆಲವು ಗಂಟೆಗಳು (ಬೆಳಿಗ್ಗೆ ಹಾಗೂ ಸಂಜೆ ಸುಮಾರು ೫-೬ ಗಂಟೆಗಳಷ್ಟು) ಅವುಗಳ ಸಂಪೂರ್ಣ ಸಾಮರ್ಥ್ಯವನ್ನು ಬಳಸುತ್ತಾರೆ. ಆದರೆ ನಮ್ಮ ಶರಾವತಿ ಕೇಂದ್ರದ ಘಟಕಗಳ ವಿಷಯದಲ್ಲಿ ಹಾಗಲ್ಲ. ದಿನದ ಬಹಳ ಹೊತ್ತು ಅವುಗಳನ್ನು ಸತತವಾಗಿ ನಡೆಸಲಾಗುತ್ತಿತ್ತು. ಅಂದರೆ ಇದರ ಪಿ.ಎಲ್.ಎಫ್. ಒಳ್ಳೆಯ ಮಳೆ ಬಂದ ವರ್ಷಗಳಲ್ಲಿ ಶೇ.೬೦ಕ್ಕಿಂತಲೂ ಅಧಿಕವಾಗಿರುತ್ತದೆ. ಉಳಿದ ಜಲವಿದ್ಯುತ್ ಕೇಂದ್ರಗಳ ಪಿ.ಎಲ್.ಎಫ್. ಶೇ. ೩೦-೪೫ ಇರುತ್ತದೆ. ೧೯೭೯-೮೫ರ ಅವಧಿಯಲ್ಲಿ ಕಾಳಿ ನದಿ ಯೋಜನೆಯಡಿ ಒಟ್ಟು ೯೪೦ ಮೆ. ವ್ಯಾ. ಸಾಮರ್ಥ್ಯದ ಎರಡು ಕೇಂದ್ರಗಳನ್ನು ಸ್ಥಾಪಿಸಲಾಯಿತು. ಶರಾವತಿಗಿಂತ ಕಾಳಿ ನದಿಯಲ್ಲಿ ಕಡಿಮೆ ನೀರು ಲಭ್ಯವಿರುವುದರಿಂದ ನಾಗಝರಿ ಕೇಂದ್ರವನ್ನು ಗರಿಷ್ಠ ಬೇಡಿಕೆ ಪೂರೈಸುವುದಕ್ಕಾಗಿಯೇ ಬಳಸಲಾಗುತ್ತಿದೆ. ೧೯೮೯-೯೦ ರಲ್ಲಿ ಪೂರ್ಣಗೊಂಡ ವಾರಾಹಿ ಯೋಜನೆ ಬಿಟ್ಟರೆ, ಈ ಪ್ರಮಾಣದ ಜಲವಿದ್ಯುತ್ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಹಲವಾರು ಅಡಚಣೆಗಳು ಬಂದ ಕಾರಣ ಹಾಗೂ ವಿದ್ಯುತ್ ಜಾಲಕ್ಕೆ ಅವಿರತವಾಗಿ ವಿದ್ಯುತ್ ಲಭ್ಯವಾಗುವಂತೆ (Stable Grid) ಮಾಡಲು ರಾಯಚೂರಿನಲ್ಲಿ ಶಾಖೋತ್ಪನ್ನ ಕೇಂದ್ರದ ಸ್ಥಾಪನೆಯನ್ನು ಕೈಗೆತ್ತಿಕೊಳ್ಳಲಾಯಿತು. ಇಲ್ಲಿಗೆ ಬೇಕಾಗುವ ಕಲ್ಲಿದ್ದಲನ್ನು ಸಿಂಗರೇಣಿ (೫೫೦ ಕಿ.ಮೀ.), ತಾಲಚೇರ್ (೧೫೫೦ ಕಿ.ಮೀ.) ಮತ್ತು ವೆಸ್ಟರ್ನ್ ಕಲ್ಲಿದ್ದಲು ಗಣಿಗಳಿಂದ (೬೬೦ ಕಿ.ಮೀ.) ಪಡೆಯಲಾಗುತ್ತಿದೆ. ೧೯೮೫ರಿಂದ ೧೯೯೯ರ ಅವಧಿಯಲ್ಲಿ ಇಲ್ಲಿ ೨೧೦ ಮೆ. ವ್ಯಾ. ಸಾಮರ್ಥ್ಯದ ೬ ಘಟಕಗಳನ್ನು ಸ್ಥಾಪಿಸಲಾಗಿದೆ. ೭ನೇ ಘಟಕದ ನಿರ್ಮಾಣಕಾರ್ಯ ಮುಗಿಯುವ ಹಂತದಲ್ಲಿದ್ದು ಡಿಸೆಂಬರ್ ೨೦೦೨ರ ವೇಳೆಗೆ ಅದು ಉತ್ಪಾದನೆಯನ್ನು ಪ್ರಾರಂಭಿಸಲಿದೆ.

ಈಗ ಕರ್ನಾಟಕ ವಿದ್ಯುತ್ ನಿಗಮದ ಸ್ಥಾಪಿತ ಸಾಮರ್ಥ್ಯ ೪೧೪೦ ಮೆ. ವ್ಯಾ. ಅಂದರೆ ರಾಜ್ಯದ ಶೇ. ೬೫ರಷ್ಟು ವಿದ್ಯುತ್ ಪೂರೈಕೆ ಕ.ವಿ.ನಿ.ನಿ.ದಿಂದ ಆಗುತ್ತಿದೆ. ಮೂರು ಬೃಹತ್ ಜಲವಿದ್ಯುತ್ ಯೋಜನೆಗಳು ಹಾಗೂ ರಾಯಚೂರು ಶಾಖೋತ್ಪನ್ನ ಕೇಂದ್ರ ಕ.ವಿ.ನಿ.ನಿ.ಯ ಹೆಮ್ಮೆಯ ಯೋಜನೆಗಳಾಗಿವೆ. ಮೇಲೆ ತಿಳಿಸಿದಂತೆ ೬ ಘಟಕಗಳಿರುವ ರಾಯಚೂರಿನ ಶಾಖೋತ್ಪನ್ನ ಕೇಂದ್ರದ ಒಟ್ಟು ಸಾಮರ್ಥ್ಯ ೧೨೬೦ ಮೆ.ವ್ಯಾ. ೭ನೇ ಘಟಕದ ನಿರ್ಮಾಣ ಮುಕ್ತಾಯ ಹಂತದಲ್ಲಿದೆ.

ಶರಾವತಿ ಕಣಿವೆಯಲ್ಲಿ ಕ.ವಿ.ನಿ.ನಿ.ಯ ಮೂರು ವಿದ್ಯುತ್ ಕೇಂದ್ರಗಳಿವೆ. ಮೇಲೆ ಹೇಳಿದ ಶರಾವತಿ ವಿದ್ಯುದಾಗಾರ (೧೦೩೫ ಮೆ. ವ್ಯಾ.), ಲಿಂಗನಮಕ್ಕಿ ಅಣೆಕಟ್ಟು ವಿದ್ಯುದಾಗಾರ (೨ x ೨೭.೫ ಮೆ. ವ್ಯಾ.) ಹಾಗೂ ಗೇರುಸೊಪ್ಪ ಅಣೆಕಟ್ಟು ವಿದ್ಯುದಾಗಾರ (೪ x ೬೦ ಮೆ. ವ್ಯಾ.) ದೊಡ್ಡ ದೊಡ್ಡ ಅಣೆಕಟ್ಟುಗಳಿಗೆ ಹೊಂದಿಕೊಂಡಂತೆ ಅಣೆಕಟ್ಟು ವಿದ್ಯುದಾಗಾರಗಳನ್ನು ನಿರ್ಮಿಸಿ, ಬೃಹತ್ ಜಲವಿದ್ಯುತ್ ಉತ್ಪಾದನಾ ಕೇಂದ್ರಗಳಿಗೆ ಅಣೆಕಟ್ಟುಗಳಿಂದ ಬಿಡುವ ನೀರನ್ನು ಈ ವಿದ್ಯುದಾಗಾರಗಳಿಂದ ಹಾಯಿಸುತ್ತಾರೆ. ಲಿಂಗನಮಕ್ಕಿ ಅಣೆಕಟ್ಟಿನ ಶೇಖರಣಾ ಸಾಮರ್ಥ್ಯ ೧೫೧ ಟಿ.ಎಂ.ಸಿ. ಲಿಂಗನಮಕ್ಕಿ ಅಣೆಕಟ್ಟಿನಿಂದ ಶರಾವತಿ ವಿದ್ಯುದಾಗಾರಕ್ಕೆ ತಲಕಳಲೆ ಅಣೆಕಟ್ಟಿನ ಮೂಲಕ ನೀರನ್ನು ಬಿಡುತ್ತಾರೆ. ಶರಾವತಿ ವಿದ್ಯುದಾಗಾರದ ಮೂಲಕ ಹರಿಯುವ ನೀರನ್ನು ಪುನಃ ಗೇರುಸೊಪ್ಪ ಅಣೆಕಟ್ಟಿನಲ್ಲಿ ಸಂಗ್ರಹಿಸಿ, ಅಲ್ಲಿ ಒಂದು ೪ x ೬೦ ಮೆ. ವ್ಯಾ. ಕೇಂದ್ರವನ್ನು ಸ್ಥಾಪಿಸಲಾಗಿದೆ. ಈ ರೀತಿ, ಶರಾವತಿ ನದಿಯಿಂದ ಸಾಧ್ಯವಿರುವ ವಿದ್ಯುಚ್ಛಕ್ತಿಯನ್ನು ಪೂರ್ಣ ಪ್ರಮಾಣದಲ್ಲಿ ಉತ್ಪಾದಿಸಲಾಗುತ್ತಿದೆ. ಗೇರುಸೊಪ್ಪ ಘಟಕಗಳನ್ನು ಗರಿಷ್ಠ ಬೇಡಿಕೆ ಪೂರೈಸಲು ನಡೆಸಲಾಗುತ್ತಿದೆ.

ಕಾಳಿನದಿ ಯೋಜನೆಯಡಿಯಲ್ಲಿ ೪ ವಿದ್ಯುದಾಗಾರಗಳು ಮತ್ತು ನಾಗಝರಿ ವಿದ್ಯುದಾಗಾರದಲ್ಲಿ ೬ ಘಟಕಗಳನ್ನು ಸ್ಥಾಪಿಸಲಾಗಿದೆ. ಈ ಘಟಕಗಳ ಸಾಮರ್ಥ್ಯ ತಲಾ ೧೩೫ ಮೆ. ವ್ಯಾ. ಇದರಲ್ಲಿ ಮೂರು ಘಟಕಗಳನ್ನು ತಲಾ ೧೫೦ ಮೆ. ವ್ಯಾ.ಗಳಿಗೆ ಉನ್ನತೀಕರಿಸಲಾಗಿದೆ. ಉಳಿದ ೩ ಘಟಕಗಳ ಉನ್ನತೀಕರಣದ ಕಾರ್ಯ ನಡೆಯುತ್ತಿದೆ. ಇಲ್ಲಿಗೆ ಸೂಪ ಅಣೆಕಟ್ಟಿನಿಂದ (ಶೇಖರಣಾ ಸಾಮರ್ಥ್ಯ ೧೪೫ ಟಿ.ಎಂ.ಸಿ.) ಬೊಮ್ಮನ ಹಳ್ಳಿ ಅಣೆಕಟ್ಟಿನ ಮೂಲಕ ನೀರನ್ನು ಬಿಡುತ್ತಾರೆ. ಸೂಪ ಅಣೆಕಟ್ಟಿನಿಂದ ಬಿಡುವ ನೀರನ್ನು ಸೂಪ ವಿದ್ಯುದಾಗಾರದಿಂದ (೨ x ೫೦ ಮೆ. ವ್ಯಾ.) ಹಾಯಿಸುತ್ತಾರೆ. ನಾಗಝರಿ ವಿದ್ಯುದಾಗಾರದಿಂದ ಹರಿಯುವ ನೀರನ್ನು ಸಮುದ್ರ ಸೇರುವ ಮುಂಚೆ, ಕೊಡಸಳ್ಳಿ (೨ x ೪೦ ಮೆ. ವ್ಯಾ.) ಹಾಗೂ ಕದ್ರ (೩ x ೫೦ ಮೆ. ವ್ಯಾ.) ವಿದ್ಯುದಾಗಾರಗಳಲ್ಲಿ ವಿದ್ಯುತ್ ಉತ್ಪಾದಿಸಲು ಉಪಯೋಗಿಸಲಾಗುತ್ತದೆ.

ಕ.ವಿ.ನಿ.ನಿ.ಯ ಮತ್ತೊಂದು ಬೃಹತ್ ಯೋಜನೆ ವಾರಾಹಿ ಯೋಜನೆ. ಇಲ್ಲಿ ರಾಜ್ಯದ ಏಕೈಕ ಭೂಗರ್ಭ ವಿದ್ಯುದಾಗಾರವನ್ನು ಸ್ಥಾಪಿಸಲಾಗಿದೆ. ಇಲ್ಲಿ ತಲಾ ೧೧೫ ಮೆ. ವ್ಯಾ ಸಾಮರ್ಥ್ಯದ ೨ ಘಟಕಗಳಿವೆ. ಇಲ್ಲಿಗೆ ಮಾಣಿ ಅಣೆಕಟ್ಟಿನಿಂದ (ಶೇಖರಣಾ ಸಾಮರ್ಥ್ಯ ೩೧ ಟಿ.ಎಂ.ಸಿ.) ಪಿಕ್‌ಅಪ್ ಅಣೆಕಟ್ಟಿನ ಮೂಲಕ ನೀರು ಬಿಡುತ್ತಾರೆ. ಮಾಣಿ ಅಣೆಕಟ್ಟು ವಿದ್ಯುದಾಗಾರದಲ್ಲಿ ೨ ಸಣ್ಣ (ತಲಾ ೪.೫ ಮೆ.ವ್ಯಾ.) ಘಟಕಗಳು ಇವೆ. ವಾರಾಹಿ ಭೂಗರ್ಭ ವಿದ್ಯುದಾಗಾರದಿಂದ ಹರಿಯುವ ನೀರನ್ನು ಪುನಃ ಸಮುದ್ರಕ್ಕೆ ಸೇರುವ ಮುಂಚೆ ಒಂದು ಸಣ್ಣ ಅಣೆಕಟ್ಟು ವಿದ್ಯುತ್ ಉತ್ಪಾದನಾ ಕೇಂದ್ರದ ಸ್ಥಾಪನೆಗೆ ಬಳಸುವ ಉದ್ದೇಶವೂ ಇದೆ. ಆದರೆ ಇದು ಸಣ್ಣ ಪ್ರಮಾಣದ ಯೋಜನೆ.

ಇದಲ್ಲದೆ ಭದ್ರಾ (೩೯.೨ ಮೆ. ವ್ಯಾ.), ಘಟಪ್ರಭಾ (೩೨ ಮೆ. ವ್ಯಾ.) ತುಂಗಭದ್ರಾ ನೀರಾವರಿ ಕಾಲುವೆಗಳಲ್ಲಿ ನಿರ್ಮಿಸಿರುವ ೪ ಸಣ್ಣ ಜಲವಿದ್ಯುದಾಗಾರಗಳು (೧೦.೭೫ ಮೆ. ವ್ಯಾ.) ಹಾಗೂ ಕಪ್ಪತಗುಡ್ಡ ಗಾಳಿ ವಿದ್ಯುತ್ ಉತ್ಪಾದನಾ ಕೇಂದ್ರ (೪.೫೫ ಮೆ. ವ್ಯಾ.) ಕ.ವಿ.ನಿ.ನಿ.ಯ ಇತರ ಯೋಜನೆಗಳಾಗಿವೆ.

**ಚಾಲನೆ ಹಾಗೂ ನಿರ್ವಹಣೆ**

ನಮ್ಮ ದೇಶದಲ್ಲಿ ಶಾಖೋತ್ಪನ್ನ ಸ್ಥಾವರಗಳ ಸರಾಸರಿ ಪಿ.ಎಲ್.ಎಫ್. ಶೇ.೭೦ರಷ್ಟಿದ್ದರೆ, ರಾಯಚೂರು ಶಾಖೋತ್ಪನ್ನ ಕೇಂದ್ರದ ಪಿ.ಎಲ್.ಎಫ್. ಶೇ.೮೧ರಷ್ಟಿದೆ. ಹಾಗೂ ಇಲ್ಲಿನ ಎಣ್ಣೆಯ ಬಳಕೆ (ಘಟಕಗಳ ಚಾಲನೆಯ ಪ್ರಾರಂಭದಲ್ಲಿ ಬಾಯ್ಲರಿಗೆ ಎಣ್ಣೆಯನ್ನು ಬಳಸುತ್ತಾರೆ) ಹಾಗೂ ವಿದ್ಯುದಾಗಾರದ ಸ್ವಂತ ಬಳಕೆಗೆ ಉಪಯೋಗಿಸುವ ವಿದ್ಯುತ್ (Auxiliary Consumption) ಕಡಿಮೆಯಿದ್ದು (ಶೇ. ೮–೮.೫೦), ಇದು ಒಂದು ಉತ್ತಮ ಸಾಧನೆಯೆಂದು ಪ್ರತಿವರ್ಷ ಕೇಂದ್ರ ವಿದ್ಯುತ್ ಪ್ರಾಧಿಕಾರದಿಂದ ಪ್ರಶಸ್ತಿಗೆ ಪಾತ್ರವಾಗಿದೆ. ಕರ್ನಾಟಕದ ಜಲವಿದ್ಯುತ್ ಕೇಂದ್ರಗಳ ಲಭ್ಯತೆ ಸುಮಾರು ಶೇ. ೯೦ರಷ್ಟಿದ್ದು ರಾಷ್ಟ್ರಮಟ್ಟದಲ್ಲಿ, ಕ.ವಿ.ನಿ.ನಿ.ಯ ಜಲವಿದ್ಯುತ್ ಕೇಂದ್ರಗಳ ಸಾಧನೆಯೂ ಉತ್ತಮವೆಂದು ಪರಿಗಣಿಸಲ್ಪಟ್ಟಿದೆ.

**ನಿರ್ಮಾಣ ಹಂತದಲ್ಲಿರುವ ಯೋಜನೆಗಳು ಹಾಗೂ ಹೊಸ ಯೋಜನೆಗಳು**

ರಾಯಚೂರಿನಲ್ಲಿ ಮುಕ್ತಾಯ ಹಂತದಲ್ಲಿರುವ ೭ನೇ ಘಟಕದಿಂದ ೨೧೦ ಮೆ. ವ್ಯಾ., ಬಳ್ಳಾರಿಯಲ್ಲಿ ಯೋಜಿಸಿರುವ ೫೦೦ ಮೆ. ವ್ಯಾ., ಆಲಮಟ್ಟಿಯಲ್ಲಿ ನಿರ್ಮಾಣವಾಗುತ್ತಿರುವ ೨೯೦ ಮೆ. ವ್ಯಾ., ರಾಯಚೂರಿನಲ್ಲಿ ಉದ್ದೇಶಿಸಿರುವ ಎಂಟನೇ ಘಟಕ ಹಾಗೂ ಮಹಾದಾಯಿಯಲ್ಲಿ ಯೋಜಿಸಿರುವ ೩೨೦ ಮೆ. ವ್ಯಾ.ಗಳಷ್ಟು ಸಾಮರ್ಥ್ಯದಿಂದ ಇನ್ನು ೪-೫ ವರ್ಷಗಳಲ್ಲಿ ೧,೦೮೦ ಮೆ. ವ್ಯಾ.ಗಳಿಗಿಂತ ಹೆಚ್ಚಿನ ಸಾಮರ್ಥ್ಯ ಲಭ್ಯವಾಗಲಿದೆ.

ಇದಲ್ಲದೆ ಬಿಡದಿಯಲ್ಲಿ ೭೦೦ ಮೆ. ವ್ಯಾ. ಸಾಮರ್ಥ್ಯದ ನೈಸರ್ಗಿಕ ಅನಿಲ ಸ್ಥಾವರ ಸ್ಥಾಪಿಸಲು ಉದ್ದೇಶಿಸಲಾಗಿದೆ.



ನಾಗಝರಿ ವಿದ್ಯುದಾಗಾರ

ವಿದ್ಯುತ್ ಘಟಕಗಳ ನಿರ್ಮಾಣ ಕ್ಷೇತ್ರದಲ್ಲಿ ಕ.ವಿ.ನಿ.ನಿ.ಯು ರಾಷ್ಟ್ರಮಟ್ಟದಲ್ಲಿ ಮುಂಚೂಣಿಯಲ್ಲಿದೆ. ರಾಯಚೂರಿನ ■ ಮತ್ತು ೬ನೇ ಘಟಕಗಳನ್ನು ೨೮ ಹಾಗೂ ೩೪ ತಿಂಗಳುಗಳಲ್ಲಿ ನಿರ್ಮಿಸಿ ಹೊಸ ದಾಖಲೆಯನ್ನು ಸ್ಥಾಪಿಸಿದೆ. ೭ ನೇ ಘಟಕವನ್ನು ೨೬ ತಿಂಗಳುಗಳಲ್ಲಿ ನಿರ್ಮಿಸುವ ಎಲ್ಲ ಸಾಧ್ಯತೆಗಳೂ ಇವೆ. ಮಾರ್ಚ್ ೨೦೦೨ರಲ್ಲಿ ಪ್ರಾರಂಭಿಸಲಾದ ಆಲಮಟ್ಟಿ ಯೋಜನೆಯ ಘಟಕಗಳನ್ನು ೩೭ ತಿಂಗಳುಗಳಲ್ಲಿ ಪೂರ್ಣಗೊಳಿಸುವ ಯೋಜನೆಯನ್ನು ರೂಪಿಸಲಾಗಿದ್ದು ಇದೂ ಒಂದು ದಾಖಲೆಯಾಗುವ ನಿರೀಕ್ಷೆಯಿದೆ.

**ಯೋಜನೆಗಳ ನಿರ್ಮಾಣಕ್ಕೆ ಆರ್ಥಿಕ ನೀತಿ**

೧೯೯೫ರವರೆಗೆ ಕ.ವಿ.ನಿ.ನಿ.ದ ಬಹುತೇಕ ಆರ್ಥಿಕ ಬಂಡವಾಳವನ್ನು ಸರ್ಕಾರದ ಮೂಲಕ ಪಡೆಯಲಾಗುತ್ತಿತ್ತು. ನಂತರ ರಾಯಚೂರು ೫ ಮತ್ತು ೬ನೇ ಘಟಕಗಳನ್ನು ೧೯೯೬ರಲ್ಲಿ ಪ್ರಾರಂಭಿಸುವಾಗ (ಅಂದಾಜು ವೆಚ್ಚ ೧೫೪೫ ಕೋಟಿ ರೂಪಾಯಿಗಳು) ಸರ್ಕಾರದಿಂದ ಆರ್ಥಿಕ ಸಹಾಯ ಪಡೆಯಲು ಸಾಧ್ಯವಾಗದೆ ಸಾರ್ವಜನಿಕ ವಲಯದ ಬ್ಯಾಂಕ್‌ಗಳು ಮತ್ತು ಹಣಕಾಸು ಸಂಸ್ಥೆಗಳಿಂದಲೇ ಈ ಯೋಜನೆಗೆ ಹೂಡಬೇಕಾದ ೧,೩೦೦ ಕೋಟಿ ರೂಪಾಯಿಗಳನ್ನು ಪಡೆಯಲು ಕ.ವಿ.ನಿ.ನಿ.ಯು ಪ್ರಯತ್ನಿಸಿ ಮೊದಲ ಬಾರಿಗೆ ರಾಜ್ಯದ ಭಾರಿ ಯೋಜನೆಗೆ ಸರ್ಕಾರೇತರ ಸಂಘಸಂಸ್ಥೆಗಳಿಂದ ಆರ್ಥಿಕ ಸಹಾಯವನ್ನು ಪಡೆಯಿತು. ಈ ಘಟಕಗಳ ನಿರ್ಮಾಣ ಅತ್ಯಂತ ಕಡಿಮೆ ಅವಧಿಯಲ್ಲಿ (೨೮ ತಿಂಗಳು ಹಾಗೂ ೩೪ ತಿಂಗಳು) ಮುಗಿದಿದ್ದು ಕ.ವಿ.ನಿ.ನಿ.ಯ ತನ್ನ ನಂತರದ ಯೋಜನೆಗಳಿಗೆ ಹಣಕಾಸು ಸಂಸ್ಥೆಗಳು ಹಾಗೂ ಸಾರ್ವಜನಿಕ ವಲಯದ ಬ್ಯಾಂಕ್‌ಗಳು ಆರ್ಥಿಕ ಸಾಲ ಒದಗಿಸಲು ಮುಂದೆ ಬಂದಿವೆ. ಕ.ವಿ.ನಿ.ನಿ. ಈಗ ಕೈಗೆತ್ತಿಕೊಂಡಿರುವ ರಾಯಚೂರು ೭ನೇ ಘಟಕಕ್ಕೆ ಸುಮಾರು ೪೯೦ ಕೋಟಿ ರೂ. ಸಾಲ ಒದಗಿಸಿವೆ. ಆಲಮಟ್ಟಿ ಯೋಜನೆಗಂತೂ ಕೇಂದ್ರ ಸರ್ಕಾರದ ಸಂಸ್ಥೆಯಾದ ಪವರ್ ಫೈನಾನ್ಸ್ ಕಾರ್ಪೋರೇಷನ್ ೫೦೦ ಕೋಟಿ ರೂ. (ಒಟ್ಟು ಅವಶ್ಯಕತೆ ೫೪೦ ಕೋಟಿ ರೂಪಾಯಿಗಳು) ನೀಡಲು ನಿರ್ಧರಿಸಿದೆ.

ಮುಂದಿನ ಯೋಜನೆಗಳಿಗೂ ಹಣಕಾಸು ಸಂಸ್ಥೆಗಳು ಹಾಗೂ ಬ್ಯಾಂಕ್‌ಗಳಿಂದ ಕ.ವಿ.ನಿ.ನಿ.ಕ್ಕೆ ಆರ್ಥಿಕ ಸಹಾಯ ನಿರಂತರವಾಗಿ ದೊರೆಯುವ ಭರವಸೆ ಇದೆ.

ರಾಯಚೂರು ೫ ಹಾಗೂ ೬ನೇ ಘಟಕಗಳ ನಿರ್ಮಾಣದ ಪ್ರಾರಂಭದಲ್ಲಿ ಸಾಲದ ಬಡ್ಡಿ ದರವು ಈಗಿಗಿಂತ ಹೆಚ್ಚಾಗಿದ್ದು ನಂತರದ ದಿನಗಳಲ್ಲಿ ಇದು ಕಡಿಮೆಯಾದಾಗ ನಿಗಮವು ಕಡಿಮೆ ಅವಧಿ/ಕಡಿಮೆ ಬಡ್ಡಿ ದರದ ಹೊಸ ಸಾಲಗಳನ್ನು ಪಡೆದು ಅಧಿಕ ಬಡ್ಡಿ ದರದ ಸಾಲಗಳನ್ನು ಹಿಂದಕ್ಕೆ ನೀಡುವ ಮೂಲಕ ಉಳಿತಾಯವನ್ನು ಸಾಧಿಸಿತು. ಈ ಪ್ರಯತ್ನಗಳನ್ನು ನಿಗಮವು ನಿರಂತರವಾಗಿ ಎಲ್ಲಾ ಕಾರ್ಯಗಳಲ್ಲಿ ಮುಂದುವರಿಸಿದ್ದು, ಆರ್ಥಿಕ ವಹಿವಾಟನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸುತ್ತಿದೆ. ಈ ನಿರ್ವಹಣೆಯನ್ನು ಆರ್ಥಿಕ ಇಂಜಿನಿಯರಿಂಗ್ ಎಂದು ಕರೆಯಲಾಗುತ್ತಿದೆ.

ಇದಲ್ಲದೆ ಯೋಜನೆಯ ಕಾಂಟ್ರಾಕ್ಟ್‌ಗಳನ್ನು ನೂತನ ರೀತಿಯಲ್ಲಿ ಯಶಸ್ವಿಯಾಗಿ ನಿರ್ವಹಿಸಿ ೧೫೪೫ ಕೋಟಿ ರೂಪಾಯಿಗಳ ಅಂದಾಜು ವೆಚ್ಚದ ರಾಯಚೂರು ೫ ಹಾಗೂ ೬ನೇ ಘಟಕಗಳನ್ನು ಸುಮಾರು ೧,೪೦೦ ಕೋಟಿ ರೂಪಾಯಿಗಳಲ್ಲಿ ನಿರ್ಮಾಣ ಮಾಡಿ ೧೪೫ ಕೋಟಿ ರೂಪಾಯಿಗಳ ಉಳಿತಾಯವನ್ನು ಸಾಧಿಸಲಾಗಿದೆ.

ಇಂತಹ ಬೃಹತ್ ಯೋಜನೆಯನ್ನು ಅಂದಾಜಿಗಿಂತ ಕಡಿಮೆ ಸಮಯ ಹಾಗೂ ವೆಚ್ಚದಲ್ಲಿ ನಿರ್ಮಿಸಿರುವುದು ಇದೇ ಮೊದಲು. ಈ ಉಳಿತಾಯದಿಂದ ವಿದ್ಯುತ್ ದರವೂ ಕಡಿಮೆಯಾಗಿದ್ದು, ಇದರ ಫಲವನ್ನು ಗ್ರಾಹಕರಿಗೆ ತಲುಪಿಸಲಾಗಿದೆ.

ಕಾಂಟ್ರಾಕ್ಟ್ ಹಾಗೂ ಆರ್ಥಿಕ ನಿರ್ವಹಣೆಯಲ್ಲಿ ನಿಗಮವು ನೂತನ ನೀತಿಗಳನ್ನು ಅಳವಡಿಸಿ ಅತ್ಯಂತ ಕಡಿಮೆ ದರದಲ್ಲಿ ವಿದ್ಯುತ್ ಉತ್ಪಾದನೆ ಮಾಡುವ ನಿಟ್ಟಿನಲ್ಲಿ ನಿರಂತರವಾಗಿ ಶ್ರಮಿಸುತ್ತಿದೆ.

**ಮುಂಬರುವ ವರ್ಷಗಳಿಗೆ ಶಕ್ತಿಯ ಸಂಪನ್ಮೂಲಗಳ ಆಯ್ಕೆ**

ಅತಿ ಕಡಿಮೆ ವೆಚ್ಚದಲ್ಲಿ ವಿದ್ಯುತ್‌ನ್ನು ಉತ್ಪಾದಿಸುವುದು ಸಂಬಂಧಪಟ್ಟ ಎಲ್ಲಾ ಸಂಸ್ಥೆಗಳ ಜವಾಬ್ದಾರಿಯಾಗಿದೆ. ಕರ್ನಾಟಕದಲ್ಲಿ ಜಲವಿದ್ಯುತ್ ಯೋಜನೆಗಳು ಮಾತ್ರ ಅತಿ ಕಡಿಮೆ ದರದಲ್ಲಿ ವಿದ್ಯುತ್ ಉತ್ಪಾದಿಸುತ್ತವೆ. ನಮಗೆ ಲಭ್ಯವಿರುವ ೬,೫೦೦ ಮೆ.ವ್ಯಾ.ಗಳಷ್ಟು ಜಲಸಂಪನ್ಮೂಲದಿಂದ ಸುಮಾರು ೩,೨೦೦ ಮೆ. ವ್ಯಾ. ಗಳಷ್ಟನ್ನು ಸ್ಥಾಪಿಸಿದ್ದೇವೆ. ಇದರಲ್ಲಿ

ಖಾಸಗಿ ವಿದ್ಯುತ್ ಉತ್ಪಾದಕರಿಂದ ಸ್ಥಾಪಿತವಾದ ಸಣ್ಣ ಜಲವಿದ್ಯುತ್ ಕೇಂದ್ರಗಳ ಸುಮಾರು ೧೨೦ ಮೆ. ವ್ಯಾ. ಸೇರಿದೆ. ಅಂದರೆ ಇನ್ನೂ ೩,೩೦೦ ಮೆ. ವ್ಯಾ.ಗಳಷ್ಟು ಜಲಸಂಪನ್ಮೂಲವನ್ನು ಆಧರಿಸಿದ ಉತ್ಪಾದನೆಗೆ ಅವಕಾಶ ಇದೆ. ಅಂತರ ರಾಜ್ಯ ನದಿ ನೀರಿನ ಸಮಸ್ಯೆ, ಪರಿಸರವಾದಿಗಳ ವಿರೋಧ, ಇತ್ಯಾದಿ ಕಾರಣಗಳಿಂದ ಕೆಲವು ಯೋಜನೆಗಳು ಸದ್ಯದಲ್ಲೇ ಪ್ರಾರಂಭವಾಗುವ ಲಕ್ಷಣಗಳಿಲ್ಲ. ನಮ್ಮ ರಾಜ್ಯದಲ್ಲಿ ಕಲ್ಲಿದ್ದಲು ಲಭ್ಯವಿಲ್ಲ. ಸುಲಭ ಬೆಲೆಯಲ್ಲಿ ಕಲ್ಲಿದ್ದಲು ದೊರೆಯುವ ಸಾಧ್ಯತೆಯೂ ಕಡಿಮೆ. ಈಗಿನ ದಿನಗಳಲ್ಲಿ ನೈಸರ್ಗಿಕ ಅನಿಲದಿಂದ ವಿದ್ಯುತ್ ಉತ್ಪಾದನೆ ಕಡಿಮೆ ವೆಚ್ಚದಲ್ಲಿ ಲಭ್ಯವಾಗುವ ನಿಟ್ಟಿನಲ್ಲಿ ಅಧ್ಯಯನಗಳು ಬೆಳಕು ಚೆಲ್ಲಿವೆ. ಕೊಲ್ಲಿ ರಾಷ್ಟ್ರಗಳಿಂದ ದ್ರವೀಕರಿಸಿದ ನೈಸರ್ಗಿಕ ಅನಿಲವನ್ನು ಆಮದು ಮಾಡಿಕೊಂಡು, ಅನಿಲವನ್ನಾಗಿ ಪುನಃ ಪರಿವರ್ತಿಸಿ ವಿದ್ಯುತ್ ಸ್ಥಾವರಗಳಿಗೆ ಹರಿಸುವ ನಿಟ್ಟಿನಲ್ಲಿ ಕೆಲವು ಪೆಟ್ರೋಲಿಯಂ ಸಂಸ್ಥೆಗಳು ಯೋಜನೆಗಳನ್ನು ಕೈಗೆತ್ತಿಕೊಂಡಿವೆ.




ಇದರಲ್ಲಿ ಬಿ.ಪಿ.ಸಿ.ಎಲ್., ರಿಲಿಯನ್ಸ್ ಹಾಗೂ ಜಿ.ಎ.ಐ.ಎಲ್. ಸಂಸ್ಥೆಗಳು ಮುಂಚೂಣಿಯಲ್ಲಿವೆ. ಕರ್ನಾಟಕಕ್ಕೆ ಕೊಚ್ಚಿ ಅಥವಾ ಎನ್ನೂರು ಬಂದರುಗಳಿಂದ ಅಥವಾ ಮಂಗಳೂರು ಬಂದರಿನಿಂದ ಅನಿಲವನ್ನು ಸರಬರಾಜು ಮಾಡಬಹುದು. ಅನಿಲದ ಆಮದು ಮತ್ತು ಸರಬರಾಜು ಯೋಜನೆಯನ್ನು ಕ.ವಿ.ನಿ.ನಿ.ವೇ ಕೈಗೆತ್ತಿಕೊಳ್ಳುವ ಸಾಧ್ಯತೆಯಿದೆ. ಆಗ ಎಲ್.ಪಿ.ಜಿ.ಗೆ ಬದಲಾಗಿ ನೈಸರ್ಗಿಕ ಅನಿಲವನ್ನು ಕೊಳವೆ ಮೂಲಕ ಅಡಿಗೆ ಇಂಧನವಾಗಿ ಗ್ರಾಹಕರಿಗೆ ಸರಬರಾಜು ಮಾಡುವ ವ್ಯವಸ್ಥೆಯೂ ಒದಗುತ್ತದೆ.

ಮತ್ತೊಂದು ಸಮಸ್ಯೆಯೆಂದರೆ ಉತ್ಪಾದಿತ ವಿದ್ಯುತ್ತಿನಲ್ಲಿ ಶೇ. ೩೦-೩೫ ಪ್ರಸರಣ ಮತ್ತು ವಿತರಣ ಪ್ರಕ್ರಿಯೆಯಲ್ಲಿ ನಷ್ಟವಾಗುತ್ತದೆ. ಇದಕ್ಕಿರುವ ಒಂದು ಪರಿಹಾರವೆಂದರೆ ಸಣ್ಣ ಸಣ್ಣ ಪ್ರಮಾಣದ ಜಲ/ವಾಯು ವಿದ್ಯುತ್ ಕೇಂದ್ರಗಳನ್ನು ವಿತರಣ ಜಾಲಕ್ಕೆ ಅಲ್ಲಲ್ಲಿ ಸೇರಿಸಿದರೆ, ಮುಖ್ಯ ಜಾಲದ ಮೇಲಿನ ಒತ್ತಡ ಕಡಿಮೆಯಾಗಿ ವೋಲ್ಟೇಜ್ ವ್ಯವಸ್ಥೆ ಬಹುವಾಗಿ ಸುಧಾರಿಸುತ್ತದೆ. ನೀರಾವರಿ ಕಾಲುವೆಗಳಲ್ಲಿ ಹಾಗೂ ನೈಸರ್ಗಿಕ ಝರಿಗಳಲ್ಲಿ ಸಣ್ಣ ಹಾಗೂ ಅತಿ ಸಣ್ಣ ಜಲವಿದ್ಯುತ್ ಕೇಂದ್ರಗಳನ್ನು ಸ್ಥಾಪಿಸಬಹುದು. ಈ ಝರಿಗಳಲ್ಲಿ ಮಳೆಗಾಲದ ನಂತರ ನೀರಿನ ಕೊರತೆ ಉಂಟಾದಾಗ, ಸೌರಶಕ್ತಿಯ ಫೋಟೋ ವೋಲ್ಟಾಯಿಕ್ ಸೆಲ್‌ಗಳ ಸ್ಥಾವರಗಳನ್ನು ಸ್ಥಾಪಿಸಿ ಸತತವಾಗಿ ವಿದ್ಯುತ್ ಸರಬರಾಜನ್ನು ವಿತರಣಾ ಕೇಂದ್ರಕ್ಕೆ ನೇರವಾಗಿ ಸಂಯೋಜಿಸಬಹುದು.

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ಸಂಸ್ಥೆ (ಕೆ.ಆರ್.ಇ.ಡಿ.ಎಲ್.) ಇಂತಹ ಯೋಜನೆಗಳನ್ನು ಗುರುತಿಸುವಲ್ಲಿ ಸಹಾಯ ಮಾಡುತ್ತದೆ. ಈಗಾಗಲೇ ಸುಮಾರು ೧೨೦ ಮೆ.ವ್ಯಾ. ಸಾಮರ್ಥ್ಯ ಖಾಸಗಿಯವರಿಂದ ಸ್ಥಾಪಿಸಲ್ಪಟ್ಟ ಇಂಥ ಸಣ್ಣ ಜಲವಿದ್ಯುತ್ ಯೋಜನೆಗಳಿಂದ ಲಭ್ಯವಾಗುತ್ತಿದೆ.

ಗಾಳಿ ಉತ್ಪಾದನಾ ಕೇಂದ್ರಗಳನ್ನೂ ಗದಗ, ಚಿತ್ರದುರ್ಗ ಜಿಲ್ಲೆಗಳಲ್ಲಿ ಸ್ಥಾಪಿಸಲಾಗಿದೆ. ಇದನ್ನೂ ಕೆ.ಆರ್.ಇ.ಡಿ.ಎಲ್. ಸಂಸ್ಥೆ ಕೈಗೆತ್ತಿಕೊಂಡಿದೆ. ಖಾಸಗಿ ಉತ್ಪಾದಕರು ಈಗಾಗಲೇ ಸುಮಾರು ೯೨ ಮೆ. ವ್ಯಾ.ಗಳಷ್ಟು ಗಾಳಿ ಯಂತ್ರಗಳನ್ನು ಈ ಜಿಲ್ಲೆಗಳಲ್ಲಿ ಸ್ಥಾಪಿಸಿದ್ದಾರೆ. ಕ.ವಿ.ನಿ.ನಿ.ವು ಗದಗ ಜಿಲ್ಲೆಯಲ್ಲಿ ಪ್ರಾಯೋಗಿಕವಾಗಿ ಸ್ಥಾಪಿಸಿರುವ ಗಾಳಿ ವಿದ್ಯುತ್ ಕೇಂದ್ರದಲ್ಲಿ ೨೦ ಘಟಕಗಳಿದ್ದು ೪.೫೫ ಮೆ. ವ್ಯಾ. ವಿದ್ಯುತ್ ದೊರೆಯುತ್ತದೆ. ಈ ಕೇಂದ್ರ ರಾಷ್ಟ್ರದ ಅತ್ಯುತ್ತಮ ಗಾಳಿ ವಿದ್ಯುತ್ ಕೇಂದ್ರಗಳಲ್ಲಿ ಒಂದಾಗಿದೆ.

ಇನ್ನು ಸೌರಶಕ್ತಿ, ಇದನ್ನು ಗ್ರಾಹಕರೇ ಅಳವಡಿಸಿಕೊಳ್ಳಬೇಕಾಗುತ್ತದೆ. ನಮಗೆ ನೈಸರ್ಗಿಕವಾಗಿ ದೊರೆಯುವ ಸೌರಶಕ್ತಿಯನ್ನು ನೀರು ಕಾಯಿಸುವುದಕ್ಕೆ ಉಪಯೋಗಿಸಿದರೂ ಸಹ ನಮ್ಮ ವಿದ್ಯುತ್ ಜಾಲಕ್ಕೆ ಸುಮಾರು ೨,೬೦೦ ಮೆ. ವ್ಯಾ.ಗಳಷ್ಟು ಸಂಪರ್ಕ ಲೋಡ್ (ಕನೆಕ್ಟಡ್ ಲೋಡ್) ಕಡಿಮೆಯಾಗುತ್ತದೆ.

ಇದೆಲ್ಲದಕ್ಕಿಂತ ಮುಖ್ಯವಾಗಿ, ವಿದ್ಯುತ್ತನ್ನು ವ್ಯರ್ಥ ಮಾಡದೆ, ಅಗತ್ಯವಿರುವಷ್ಟು ಮಾತ್ರ ಉಪಯೋಗಿಸುವುದು ಎಲ್ಲರ ಜವಾಬ್ದಾರಿ. ಈಗ ಲಭ್ಯವಿರುವ Compact fluorescent lamp, electronic choke ಮುಂತಾದವುಗಳನ್ನು ಬಳಸಿದರೆ ವಿದ್ಯುತ್ ಆವಶ್ಯಕತೆಯನ್ನು ಕಡಿಮೆ ಮಾಡಬಹುದು. ವಿದ್ಯುತ್ ಉಳಿಸುವ ಈ ಎಲ್ಲಾ ಯೋಜನೆಗಳಿಗೆ ಕೆ.ಆರ್.ಇ.ಡಿ.ಎಲ್. ಮಾರ್ಗದರ್ಶನದ ಜೊತೆಗೆ ಮಾಹಿತಿಯನ್ನೂ ನೀಡುತ್ತದೆ.

ಕರ್ನಾಟಕದಲ್ಲಿ ಮುಂಬರುವ ವರ್ಷಗಳಲ್ಲಿ ವಿದ್ಯುತ್ ಬೇಡಿಕೆಯನ್ನು ಪೂರೈಸಲು ೫,೦೦೦ ಮೆ. ವ್ಯಾ.ಗಳಷ್ಟು ಬೃಹತ್ ಪ್ರಮಾಣದ ಯೋಜನೆಗಳಿಗೆ ಸುಮಾರು ೨೫,೦೦೦ ಕೋಟಿ ರೂ. ಉತ್ಪಾದನೆ ಹಾಗೂ ೨೫,೦೦೦ ಕೋಟಿ ರೂ. ಪ್ರಸರಣೆ ಮತ್ತು ವಿತರಣೆಯ ಅವಶ್ಯವಿದೆ. ಇದು ಸರ್ಕಾರದ ಮೇಲಿರುವ ಒಂದು ಜವಾಬ್ದಾರಿ. ಗ್ರಾಹಕರೂ, ಸಹಕಾರಿ ಸಂಘಗಳೂ ಮುಂತಾದವರು ವಿತರಣೆಯ ವ್ಯವಸ್ಥೆಯಲ್ಲಿ ವಿದ್ಯುತ್ ಉಳಿತಾಯದಲ್ಲಿ (demand side management) ಈ ಮೂಲಕ ಮಹತ್ತರ ಪಾತ್ರವನ್ನು ನಿರ್ವಹಿಸಬಹುದಾಗಿದೆ:-

- ಸೌರಶಕ್ತಿಯನ್ನು ಉಪಯೋಗಿಸುವ, ನೀರು ಕಾಯಿಸುವ ಹೀಟರ್‌ಗಳನ್ನು ಎಲ್ಲಾ ಗ್ರಾಹಕರೂ ಉಪಯೋಗಿಸಬಹುದು.
- ಸಣ್ಣ ಪ್ರಮಾಣವಾಗಿ ವಿದ್ಯುತ್ / ಗಾಳಿ / ಸೌರಶಕ್ತಿ / ಬಯೋಗ್ಯಾಸ್ ಘಟಕಗಳನ್ನು ಸಹಕಾರಿ ಸಂಘಗಳು ಸ್ಥಾಪಿಸಿ ನಿರ್ವಹಿಸಬಹುದು.
- ವಿದ್ಯುತ್ ಬಳಕೆಯನ್ನು ಮಿತವ್ಯಯಗೊಳಿಸಬೇಕು.
- ಬೃಹತ್ ಜಲವಿದ್ಯುತ್ ಕೇಂದ್ರಗಳ ಸ್ಥಾಪನೆಗಿರುವ ಅಡಚಣೆಗಳನ್ನು ನಿವಾರಿಸಬೇಕು.

ಒಟ್ಟಿನಲ್ಲಿ ಕ.ವಿ.ನಿ.ನಿ.ವು ನಿರ್ಮಾಣ ಹಂತದಲ್ಲಿರುವ ಹಾಗೂ ಈಗಾಗಲೇ ಯೋಜಿಸಿರುವ ಈ ಕೆಳಗಿನ ಯೋಜನೆಗಳನ್ನು ಕೈಗೆತ್ತಿಕೊಂಡು, ಎಂದಿನಂತೆ ಮುಂದೆಯೂ ರಾಜ್ಯದ ಬೇಡಿಕೆಯ ಸಿಂಹಪಾಲನ್ನು ಒದಗಿಸುವ ಕಾರ್ಯದಲ್ಲಿ ಯಶಸ್ವಿಯಾಗಿ ಮುಂದುವರೆಯಲಿದೆ.

- ರಾಯಚೂರು ಎಂಟನೇ ಘಟಕ (೨೧೦ ಮೆ. ವ್ಯಾ.)
- ಆಲಮಟ್ಟಿ ಜಲವಿದ್ಯುತ್ ಯೋಜನೆ (೨೯೦ ಮೆ. ವ್ಯಾ.)
- ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರ (ಮೊದಲನೇ ಹಂತ ೫೦೦ ಮೆ.ವ್ಯಾ.)
- ಬಿಡದಿ ನೈಸರ್ಗಿಕ ಅನಿಲ ಸ್ಥಾವರ (೭೦೦ ಮೆ. ವ್ಯಾ.)
- ಮಹದಾಯಿ ಜಲವಿದ್ಯುತ್ ಯೋಜನೆ (೩೨೦ ಮೆ. ವ್ಯಾ.)

**ಮುಂಬರುವ ವರ್ಷಗಳಲ್ಲಿ ಯೋಜಿಸಿರುವ ಹೊಸ ಯೋಜನೆಗಳು**

- ವಾರಾಹಿ ಎರಡನೇ ಹಂತ (೨೩೦ ಮೆ. ವ್ಯಾ.)
- ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರ (ಎರಡನೇ ಹಂತ ೫೦೦ ಮೆ. ವ್ಯಾ.)

**ಮುಂಬರುವ ವರ್ಷಗಳಲ್ಲಿ ಕ.ವಿ.ನಿ.ನಿ.ಯ ಉತ್ಪಾದನೆ ಈ ಕೆಳಗಿನಂತೆ ಹೆಚ್ಚಳವಾಗಲಿದೆ**

| | |
|---|---|
| ೨೦೦೨-೦೩ | ೨೧೦ ಮೆ. ವ್ಯಾ. (ರಾಯಚೂರಿನ ಎಂಟನೇ ಘಟಕ) |
| ೨೦೦೩-೦೪ | ೭೦ ಮೆ. ವ್ಯಾ. (ಆಲಮಟ್ಟಿಯ ೧ನೇ ಘಟಕ-೧೫ ಮೆ. ವ್ಯಾ. ಹಾಗೂ ೨ನೇ ಘಟಕ-೫೫ ಮೆ. ವ್ಯಾ.) |
| ೨೦೦೪-೦೫ | ೧೬೫ ಮೆ. ವ್ಯಾ. (ಆಲಮಟ್ಟಿಯ ೩, ೪, ೫ನೇ ಘಟಕ) |
| ೨೦೦೫-೦೬ | ೫೫೫ ಮೆ. ವ್ಯಾ. (ಆಲಮಟ್ಟಿಯ ೬ನೇ ಘಟಕ ಹಾಗೂ ಬಳ್ಳಾರಿಯ ೫೦೦ ಮೆ. ವ್ಯಾ. ಘಟಕ) |
| ೨೦೦೬-೧೨ | ೧೭೫೦ ಮೆ. ವ್ಯಾ. |
| **ಒಟ್ಟು** | **೨೭೫೦ ಮೆ. ವ್ಯಾ.** |

ಅಂದರೆ ೨೦೧೧-೧೨ರ ವೇಳೆಗೆ ನಿರೀಕ್ಷಿತ ಬೇಡಿಕೆಯ ಮಿಕ್ಕ ಭಾಗವಾದ ಸುಮಾರು ೨,೫೦೦ ಮೆ. ವ್ಯಾ.ಗಳಷ್ಟನ್ನು ಉತ್ಪಾದನೆ ಖಾಸಗೀ ಕ್ಷೇತ್ರದಿಂದ, ಅಸಂಪ್ರದಾಯಿಕ ಇಂಧನಗಳ ಬಳಕೆಯ ಮೂಲಕ, ಪ್ರಸರಣೆ ಮತ್ತು ವಿತರಣೆಯ ಸೋರಿಕೆಯ ನಷ್ಟವನ್ನು ಮಿತಿಗೊಳಿಸುವ ಸಮರ್ಥ ನಿರ್ವಹಣೆಯಿಂದ ಹಾಗೂ ಗ್ರಾಹಕರು ಸಾಧಿಸಬಹುದಾದ ಮಿತವ್ಯಯದಿಂದ ನೀಗಿಕೊಳ್ಳಬೇಕಾಗುತ್ತದೆ.

ಎಂ. ಸಿ. ರಂಗರಾಜನ್ / ಟಿ. ಎ. ರಂಗಮಣಿ
ಕಾರ್ಯನಿರ್ವಾಹಕ ನಿರ್ದೇಶಕರು / ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು
ಕ. ವಿ. ನಿ. ನಿ.

# ತೀರ್ಪು ನಿಮಗೆ ಬಿಟ್ಟಿದ್ದು

**ವಸುಮತಿ ಉಡುಪ**

"ಹೌದು ಸೀತಮ್ಮಾ, ಸುಳ್ಳೆಂತಕ್ಕೆ ಹೇಳ್ಲಿ? ನೀವು ಕೇಳಿದ ವರ್ತಮಾನ ನಿಜಾನೇ. ಆಷಾಢಾನೂ ಅಲ್ಲ, ಸುಡುಗಾಡೂ ಅಲ್ಲ, ಆಷಾಢ ಬರೋಕೆ ಮುಂಚೇನೇ ಸುಪನಾತಿ ತೌರಿಗೆ ಹೋಗಿ ಹೊಕ್ಕಂಡಿದಾಳೆ. ಈ ಆಟ ಎಲ್ಲಾ ಎಷ್ಟ್ ದಿನ ನಡಿತ್ತೆ ಅಂತ ನಾನೂ ಇದೇ ಕಣ್ಣಲ್ಲಿ ನೋಡ್ತೀನಿ, ದೇವ್ರು ಆಯುಷ್ಯ ಕೊಟ್ಟದ್ರೆ. ಅಲ್ಲೇನುಂಟು ಅಮಟೇಕಾಯಿ ಗೊರಟು? ಒಪ್ಪೊತ್ತು ಉಂಡ್ರೆ ಇನ್ನೊಪ್ಪತ್ತು ಉಪಾಸ. ಹೆಳೆಗೆ ಅವಳಪ್ಪಂಗೆ ದೇವಸ್ಥಾನ್ದಲ್ಲಿ ಒಂದು ಪೂಜಾರ್ಕೆ ಕಸುಬೂಂತ ಉಂಟು. ಅಮಾಸೆ, ಹುಣ್ಣಿಮೆಗೆ ಸೈತಾ ಜನ ಅತ್ಲಾಬದಿ ಹಣಿಕಿ ನೋಡಲ್ಲ ಅಂತೀನಿ. ಹೆಂಗೋ ಗುಜರಾಣೆ ನಡಿತ್ತೆ. ಅವ್ನು ಬಗಲಿಗೆ ಜೋಳಿಗೆ ತಗುಲು ಹಾಕ್ಕಂಡು ಅಡಿಗೆ ಸಂಭಾವನೇಂತ ತಿರಿಯೋಕೆ ಹೋಗೋದು ನಮ್ಗೇನು ಗೊತ್ತಿರ್ಲಿಲ್ಲ ಅಂತೀರಾ? ಬಡ ಬ್ರಾಹ್ಮಣ, ಮನೇಲಿ ಮೂರು ಮೂರು ಹೆಣ್ಣುಕುರುದೇರು, ಪುಣ್ಯಕಾರ್ಯ ಅಂತ ನಾವು ಮನೆ ತುಂಬಿಸ್ಗಂಡಿದ್ದು. ಕಾಲ ಏನೇನೂ ಸುಕ ಇಲ್ಲ ಬಿಡಿ. ಅನ್ನ ಉಂಡ ತಟ್ಟೇಗೇ ಉಚ್ಚೆ ಹುಯ್ಯೋ ಜನ. 'ಮಿಣ್ಣಗಿದ್ದೋರ ಬಣ್ಣ ಬೇರೆ' ಅಂತ ಹಿರೀಕ್ರು ಸುಮ್ಸುಮ್ನೆ ಗಾದೆ ಮಾಡಿಟ್ಟಿದಾರಾ? ಹುಡುಗಿ ತೆಳ್ಳಗೆ, ಬೆಳ್ಳಗೆ, ಕಣ್ಣಗೆ ಲಾಯ್ಖಿದ್ಲು. ಹೆಣ್ಣು ನೋಡೋ ಶಾಸ್ತ್ರಕ್ಕೇಂತ ಹೋಗಿದ್ವಲ್ಲ, ಮಂಡಿ ಸಂದಿ ಮಕ ಹಾಕ್ಕಂಡು ಹ್ಯಾಂಗೆ ಚೂಪಗೆ ಕೂತಿದ್ಲು ಅಂತೀರಿ? ಆ ಮಕಾನೂ ಉದ್ದುದ್ದ, ಚೂಪುಚೂಪು. ಅವಳು ಕೂತ ಥರಾನೂ ಹಂಗೇ, ಚೂಪು. ಗೊತ್ತಿಲ್ದಿದ್ದೋರು ನೋಡಿದ್ರೆ 'ಬರೀ ಪಾಪುದ್ದು, ಇಷ್ಟೊಳ್ಳೇ ಹುಡುಗಿ ಮೂರುಲೋಕ ಹುಡ್ಕಿದ್ರೂ ಸೈತಾ ಸಿಕ್ಕಲ್ಲ.' ಅಂದ್ಕಂಬೇಕು. ಆ ಅಪ್ಪ ಅನ್ನಿಸ್ಕೊಂಡೋನೂ ಹಂಗಿದ್ದೇ ನಾಟಕದೋನು. ನಮ್ಮಂತೋರು ಅವನ ಮನೆ ಹೊಕ್ಕಿದ್ದೇ ಪರಮಭಾಗ್ಯ ಅನ್ನೋ ಥರ ಇದ್ದ. ನಾವೂ ಬೆಪ್ಪು ಜನ. ಹಳ್ಳಕ್ಕೆ ಬಿದ್ದೇ ಬಿಟ್ವಿ ನೋಡಿ. ಮೂರು ಕಾಸು ಖರ್ಚು ಮಾಡೋ ಯೋಗ್ತಿ ಆ ಅಪ್ಪಂಗಿಲ್ಲ ಅಂತ ನಮ್ಮನೆ ಎದ್ರೇ ಚಪ್ಪರ ಹಾಕಿ ಧಾರೆ ಎರೆಸ್ಕಂಡ್ವಲ್ಲ, ನಮ್ಮ ಅತಿರೇಕಕ್ಕೆ ಸಮಾ ಬರೆ ಬಿತ್ತು. ಮದ್ವೇಲಿ ಸೈತಾ ಹಸೆಮಣೆ ಮೇಲೆ ಮಕ ಅಡಿ ಹಾಕ್ಕಂಡು ಕೂತಿದ್ದು ನೀವೇ ನೋಡಿದೀರಲ್ಲ ಸೀತಮ್ಮ? 'ಮಗುವೇ, ಚೂರು ತಲೆ ಎತ್ತಿ ನೆಟ್ಟಗೆ ಕೂತ್ಗಳೇ, ಇಲ್ದಿದ್ರೆ ಕುತ್ಗೆ ನೋವು ಬರುತ್ತೆ' ಅಂತ ಅವತ್ತು ನೀವೇ ಅಲ್ವಾ ತಮಾಷ್ಗೆ ಮಾಡಿದ್ದು? ಸತ್ಯ ಹೇಳಿದ್ರೂ ನಂಬ್ತೀರಿ, ಸುಳ್ಳು ಹೇಳಿದ್ರೂ ನಂಬ್ತೀರಿ, ಹಿರೀ ಸೊಸೆ, ಮಾಲಕ್ಷ್ಮಿ ಹಂಗೆ ಮನೆ ತುಂಬ್ತಿದಾಳೆ ಅಂತ ನಮ್ಮಪ್ಪನ ಮನೇಲಿ ನಂಗೆ ಹಾಕಿದ್ದ ಶರಟಡ್ಡಿಗೆ ಕಳಚಿ ಅದರ ಕುತ್ಗೆಗೆ ಹಾಕಿ ಚಂದ ನೋಡಿದ್ನಲ್ರೀ, ಚೂರಾರೂ ದಯಾ-ದಾಕ್ಷಿಣ್ಯ ಬ್ಯಾಡ್ವಾ? ನಾಕು ದಿನ ವೈನಾಗೇ ನಗ್‌ನಗ್ತಾ ಇದ್ಲು. 'ಅತ್ತೇ.. ಅತ್ತೇ..'ಂತ ಬೆಕ್ಕಿನ ಮರಿ ಥರ ಕೈಕಾಲಿಗೆ ಅಡ್ಡಡ್ಡ ಬರ್ತಾ ಹಿಂದೆ ಮುಂದೆ ಸುತ್ತು ಹಾಕೋಳು. ಹುಟ್ಟಿದ ಮನೇಲಿ ಅವಳನ್ನ ಪಲ್ಲಕ್ಕಿ ಮೇಲೆ ಕೂರ್ಸಿ ಮೆರೆಸ್ತಿರ್ಲಿಲ್ವಲ್ಲಾ, ಕತ್ತೆ ಕೆಲಸ ಗೇದು ಅಭ್ಯಾಸ ಇದ್ದ ಹುಡುಗಿ, ನಂಗೂ ದಿನ ಹೋದ್ಹಂಗೆ ಪ್ರಾಯ ಬರುತ್ತಾ, ಕೈಲೇನೂ ಕೂಡ್ತಿರ್ಲಿಲ್ಲಾಂತ ಅಡಿಗೆಮನೆ ಕೆಲ್ಸಾನ ಅವಳಿಗೇ ಬಿಟ್ಬಿಟ್ಟೆ. ಎಷ್ಟು ಸಂತೋಷ ಪಟ್ಗಂತು ಅಂತೀರಿ. ಇಷ್ಟೆಲ್ಲಾ ಸಾಮಾನು, ಸರಂಜಾಮು ಜಲ್ಮದಲ್ಲಿ ಕಂಡಿದ್ಲಲ್ಲ? ಕೈಬಿಚ್ಚಿ ಬೇಕಾದ್ದು ಸುರಿದು ಅಡಿಗೆ ಮಾಡಿದ್ರೆ ರುಚಿಯಾಗ್ದೆ ಸಾಯುತ್ತಾ? ಎಲ್ಲಾ ಹೊಗಳಿ ಹೊಗಳಿ ಅವಳನ್ನು ಅಟ್ಟಕ್ಕೇರಿಸ್ದೆ. ನೀವು ನಂಬಲ್ಲ ಸೀತಮ್ಮಾ, ಉಣ್ಣಕ್ಕೆ ಕೂತ್ಗಂತು ಅಂದ್ರೆ ಎರಡಾಳು ಅನ್ನ ಸಲೀಸಾಗಿ ಇಳಿಸ್ತಿತ್ತು. ಆ ನಮೂನಿ ಉಂಡು ಅದ್ಹ್ಯಾಗೆ ಅರಗಿಸ್ಗಂತಿತ್ತೋ ಪರಮಾತ್ಮ ಬಲ್ಲ. 'ದರಿದ್ರಕ್ಕೆ ಹೊಟ್ಟೆ ದೊಡ್ಡು' ಅಂತ ಹೇಳೋಕೆ ಸಮನಾಗಿ ಅದು ಮೂಗಿನವರೆಗೆ ಉಂಡಿದ್ದೇ ಉಂಡಿದ್ದು. 'ನೀವು ಮಲ್ಕಳಿ ಅತ್ತೇ, ನಾನು ಬಡಿಸ್ಗಂತೀನಿ' ಅಂತ ಎಡಗೈ ಬುಡದಲ್ಲಿ ಎಲ್ಲಾ ಇಟ್ಗಂಡು ನನ್ನೇ ಹೊರಗೆ ದೂಡ್ತಿತ್ತು. ಉಂಡ್ಕಳ್ಳಿ ಬಿಡಿ, ಅದಕ್ಕೆಲ್ಲಾ ಪುಕಾರು ಮಾಡೋಷ್ಟು ಬಡತನ ದೇವ್ರು ನಮ್ಗೇನು ಕೊಟ್ಟಿಲ್ವಲ್ಲ. ಹಂಗಿದ್ದ ನೂರು ಜನಕ್ಕೆ ದಿನಾ ಪುಗಸಟ್ಟೆ ಊಟ ಹಾಕೋ ಯೋಗ್ತಿ ನಮ್ಗುಂಟು. ಸುಮ್ನೆ ಮಾತಿಗೆ ಹೇಳ್ದೆ ಅಷ್ಟೇಯಾ. ತಿಂಗಳು ಕಳೆಯೋ ಹೊತ್ಗೆ ಅದರ ಸ್ವರೂಪಾನೇ ಬದಲಾಗಿ ಹೋತು. ಬುರುಡು ಬುರುಡಾಗಿ ರಸಬುರುಡೆ ಹಂಗೆ ಮೈ ಬಂತು. ಡೊಳ್ಳು ಬಂತು.

'ಅತ್ತೆಮ್ಮಾ ಹಿಂಗೇ ಊದ್ತಿದ್ರೆ ಮನೆ ಬಾಗ್ಲೆಲ್ಲಾ ಕಿತ್ತು ಹೊಸ್ತಾಗಿ ಮಾಡಿಸ್ಬೇಕು' ಅಂತ ಹುಡುಗ್ರು ತಮಾಷೆ ಮಾಡ್ತಿದ್ರು. ನಾನೇ ಬೈತಿದ್ದೆ. ಲೆಕ್ಕ ಮಾಡಿದ ಹಂಗೆ ಎರಡು ತಿಂಗಳ ಮೇಲೆ ನಾಲ್ಕು ದಿನ ಪೂರೈಸಿತ್ತು ನೋಡಿ. ಗಂಟುಮೂಟೆ ಕಟ್ಗಂಡು ಹೊರಟಿದ್ದೇ. ಮದ್ವೇಲಿ ಹಾಕಿದ ಚಿನ್ನ ಬಣ್ಣ ಚೂರು ಬಿಡ್ದೆ ಎಲ್ಲಾ ತೆಗೆದು ಮಕದ ಮೇಲೆ ಬಿಸಾಕಿದ ಹಾಗೆ ನನ್ನೆದ್ರು ಇಡ್ಬೇಕಾರೆ ದುರಂಕಾರ ಎಷ್ಟೊಂಟುಂತ ನೀವೇ ಅಂದಾಜು ಮಾಡ್ಕಳಿ. ಇಲ್ಲಿ ಅದಕ್ಕೆ ಆರೆಯಾಗಿದ್ದೆಂತದು? ಅದ್ರದ್ದೇ ಕೈ, ಅದ್ರದ್ದೇ ಬಾಯಿ, ಯಜಮಾನ್ಕೆ ಪೂರ್ತಿ ಅದಕ್ಕೇ ಬಿಟ್ಬಿಟ್ಟಿದ್ದೆ. ಹೆರೆಹೆರೆ ತುಪ್ಪ ತೋಡ್ಕಂಡು ತಿಂಡಿ ಕತ್ತರಿಸ್ತಿತ್ತಲ್ಲಾ. ಬಾಯಲ್ಲಿ ಹೋಗ್ಲಿ, ಮನಸ್ಸೊಳಗಾದ್ರೂ, 'ಇದ್ಕೇನು ರಾವು ಹಿಡ್ದಿದ್ಯಾ?' ಅಂತ ನಾನು ಅಂದ್ಕಂಡಿದ್ದುಂಟಾ? ಈ ಕಾಲ್ದಲ್ಲಿ ಒಳ್ಳ್ಯೋರಾಗಿರ್ಬಾರ್ದು ಸೀತಮ್ಮಾ, ಯಾರು ಬೇಕಾರೂ ಹುರಿದು ಮುಕ್ಕಿಡ್ತಾರೆ. 'ನೀನು ಅಂದ್ರೆ ನಿಮ್ಮಪ್ಪ' ಅಂತ ತಿರುಗಿ ನಿಲ್ಲೋರಿಗಷ್ಟೇ ಇದು ಕಾಲ. ನನ್ನ ಮಗನ್ನ ನೀವೇ ನೋಡಿದೀರಲ್ಲ, ಕೋಣೆ ಬಿಟ್ಟು ಒಂದಿನ ಇಚಿಗೆ ಬಂದು ಯಾರ್ಹತ್ರಾನಾರೂ ಮಕ ಕೊಟ್ಟು ಮಾತಾಡಿದ್ದುಂಟಾ? ಇನ್ನೊಬ್ರ ಮನೆ ಹೊಸಿಲು ದಾಟಿ ಒಳಗೆ ಕಾಲಿಟ್ಟಿದ್ದುಂಟಾ? ಅವನಷ್ಟಕ್ಕೆ ಅವ್ನು ಇರ್ತಿದ್ನಪ್ಪಾ. ಜನಕ್ಕೇನು, ಸಾವಿರ ಹೇಳ್ತಾರೆ. ಕಂಡೋರ ಮನೆ ಹುಳುಕು ಹುಡುಕೋದೂಂದ್ರೆ ಎಲ್ರಿಗೂ ಉಮೇದು. ನಾನೇನು ಇಲ್ಲ ಅನ್ನಲ್ಲ, ಹೌದಪ್ಪಾ, ಒಂದಷ್ಟ್ ದಿನ ಒಂದ್ ನಮೂನಿ ಆಗಿದ್ದ ಅನ್ನೋದು ಸತ್ಯ. ಏನೋ ಮಂಕು. ಯಾರ್ಹತ್ರೂ ಮಾತಿಲ್ಲ, ಕತೆಯಿಲ್ಲ. ಅವನಷ್ಟಕ್ಕೆ ಪಿಟಪಿಟ ಮಾತು. ಬೆರಳು ಮಡಚಿ ಲೆಕ್ಕ ಹಾಕೋದು. ಜನಕ್ಕೆ ಸುದ್ದಿ ಹಬ್ಸೋಕೆ ಇಷ್ಟು ಸಿಕ್ಕಿದ್ರೆ ಸಾಕಲ್ಲ. ನಿಮ್ಗೂ ವರ್ತಮಾನ ಬಂದಿರುತ್ತೆ, ಬಿಡಿ. ಹೋಮ, ಹವನ ಎಲ್ಲಾ ಮುಗೀತು. ಅವನ ಗ್ರಾಚಾರ, ಸಾಡೇಸಾತಿ. ಗ್ರಾಚಾರ ಯಾರಿಗೆ ಬಿಟ್ಟಿದೆ ಹೇಳಿ? ಇವತ್ತು ನಮ್ಗೆ, ನಾಳೆ ಆಡ್ಕಂಡು ಹಲ್ಲು ಚಿಲಿದ್ರಲ್ಲಾ, ಅವ್ರಿಗೆ. 'ಡಾಕ್ಟ್ರ ಹತ್ರ ತೋರ್ಸಿ' ಅಂತ ನಿಮ್ಮಂತಾ ಅಪ್ಪಂತೋರು ಹೇಳಿದ್ದು ಹೌದು. ನಾವು ಕರ್ಕೊಂಡ್ಹೋಗಿದ್ದೂ ಹೌದು. ಈಗ ನಮ್ಹುಡುಗ ಸಾವಿರ ಪಾಲು ವಾಸಿ. ಮೊದಲಿಂದ ಅವನ ಸ್ವಭಾವಾನೇ ಗಂಭೀರ. ಯಾರ್ಹತ್ರಾರೂ ಗಟ್ಟಿಗಟ್ಟಿ ಮಾತಾಡೋದು, ಸುಕಾಸುಮ್ನೆ ನಗೋದು, ಹಿಂಗಿದ್ದೆಲ್ಲಾ ಚೆಲ್ಲುತನ ಗೊತ್ತೇ ಇಲ್ಲ. ಈಗಲೂ ಹಂಗೇ. ಅವನಷ್ಟಕ್ಕೆ ಅವನು ಇರ್ತಾನಪ್ಪಾ. ಪಿತ್ಥದ ಶರೀರದೋರಿಗೆ ನಿದ್ದೆ ಜಾಸ್ತಿ. ಇವನ ಪಾಡಿಗೆ ಇವನು ಮಲಗಿದ್ರೆ ಯಾರಪ್ಪನ ಮನೆ



ಗಂಟು ಮುಳುಗುತ್ತೆ? ಇವ್ನೇನು ದುಡಿದು ಸಂಪಾದ್ನೆ ಮಾಡಿ ಸಂಸಾರ ಹೊರೀಬೇಕಾಗಿದ್ಯಾ ? ಅನ್ನೋರು ಹೆಂಗಿದ್ರೂ ಅಂದೇ ಅಂತಾರೆ. ಅನ್ನೋರ ಬಾಯಿಗೆ ಕುಕ್ಕೆ ಕಟ್ಟೋಕಾಗುತ್ತಾ? ಅಸಲಿಗೆ ಆ ಹುಡುಗೀನೇ ಗಂಡನ ಮೇಲೆ ಒಂದಿನ ಚಾಡಿ ಹೇಳಿದ್ದಿಲ್ಲ, 'ಯಾಕೆ ಹಿಂಗೆ ?' ಅಂತ ಕೇಳಿದ್ದಿಲ್ಲ ಅಷ್ಟೆಲ್ಲಾ ಜಾಣತನ ಅದಕ್ಕೆ ಇರ್ಲೇ ಇಲ್ಲ. ಯಾರೋ ಚುಚ್ಚಿಕೊಟ್ಟಿದಾರೆ ಕಣ್ರೇ, ನನ್ನ ಕಣ್ಣು ಮರೇಲಿ ಸಮಾ ಕಿವಿ ತಿರುಪಿದಾರೆ. ಒಂದಿನ ನನ್ನೆದ್ರೇ ವಿಠೋಬ ದೇವರ ಹಂಗೆ ಸೊಂಟದ ಮೇಲೆ ಕೈ ಇಟ್ಗಂಡು ಕೇಳುತ್ತೆ,

'ಹೌದಾ, ಇವ್ರಿಗೆ ಬುದ್ದಿ ಕೆಟ್ಟಿತ್ತಂತೆ ? ಔಸ್ತಿ ಕೊಡಿಸಿದ್ರಂತೆ ?' ಅಂತ.

ಸತ್ಯ ಹೇಳೋಕೆ ನಂಗೇನು ಹೆದ್ರಿಕೇನಾ ? ನಾ ಏನು ಇವ್ರ ಮನೆ ಅನ್ನಕ್ಕೆ ಬಿದ್ದಿದೀನಾ ?

'ದೇಹಕ್ಕೆ ಬರೋ ಹಂಗೆ ಮನಸ್ಸಿಗೂ ಖಾಯ್ಲೆ ಬರುತ್ತಂತೆ ಕಣೇ. ಯಾಕೋ ಮಂಕುಮಂಕಾಗಿದ್ದ. ಈಗ ಸರಿಯಾಗಿದಾನಲ್ಲಾ. ಮಾತ್ರೆ ಮಾತ್ರಾ ಒಂದಿನಾನೂ ತಪ್ಪಿಸ್ಬಾರ್ದಂತೆ ಕಣೇ, ಇನ್ನು ಅವನ್ನ ಸರ್‍ಯಾಗಿ ಜೋಪಾನ್ನ ಮಾಡ್ಕೊಳ್ಳೋದು ನಿನ್ ಜವಾಬ್ದಾರಿ' ಅಂದೆ. ಎಲ್ಲಾ ಹೇಳ್ಬಿಡ್ಬೇಕು ಅಂತ ನಂಗೂ ಯಾವತ್ತಿಂದ್ಲೋ ನಾಲಿಗೆ ತುರಿಸ್ತಿತ್ತು ಸೀತಮ್ಮಾ, ಅವತ್ತು ಅವಕಾಶ ಸಿಕ್ತು ಅಂತ ಒಳ್ಳೆ ಏಳ ಥರ ಬಡಬಡ ಎಲ್ಲಾ ಹೇಳ್ಬಿಟ್ಟೆ. ಅದರ ಮಕ ಹೆಂಗಾಗ್ಹೋಯ್ತು ಅಂತೀರಿ? 'ಮದ್ವೆಗೆ ಮೊದ್ಲೇ ಯಾಕೆ ಇದೆಲ್ಲಾ ಹೇಳ್ಲಿಲ್ಲಾ?' ಅಂತು. ಹೇಳೋಕೇನುಂಟು ಅಮಟೇಕಾಯಿ? ಈಗ ತಲೆ ಹೋಗೋ ಅಂತಾದ್ದು ಏನಾಗಿದೆ? ಎಷ್ಟು ಜನ ಹುಡುಗ್ರು ವಯಸ್ಸಿಂದ್ಲೇ ಮಾತ್ರೆ ನುಂಗ್ಕಂಡು ಬದುಕಲ್ಲ? ಅದಕ್ಕೆಲ್ಲಾ ಏನು ಮಾಡೋಕಾಗುತ್ತೆ? ಅವ್ರವ್ರು ಪಡ್ಕಂಡು ಹುಟ್ಟಿದ್ದಪ್ಪಾ. ಖಾಯಿಲೆ ಕಸಾಲೆ ಹೇಳಿಕೇಳಿ ಬರುತ್ತಾ? ಅದರ ಧೈರ್ಯಾನೇ ಧೈರ್ಯ. 'ಕಾಣ್ತಾಕಾಣ್ತಾ ಮೋಸ ಮಾಡಿದ್ರಲ್ಲ...' ಅಂತ ನಂಗೇ ಅನ್ನುತ್ತೆ. ಅದರ ಗಂಟ್ಲು ಅಷ್ಟು ದೊಡ್ಡಕ್ಕುಂಟು ಅಂತ ಅವತ್ತೇ ನಂಗೆ ಗೊತ್ತಾಗಿದ್ದು. ಮೋಸಾಂದ್ರೆ ಎಂತದು? ಹಿಂದೆ ಏನೇನಾಗಿತ್ತು ಅಂತ ಎಲ್ಲಾ ಇದರ ಹತ್ರ ಪುರಾಣ ಊದ್ಬೇಕಾಗಿತ್ತಾ? ಎಂತೆಂತಾ ಹಾದರಾನೇ ಮುಚ್ಚಿಟ್ಟು ಮದ್ವೆ ಮಾಡ್ತಾರಂತೆ, ನಾವು ಅಂತಾ ತಪ್ಪು ಏನು ಮಾಡಿದೀವಿಂತ? ಕಳೆದ ಜಲ್ಮದಲ್ಲಿ ಏನೋ ಪುಣ್ಯ ಮಾಡಿತ್ತು, ಇಲ್ದಿದ್ರೆ ಈ ಮನೆ ಹೊಸಿಲು ದಾಟೋ ಯೋಗ್ತಿ ಅದಕ್ಕಿತ್ತಾ? ಈ ಮಾತು ಬರೆದಿಟ್ಕಳಿ ಬೇಕಾರೆ, ನಾವು 'ಅಯ್ಯೋ ಪಾಪಾಂತ' ಕನಿಕರ ತೋರಿಸ್ದಿದ್ರೆ ಅದು ಅಪ್ಪನ ಮನೇಲೇ ಜಲ್ಮಿಡೀ ಕೊಳೀಬೇಕಾಗಿತ್ತು. ಅಷ್ಟೂ ಗೊತ್ತಾಗ್ಬಾರ್‍ದಾ ಅದಕ್ಕೆ? ಎರಡು ತಿಂಗ್ಳು ಬರೀ ಉಂಡ ಸೊಕ್ಕು ಅದನ್ನ ಥಕಥೈ ಕುಣಿಸಿದ್ದಲ್ವಾ? ಅಯ್ಯಬ್ಬಾ, ಅದರ ದೌಲತ್ತೇ? ಸೀದಾ ಕೋಣೆಗೆ ಹೋಯ್ತು, ತನ್ನ ಹಳೇ ಸೀರೆ ಉಟ್ಗಂತು. ನಗ ಬಿಚ್ಚಿ ಬಿಸಾಕ್ತು. 'ಹೊರಟೆ' ಅಂತ ಅಪ್ಪನ ಮನೆಗೆ ಹೊರಟೇಬಿಡ್ತು. ಅವತ್ತು ಬೆಳಗಿಂದ ಜಿರಜಿರ ಮಳೆ ಬೇರೇ ಬರ್ತಿತ್ತು ಕಣ್ರೇ, ತಲೇ ಮೇಲೆ ಒಂದು ಕೊಡೇನೂ ಹಿಡ್ಕಣ್ದೆ ಮೈಮೇಲೆ ಗಣ ಬಂದೋರ್‍ಥಂಗೆ ತೋದ್ಕಂಡೇ ಹೋಯ್ತು. ಕೈಯಲ್ಲಿ ಬಸ್ ಛಾರ್ಜಿಗಾರೂ ದುಡ್ಡಿತ್ತೋ, ಇಲ್ಲಾ ಕಾಲು ಗಟ್ಟಿ ಇತ್ತಲ್ಲಾ, ಸವಾರಿ ನಡ್ಕಂಡೇ ಹೋಯ್ತೋ? ಅದರ ಕಾಲೊಂದು ಕಟ್ಕಣ್ಲಿಲ್ಲ ಅನ್ನೋದು ಬಿಟ್ರೆ ನಾನೂ ಎಷ್ಟೆಷ್ಟು ಥರದಾಗೆ ತಿಳುವಳ್ಕೆ ಹೇಳ್ದೆ ಅಂತೀರಾ ?

'ಬ್ಯಾಡ ಕಣೇ, ಒಬ್ಬೊಬ್ಳೇ ಹೋಗ್ಬೇಡ, ನಿಮ್ಮಪ್ಪಂಗೆ ಹೇಳಿಕಳ್ಸಾಣ, ಬರ್‍ಲಿ ತಡಿ.....' ಅಂದೆ.

'ಅಲ್ವೇ, ಹುಡುಗನ ಕಡೇಲಿ ಏನು, ಎತ್ತ ಅಂತ ವಿಚಾರಿಸ್ಕಣೋದು ಹೆಣ್ಣು ಹೆತ್ತೋರ ಜವಾಬ್ದಾರಿ. ನಿಮ್ಮಪ್ಪಂಗೆ ಅವಸ್ರ ಆಗಿದ್ರೆ ಅದ್ರಲ್ಲಿ ನಮ್ದೇನು ತಪ್ಪು?'

'ಸಾವ್ರ ಸುಳ್ಳು ಹೇಳಿ ಒಂದು ಮದುವೆ ಮಾಡೂಂತ' ಗಾದೇನೇ ಉಂಟು. ನಿಮ್ಮಪ್ಪ ಕೇಳಿದ್ರೆ ನಾವು ಮೊದ್ಲೇ ಹೇಳ್ತಿದ್ವಿ. ನಮ್ದೇನೂ ತಪ್ಪಿಲ್ಲ' ಅಂದೆ.

'ನೋಡ್ಕಾ ಮತ್ತೆ, ನಿಮ್ಮಪ್ಪಂಗೆ ಇನ್ನೂ ಎರಡು ಹೆಣ್ಣದಾವೆ. ನೀ ಹೋಗಿ ತೌರುಮನೆ ಸೇರ್‍ಕಂಡ್ರೆ ನಾಳೆಂದಿನ ಅವು ಖರ್ಚಾಗೋದು ಸುಳ್ಳು. ಎಂತೋನಾದ್ರೂ ಗಂಡ ಗಂಡನೇ. ಹೆಣ್ಣು ಹೆಂಗ್ಸಿನ ಪಾಲಿಗೆ ಅವನೇ ದೇವ್ರು' ಅಂತ ಹೆದರಿಸ್ದೆ. 'ತಂಗಿದಿಕ್ಳ ಮದುವೇಗೆ ಬೇಕಾದ್ದು ಕೊಟ್ಟು ಸಹಾಯ ಮಾಡ್ತೀವಿ' ಅಂತ ಆಸೆ ತೋರಿಸ್ದೆ.

'ಇಷ್ಟ್ ದಿನ ಅದೇ ಗಂಡಂಜೊತೆ ಸಂಸಾರ ಮಾಡ್ಲಿಲ್ಲವೇ ? ಏನಾಯ್ತು ಗುನುಗು ? ಹೊಡೆದ್ನಾ, ಬಡಿದ್ನಾ, ಜೀಂವ ತೆಗೆದ್ನಾ? ಮುಂದೂ ಹಂಗೇ ಇರೋಕೆ ನಿಂಗೇನು ಧಾಡಿ ?' ಅಂತ್ಲೂ ಕೇಳ್ದೆ. ಒಂದಾರೂ ಕಿಮಿಗೆ ಹಾಕ್ಕಂತಾ ? ನೋಡೋಕೆ ಮಿಣ್ಣಗಿತ್ತು, ಅಷ್ಟೇ. ಭಾರೀ ಜೋರಿಂದು. ತಲೆ ಪ್ರತಿಷ್ಠೇದು. ಮಹಾದಿಂಡೆ. ಎಂಟು ದಿನ ಕಳೀಲಿ, ನೆತ್ತಿಗೆ ಏರಿದ್ದು ಇಳೀಲಿ ಅಂತ ವಾರ ಬಿಟ್ಗಂಡು ನಾವೇ ಗಂಡ, ಹೆಂಡ್ರು ಮನೆ ಬಾಗ್ಲಿಗೆ ಹೋದ್ವು. ಬ್ರಾಹ್ಮಣ ಮನೇಲೇ ಥೊಕ್ಕಂಡಿತ್ತು. ಮಗಳಿಗೆ ಬುದ್ಧಿ ಹೇಳಿ ಗಂಡನ ಮನೆಗೆ ಸಾಗಹಾಕ್ಬೇಕು ಅನ್ನೋ ಜ್ಞಾನ ಬೇಡ್ವಾ ಅವ್ರಿಗೆ? ಅವಳು ಹೇಳಿದ್ದಕ್ಕೆ ತಾಳ ಹಾಕ್ತಾನೆ. 'ನಂಗೆ ಎಂತಂದ್ರೆಂತದೂ ಗೊತ್ತಾಗಲಪ್ಪ. ಬಡೋರು ಅಂದ್ರೆ ಎಲ್ರಿಗೂ ಸಸಾರ. ಅವರ ಹೆಣ್ಣುಮಕ್ಳ ಜೊತೆ ಎಲ್ರೂ ಆಟ ಆಡೋರೆ. ನಂದೇನಿಲ್ಲ, ಅವ್ಳು ಬಂದ್ರೆ ಮಾರಾಯ್ರಾಗಿ ಕರ್‍ಕೊಂಡ್ಹೋಗಿ...' ಅಂತಾನೆ. ಮಾತು ನೋಡಿ ಹೆಂಗಿದೆ? ಬಟ್ಟೇಲಿ ಮೆಟ್ಟು ಸುತ್ತಿ ಹೊಡೆದ ಹಂಗೆ. ನಮ್ಮ ಸ್ಥಿತಿ ಎಲ್ಲಿಗೆ ಮುಟ್ತು ನೋಡಿ. ಊರಿಗೇ ದೊಡ್ಡನುಪ್ರು. ಅಲ್ಲಿ ಯಾರೋ ಬಿಕನಾಸಿ ಹತ್ರ ಗೋಗರೀಬೇಕಾ ? ಹೊರಗೆ ಮಕ ಸೈತಾ ಹಾಕ್ದೆ ಒಳಗಿಂದಾನ್ನೆ ಹೇಳುತ್ತೆ ಆ ಅರೆಪಿರ್ಕಿ, 'ಹಂಗಿದ್ದ ಕಾಲ ಬಂದ್ರೆ ನಾಕು ಮನೆ ತಿರ್‍ಕಂಡು ತಿಂತೀನಿ. ಆದ್ರೆ ನಿಮ್ಮಂತಾ ಮೋಸಗಾರ್‍ರ ಮನೆ ಮೆಟ್ಲು ಹತ್ತಲ್ಲ' ಅಂತ. ನಾನೇನೋ ಸಮಾಧಾನಿ. ತಡ್ಕಂಡೆ ಅನ್ನಿ. ಯಜಮಾನ್ರು ಗೊತ್ತಲ್ಲಾ, ವಿಶ್ವಾಮಿತ್ರ ಗೋತ್ರದೋರು. 'ನೀನಾಗಿ ಬಂದು ಕೈಕಾಲು ಹಿಡ್ಕಂಡ್ರೂ ಮನೆ ಒಳಗೆ ಸೇರ್‍ಸಲ್ಲ. ನನ್ನ ಮಗಂಗೆ ಇನ್ನೊಂದು ಮದ್ವೆ ಮಾಡ್ತೀನಿ. ಲೋಕದಲ್ಲಿ ಹೆಣ್ಣು ಮೂಳೀರಿಗೆ ಬರಗಾಲ ಬಂದಿಲ್ಲ' ಅಂತ ಧಡ್ಡಧಡ್ಡ ಹೊರಟೇಬಿಟ್ರು. ಅವ್ರಿಗೆ ಗಿಲೀಟು ಮಾಡಿ ಜೊತೇಲಿ ಕರ್‍ಕಂಡ್ಹೋಗಿದ್ದಕ್ಕೆ ದಾರೀಲಿ ನಂಗೂ ಸಮಾ ಪೂಜೆ ಆಯ್ತು. ಅನ್ಯಾಯವಾಗಿ ಒಂದು ಹುಡುಗಿ ಬಾಳು ಹಾಳಾಗುತ್ತಲ್ಲಾಂತ ನಂಗೇ ಅಯ್ಯೋ ಅನ್ನಿಸ್ದೆ ವಿನಾ ಅವಕ್ಕೆ ಕಟ್ಟಿರುವೆ ಕಚ್ಚಿದಷ್ಟೂ ನೋವಾದ್ಹಂಗೆ ಕಾಣ್ಲಿಲ್ಲ. ಹೊಟ್ಟೆಗಿಲ್ದಿದ್ರೂ ಹುಣಿಸೇಹಣ್ಣಿಗೆ ಬರ ಇಲ್ಲ. ಅನುಭೋಗಿಸ್ಲಿ, ನಾನೆಂತ ಮಾಡೂಕಾಗುತ್ತೆ? ಆದ್ರೂ ಸೀತಮ್ಮ, ಚೋಟುದ್ದದ ಹುಡುಗಿ 'ಮೋಸಗಾರ್‍ರು' ಅಂತ ಗೂಬೆ ಕೂರ್‍ಸಿ ಹೋದ್ಲಲ್ಲಾ, ಕಾಲ ಎಲ್ಲಿಗೆ ಬಂತು ಅಂತೀನಿ. ನಾವೇನು ಯಾರೂ ಮಾಡದ ಅನ್ಯಾಯ ಮಾಡಿದ್ವಾ ? ಮದುವೆ ಆದ್ಮೇಲೆ ಏನೋ ಆಗಿತ್ತಪ್ಪಾ, ಇವಳೇನು ಅಗ್ಲೂ ಬಿಟ್ಟು ಓಡಿಹೋಗ್ತಿದ್ಲಾ? ಹೋದ್ರೂ ಹೋಗ್ತಿದ್ಲೇನೋ ಸುಪನಾತಿ. ಅದು ಬಿಡಿ, ಆ ಬ್ರಾಮ್ಮಣ ಮೊದ್ಲೇನು ಬಾಯಿಗೆ ಕಡುಬು ತುರುಕ್ಕೊಂಡು ಕೂತಿದ್ನಂತಾ ? 'ದೊಡ್ಡೋರ ಸಂಬಂಧ' ಅಂದ್ಕೂಡ್ಲೆ ಹಿಂದೆ ಮುಂದೆ ಯೋಚಿಸ್ದೆ ಕುಣ್ಕಂಡು ಯಾಕೆ ಒಪ್ಗಂಡ್ನಂತೆ ? ವಿಚಾರಿಸ್ಬೇಕಿತ್ತು ನಾಕ್ ಜನಾನ, ನಾವೇನು ತಡಿಯೋಕೆ ಬರ್ತಿತ್ತಾ? ಅವನ ಮಗಳು, ಅವನ ಮರ್ಜಿ. ಭೀಷ್ಮಾಚಾರ್‍ರ ಹಂಗೆ ಹೊತ್ಗಂಬಂದು ಮದ್ವೆ ಮಾಡೋಕಾಗಿತ್ತಾ? ತಪ್ಪು ತಮ್ಮಲ್ಲಿಟ್ಗಂಡು ನಮ್ಗೇ ಅಂತಾರೆ. ಅನ್ನಿ ಬಿಡಿ. ಇವತ್ತಲ್ಲಾ ನಾಳೆ ಬುದ್ಧಿ ಬರ್‍ದೆ ಇರುತ್ತಾ? ಅಷ್ಟರಲ್ಲಿ ತಡ ಆಗಿದ್ರೆ ಅವಳ ಹಣೆಬರ. ನಾವೇನು ಬೇಕ್‌ಬೇಕೂಂತ ಅನ್ಯಾಯ ಮಾಡೋಕೆ ಹೋದೋರಲ್ಲಾನ್ನೋದು ನಮ್ಮ ಅಂತರಾತ್ಮಕ್ಕೆ ಗೊತ್ತು. ಮೇಲಿರೋ ಪರಮಾತ್ಮಂಗೆ ಗೊತ್ತು. ದೇವ್ರಿದಾನೆ, ನ್ಯಾಯಾನ್ಯಾಯ ನೋಡ್ಕಂತಾನೆ ಬಿಡಿ....''

**ವಸುಮತಿ ಉಡುಪ**
'ಗೌರಿ', ೪ನೇ ಕ್ರಾಸ್, 'ಎ' ಬ್ಲಾಕ್, ಗಾಂಧೀನಗರ ಬಡಾವಣೆ, ಶಿವಮೊಗ್ಗ-೫೭೭ ೨೦೧

ಸುದ್ದಿಚಿತ್ರ

ಮಾನ್ಯ ಶ್ರೀ ಟಿ. ಆರ್. ರೇವಣ್ಣ ಅವರಿಗೆ ಈ ವರ್ಷ ಕರ್ನಾಟಕ ಸರಕಾರದ ರಾಜ್ಯೋತ್ಸವ ಪ್ರಶಸ್ತಿ ದೊರಕಿದೆ. ಶ್ರೀಯುತರು ತುಮಕೂರಿನವರು. ಸ್ವಾತಂತ್ರ್ಯ ಹೋರಾಟಗಾರರು, ಭಾರತ ಕಮ್ಯೂನಿಸ್ಟ್ ಪಕ್ಷದ ಹಿರಿಯ ಸದಸ್ಯರು. ತುಮಕೂರಿನಲ್ಲಿ ಜರುಗುವ ಅನೇಕ ಜನಪರ ಹಾಗೂ ಪ್ರಗತಿಪರ ಚಟುವಟಿಕೆಗಳಿಗೆ ಇವರ ಕೊಡುಗೆ ಮೆಚ್ಚುವಂಥಾದ್ದು. ಸ್ವಾತಂತ್ರ್ಯ ಹೋರಾಟದ ಆಶಯಗಳನ್ನು ಇಂದಿಗೂ ಜೀವಂತವಾಗಿ ಇರಿಸಿಕೊಂಡಿರುವ ಶ್ರೀ ರೇವಣ್ಣನವರಿಗೆ 'ಹೊಸತು'ವಿನ ಅಭಿನಂದನೆಗಳು.

ಜಗತ್ಪ್ರಸಿದ್ಧ ಜೀವವಿಜ್ಞಾನಿ ಸ್ಟೀಫನ್ ಜೆ. ಗೂಲ್ಡ್, ೨೦೦೨ರ ಮೇ ೨೦ರಂದು ಕ್ಯಾನ್ಸರ್ ಕಾಯಿಲೆಯಿಂದ ನಿಧನರಾದರು. ಆಗ ಅವರ ವಯಸ್ಸು ಕೇವಲ ೬೦ ವರ್ಷ. ಹಾರ್ವರ್ಡ್ ವಿಶ್ವವಿದ್ಯಾನಿಲಯದ ಪ್ರಾಣಿಶಾಸ್ತ್ರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದ ಇವರ ಹೆಸರನ್ನು ವಿಜ್ಞಾನ ಲೋಕದಲ್ಲಿ ಕೇಳಿಲ್ಲದವರು ವಿರಳ. ಇವರ ನಿಧನ ಪಾಶ್ಚಿಮಾತ್ಯ ದೇಶಗಳಲ್ಲಿ ಮಾತ್ರವಲ್ಲ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲೂ ಸುದ್ದಿ ಮಾಡಿತು. ೨೦ ವರ್ಷಗಳ ಹಿಂದೆ ಇವರಿಗೆ ''ಮಿಸೋಥೀಲಿಯೋಮಾ'' ಎಂಬ ಅಪರೂಪದ ಉದರ ಕ್ಯಾನ್ಸರ್ ಆಗಿತ್ತು. ಈ ಪ್ರತಿಭಾವಂತ ವಿಜ್ಞಾನಿ ಇಷ್ಟು ಅಲ್ಪಾವಧಿಯಲ್ಲಿ ಜಟಿಲ ವೈಜ್ಞಾನಿಕ ವಿಷಯಗಳ ಬಗ್ಗೆ ಉನ್ನತ ಮಟ್ಟದ ಸಂಶೋಧನೆ ನಡೆಸಿ ಗಮನಾರ್ಹ ಸಿದ್ಧಾಂತಗಳನ್ನು ಒಂದರ ಮೇಲೊಂದರಂತೆ ಮಂಡಿಸಿದ್ದರು.

ಡಾರ್ವಿನ್ ನಂತರ ವಿಜ್ಞಾನ ಪ್ರಪಂಚದಲ್ಲಿ ಅತಿ ಹೆಚ್ಚಿನ ಪ್ರಭಾವ ಬೀರಿದ, ವಿಕಾಸವಾದ ಪರಿಣಿತ ಜೀವವಿಜ್ಞಾನಿ ಗೂಲ್ಡ್. ಇವರು ಡಾರ್ವಿನ್ ಹಾಕಿದ ದಾರಿಯಲ್ಲಿಯೇ ನಡೆದ ಆಧುನಿಕ ನೈಸರ್ಗಿಕ ಇತಿಹಾಸಕಾರ. ನೈಸರ್ಗಿಕ ಇತಿಹಾಸವನ್ನು ಕುರಿತು ಹೇರಳವಾಗಿ ಉತ್ಸಾಹ ಭರಿತ, ಸ್ವಾರಸ್ಯಮಯ ಹಾಗೂ ಸರಳ ಲೇಖನಗಳನ್ನು ಬರೆದವರೆಂದು ಜನಸಾಮಾನ್ಯರ ಮನಸ್ಸಿನಲ್ಲಿ ಶಾಶ್ವತವಾಗಿ ಗೂಲ್ಡ್ ನೆಲೆಸಿದ್ದಾರೆ. ಈತ ''ನ್ಯಾಚುರಲ್ ಹಿಸ್ಟರಿ ಮ್ಯಾಗಝಿನ್''ನ ದಿಸ್ ವ್ಯೂ ಆಫ್ ಲೈಫ್ ವಿಭಾಗದಲ್ಲಿ ಟಿ. ಎಚ್. ಹಕ್ಸ್‌ಲೀಯ ವಾರಸುದಾರರಾಗಲು ಇವರೇ ಅರ್ಹರೆಂದು ಗುರುತಿಸಬಹುದು. ಜೀವವಿಜ್ಞಾನದಲ್ಲಿ ಯಾವುದೇ ವಿಚಾರ ಅರ್ಥಪೂರ್ಣವಾಗಬೇಕಾದರೆ ಅದನ್ನು ವಿಕಾಸದ ದೃಷ್ಟಿಯಲ್ಲಿಯೇ ನೋಡಬೇಕೆಂದು ರಷ್ಯನ್-ಅಮೆರಿಕನ್ ಜೀವವಿಜ್ಞಾನಿ ಥಿಯೋಡೋಸಿಯಸ್ ಡೋಬ್‌ಜಾನ್‌ಸ್ಕಿ ಹೇಳಿದ್ದನ್ನು ಸ್ಟೀಫನ್ ಗೂಲ್ಡ್ ಸಹ ಪ್ರಬಲವಾಗಿ ಬೆಂಬಲಿಸಿದ್ದರು. ಈ ಸಿದ್ಧಾಂತವನ್ನು ಜನಪ್ರಿಯಗೊಳಿಸಿ, ಜನರ ಕುತೂಹಲ ಕೆರಳಿಸಿದಂಥ ವಿಕಾಸದ ಸಮಸ್ಯೆಗಳನ್ನು ಕುರಿತ ಅಗ್ರಲೇಖನಗಳನ್ನು ಸ್ಟೀಫನ್ ಗೂಲ್ಡ್ ಬರೆದರು. ಇವರು ಡಾರ್ವಿನ್ನರ ಶಿಷ್ಯನಂತಿದ್ದರೂ, ಎಷ್ಟೋ ಬಾರಿ ಡಾರ್ವಿನ್ನರ ವಿಕಾಸವಾದದಲ್ಲಿರುವ ನ್ಯೂನತೆಗಳನ್ನು ಎತ್ತಿ ಹಿಡಿಯುವ ಹಾಗೂ ತಮ್ಮ ಅಭಿಪ್ರಾಯದ ಪರವಾಗಿ ವಾದಿಸುವಂಥ ಬುದ್ಧಿಶಕ್ತಿ ಮತ್ತು ಸ್ಥೈರ್ಯ ಗೂಲ್ಡ್‌ರಲ್ಲಿತ್ತು. ಚಾರ್ಲ್ಸ್ ಡಾರ್ವಿನ್ನರ ವಿಕಾಸವಾದವನ್ನು ಸಂಕ್ಷಿಪ್ತವಾಗಿ ತಿಳಿದುಕೊಂಡರೆ, ಗೂಲ್ಡ್‌ರ ಸಿದ್ಧಾಂತಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ವಿವಿಧ ಜಾತಿಯ ಪ್ರಾಣಿ ಜೀವಿಗಳೂ, ಸಸ್ಯಜೀವಿಗಳೂ ಭೂಮಿಯಲ್ಲಿ ವಿಭಿನ್ನ ಕಾಲಗಳಲ್ಲಿ ಬದುಕಿದ್ದುದು ಸರಿಯಷ್ಟೆ. ಪ್ರಕೃತಿಯ ವಿಕಾಸದಲ್ಲಿ ಹಲವು ಸರಳ ರೂಪದ ಜೀವಿಗಳು ಕ್ರಮೇಣ ಬದಲಾವಣೆಯಾಗಿ ಮುಂದಕ್ಕೆ ಜಟಿಲರೂಪದ ಜೀವಿಗಳಾಗಿ ಪರಿವರ್ತನೆ ಹೊಂದಿದವು. ಪರಿಣಾಮವಾಗಿ ಅಸ್ತಿತ್ವದಲ್ಲಿರುವ ಪ್ರಾಣಿ ಹಾಗೂ ಸಸ್ಯಗಳ ನಡುವೆ ನಿಕಟ ಸಂಬಂಧ ಇದೆಯೆಂಬುದು ಸ್ಪಷ್ಟವಾದಂತಾಯಿತು. ಒಂದೇ ರೀತಿಯ ರೂಪರೇಷೆಗಳು ವಿಭಿನ್ನ ಗುಂಪುಗಳಲ್ಲಿ ತೋರುವುದಕ್ಕೆ ಕಾರಣವೆಂದರೆ ಅವುಗಳ ಸಾಮಾನ್ಯ ಪೂರ್ವಜ ಪೀಳಿಗೆ. ಪ್ರಕೃತಿಯಲ್ಲಿ ಈ ಚಮತ್ಕಾರ ನಡೆದ ಬಗೆಯನ್ನು ಕುರಿತು ಪ್ರಸಿದ್ಧ ಸಿದ್ಧಾಂತವಾದ ವಿಕಾಸವಾದವನ್ನು ೧೮೫೯ರಲ್ಲಿ ಚಾರ್ಲ್ಸ್ ಡಾರ್ವಿನ್ ಮಂಡಿಸಿದ್ದುದು ಸರಿಯಷ್ಟೆ. ಆಲ್ಫ್ರೆಡ್ ರಸ್ಸೆಲ್ ವ್ಯಾಲೇಸ್ ಈ ವಾದದ ಸಹಭಾಗಿಯಾಗಿದ್ದರು.

ವಿಕಾಸದ ಮೂಲತತ್ವವಾದ ನೈಸರ್ಗಿಕ ಆಯ್ಕೆ ಮತ್ತು ವ್ಯತ್ಯಯನ ಈ ವಾದದ ತಳಪಾಯ. ಒಂದೇ ಜಾತಿಯ ಪ್ರಾಣಿಜೀವಿಗಳಲ್ಲೂ ಹಲವಾರು ವ್ಯತ್ಯಾಸಗಳು ಕಂಡುಬರುತ್ತವೆ. ಮಕ್ಕಳು ಆನುವಂಶಿಕವಾಗಿ ಸ್ವಲ್ಪಮಟ್ಟಿಗೆ ತಂದೆತಾಯಿಯರನ್ನು ಹೋಲುತ್ತಾರೆ. ಒಬ್ಬ ವ್ಯಕ್ತಿ ಮಕ್ಕಳ ಹುಟ್ಟಿಗೆ ಕಾರಣನಾಗುವುದರಲ್ಲಿ ಮತ್ತೊಬ್ಬನಿಗಿಂತ ಹೆಚ್ಚಿನ ಸಫಲತೆಯನ್ನು ಪಡೆಯಬಹುದು. ಹೀಗಾಗಿ ಆ ವ್ಯಕ್ತಿಯ ಜೀನ್‌ಗಳು ಮುಂದಿನ ಜನಾಂಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರಕಟವಾಗುತ್ತವೆ.

ಜೀವಿಗಳಲ್ಲಿ ಕಾಣಿಸುವ ಲಕ್ಷಣಗಳ ವ್ಯತ್ಯಯನ ಮುಂದಿನ ಪೀಳಿಗೆಗೆ ವರ್ಗಾಯಿಸಲ್ಪಡುತ್ತದೆ ಎಂಬುದು ತಿಳಿದುಬಂದಿದೆಯಷ್ಟೆ. ಡಾರ್ವಿನ್ನರ ಪ್ರಕಾರ ಈ ವ್ಯತ್ಯಯನದ ವರ್ಗಾವಣೆ ಯಾದೃಚ್ಛಿಕ (ಯದ್ವಾತದ್ವಾ) ವಾಗಿ ಆಗುತ್ತದೆ. ವ್ಯತ್ಯಯನಗಳ ಕಾರಣ ಕೇವಲ ಪರಿಸರವೇನಲ್ಲ, ಅಲ್ಲದೆ, ಈ ವ್ಯತ್ಯಯನ ಜೀವಿಗೆ ಪ್ರಯೋಜನವಾಗಿದೆಯೋ ಇಲ್ಲವೋ ಎಂಬುದನ್ನು ಅವಲಂಬಿಸಿರುವುದಿಲ್ಲ.

ಸೌದೆ ಒಡೆಯುವವನ ಮಗನಿಗೆ ಒಳ್ಳೆಯ ಸ್ನಾಯುಗಳಿರುವ ಯೋಗ ಎಷ್ಟಿದೆಯೋ ಅಷ್ಟೇ ಒಬ್ಬ ಸೋಮಾರಿ ಮನುಷ್ಯನ ಮಗನಿಗೂ ಇರಬಹುದು. ಪ್ರತಿಯೊಬ್ಬ ವ್ಯಕ್ತಿಯ ಪುನರುತ್ಪಾದನಾ ಅರ್ಹತೆಯಲ್ಲಿ ಆನುವಂಶಿಕ ವ್ಯತ್ಯಾಸಗಳಿರಬಹುದು. ಒಂದೇ ಜಾತಿಯ ಜೀವಿಗಳಲ್ಲೂ ಸಹ ಇಂಥ ವ್ಯತ್ಯಾಸಗಳಿವೆಯೆಂದು ತಿಳಿದುಬಂದಿದೆ. ಡಾರ್ವಿನ್ನರ ''ನೈಸರ್ಗಿಕ ಆಯ್ಕೆ'' ಸಿದ್ಧಾಂತಕ್ಕೆ ಪುಷ್ಟಿ ನೀಡಲು ಈ ಅಂಶಗಳು ಮುಖ್ಯಕಾರಣ. ಪ್ರಾಣಿಗಳು ಮತ್ತು ಸಸ್ಯಗಳ ಪ್ರತಿಯೊಂದು ಜೀವಕೋಶದಲ್ಲೂ ಕೋಶಕೇಂದ್ರವಿರುತ್ತದೆ. ಈ ಕೇಂದ್ರದಲ್ಲಿ ೨ ಜೊತೆ ಡಿ.ಎನ್.ಎ. ಅಣುವಿರುತ್ತವೆ. ಇವು ತಂದೆ ತಾಯಿಯರಿಂದ ಬಂದಿದ್ದು, ಪ್ರೋಟೀನ್ ತಯಾರಿಕೆಯನ್ನು ಡಿ.ಎನ್.ಎ. ನಿರ್ದೇಶಿಸುತ್ತದೆ. ಜೀವಿಗಳಲ್ಲಿ ಕಂಡುಬರುವ ಲಕ್ಷಣಗಳಿಗೆ ಅವುಗಳಲ್ಲಿರುವ ವಿಭಿನ್ನ ಪ್ರೋಟೀನ್‌ಗಳೇ ಕಾರಣ. ಪ್ರೋಟೀನ್‌ಗಳ ತಯಾರಿಕೆ ಡಿ.ಎನ್.ಎ. ಸಹಾಯದಿಂದ ಉಂಟಾಗುತ್ತದೆಯಷ್ಟೆ. ಆದ್ದರಿಂದ ಎರಡು ಜೀವಿಗಳಲ್ಲಿನ ಮೂಲಭೂತ ವ್ಯತ್ಯಾಸಕ್ಕೆ ಕಾರಣ ಡಿ.ಎನ್.ಎ. ಅಣು ಅಥವಾ ಜೀನ್. ಡಿ.ಎನ್.ಎ. ಮಟ್ಟದಲ್ಲಿ ವ್ಯತ್ಯಯನವಾದಾಗ, ನೈಸರ್ಗಿಕ ಆಯ್ಕೆಯಿಂದ, ವಿಭಿನ್ನ ಲಕ್ಷಣಗಳುಳ್ಳ ಜೀವಿಗಳು ಜನಿಸುತ್ತವೆ. ವಿಕಾಸಶೀಲ ಜೀವವಿಜ್ಞಾನದಲ್ಲಿ ''ಹೊಂದಾಣಿಕೆಗೆ'' (ಅಡಾಪ್ಟೇಷನ್) ಬಹುಮುಖ್ಯ ಪಾತ್ರವಿದೆ. ಇಬ್ಬರು ವ್ಯಕ್ತಿಗಳನ್ನು ಪರೀಕ್ಷಿಸಿದಾಗ ಪರಿಸರಕ್ಕೆ ಅವರ

# ವಿಕಾಸವಾದದ ಧುರೀಣ ಸ್ಟೀಫನ್ ಜೆ. ಗೂಲ್ಡ್



ಪ್ರತಿ ತಿಂಗಳು ಅಂದರೆ ೧೯೭೪ರಿಂದ ೨೦೦೧ರವರೆಗೆ ಸತತವಾಗಿ ಮನಸ್ಸನ್ನು ಪ್ರಚೋದಿಸುವಂಥ ೩೦೦ ಪ್ರಬಂಧಗಳನ್ನು ಬರೆದ ಅಸಾಧಾರಣ ವಿಜ್ಞಾನಿ. ಈ ಪ್ರಬಂಧಗಳು ಮುಂದಕ್ಕೆ ಸ್ವಾರಸ್ಯಮಯ ಶೀರ್ಷಿಕೆಗಳನ್ನು ಹೊಂದಿದ ಪುಸ್ತಕಗಳಾಗಿ ಪ್ರಕಟವಾದವು.

ಉದಾಹರಣೆಗೆ, ''ದ ಪಾಂಡಾಸ್ ಥಂಬ್'', ''ಬುಲ್ಲಿ ಫಾರ್ ಬ್ರಾಂಟೋ ಸಾರಸ್'', ''ಫ್ಲೆಮಿಂಗೋಸ್ ಸ್ಮೈಲ್''.

ಚಾರ್ಲ್ಸ್ ಡಾರ್ವಿನ್ನರ ಅಭಿಜಾತ ವಿಕಾಸವಾದಕ್ಕೇ ಸವಾಲು ಹಾಕುವ ''ಥಿಯರಿ ಆಫ್ ಪಂಕ್ಚುಯೇಟೆಡ್ ಇಕ್ವಿಲಿಬ್ರಿಯಮ್'' ಎಂಬ ಕ್ರಾಂತಿಕಾರಿ ಸಿದ್ಧಾಂತವೊಂದೇ ಸಾಕು ಅವರ ವೈಜ್ಞಾನಿಕ ಜೀವನದ ಸಾರ್ಥಕತೆಗೆ. ಈ ಸಿದ್ಧಾಂತವನ್ನು ಪ್ರಕಟಿಸಿದಾಗ ಅವರಿಗೆ ಕೇವಲ ೩೦ ವರ್ಷ. ಬಹುಶಃ ಗೂಲ್ಡ್‌ರ ಸರಿಸಮಾನರೆಂದರೆ ೧೯ನೇ ಶತಮಾನದಲ್ಲಿದ್ದ ಟಿ. ಎಚ್. ಹಕ್ಸ್‌ಲೀ ಮತ್ತು ೧೯೩೦ರ ದಶಕದಲ್ಲಿದ್ದ ಜೆ. ಬಿ. ಎಸ್. ಹಾಲ್ಡೇನ್ ಅವರು. ಇವರಿಬ್ಬರೂ ವಿಕಾಸ ಸಿದ್ಧಾಂತಕ್ಕೆ ಸಾಕಷ್ಟು ಪುಷ್ಟಿ ನೀಡಿದ್ದಾರೆ. ವಿಕಾಸವಾದದ ಅಪ್ರತಿಮ ಪ್ರಚಾರಕನಾದ

**ಡಾ|| ವೀಣಾ ರಾವ್**

ಹೊಂದಾಣಿಕೆಯಲ್ಲಿ ವ್ಯತ್ಯಾಸವಿದ್ದಲ್ಲಿ ಹೆಚ್ಚು ಹೊಂದಾಣಿಕೆ ಸಾಧಿಸಿದವನು ಅಧಿಕ ಮಕ್ಕಳನ್ನು ಪಡೆಯುತ್ತಾನೆ. ಹೀಗಾಗಿ ಭವಿಷ್ಯತ್ತಿನ ಜನಾಂಗಗಳಲ್ಲಿ ಪರಿಸರಕ್ಕೆ ಹೊಂದಿಕೊಳ್ಳಬಲ್ಲ ವ್ಯಕ್ತಿಗಳೇ ಹೆಚ್ಚಿನ ಸಂಖ್ಯೆಯಲ್ಲಿರುತ್ತಾರೆ. ಈ ರೀತಿಯಾದ ಹೊಂದಾಣಿಕೆಯ ಬದಲಾವಣೆಯನ್ನು ನಾವು 'ನೈಸರ್ಗಿಕ ಆಯ್ಕೆ'ಯ ಮೂಲಕ ಮಾತ್ರ ವಿವರಿಸಬಹುದು. ರೂಪಶಾಸ್ತ್ರದ ಹೊಂದಾಣಿಕೆಯಲ್ಲಿ ಪ್ರಸಿದ್ಧ ಉದಾಹರಣೆ ಯೆಂದರೆ ಡಾರ್ವಿನ್ ಅಧ್ಯಯನ ಮಾಡಿದ ಫಿಂಚ್ (ಭಾರದ್ವಾಜ) ಪಕ್ಷಿಗಳು. ಇವನ್ನು ಡಾರ್ವಿನ್ ಮೊದಲ ಬಾರಿಗೆ ಗಲಾಪಗೋಸ್ ದ್ವೀಪಗಳಲ್ಲಿ ನೋಡಿದ್ದರು. ಈ ಫಿಂಚ್ ಪಕ್ಷಿಗಳು ಅಧಿಕ ಪ್ರಮಾಣದಲ್ಲಿ ಪರಸ್ಪರ ಹೋಲುವುದರಿಂದ, ಎಲ್ಲವೂ ಒಂದೇ ಕಾಲೋನಿಯಿಂದ ಹೊರಬಂದವು ಎಂದು ತಿಳಿದುಬಂದಿದೆ. ಇವುಗಳ ಕೊಕ್ಕಿನ ಆಕಾರದಲ್ಲಿ ಹೊಂದಾಣಿಕೆಯಾಗಿರುವ ಮಟ್ಟ ಅದ್ಭುತ. ಈ ಉದಾಹರಣೆಯಲ್ಲಿ ಕಾಣಬರುವ ಹೊಂದಾಣಿಕೆ, ಫಿಂಚ್ ಪಕ್ಷಿಗಳಿಗೆ ಸಿಕ್ಕುವ ಆಹಾರ ಮತ್ತು ವಿಭಿನ್ನ ಜಾತಿಯ ಫಿಂಚ್ ಪಕ್ಷಿಗಳ ಅಸ್ತಿತ್ವದಿಂದ ಪ್ರಭಾವಿತವಾಗಿದೆ.

**PHOTO OF FINCHES**

ಒಂದು ಜನಾಂಗದ ಆನುವಂಶಿಕ ಸಂಯೋಜನೆ ಯಲ್ಲಿ ಬದಲಾವಣೆಯಾಗಬೇಕಾದರೆ, ಅದು ಆ ವ್ಯಕ್ತಿಗೆ ಸಹಾಯಕಾರಿಯಾಗಿದೆಯೋ ಅಥವಾ ಅಪಾಯಕಾರಿ ಯಾಗಿದೆಯೋ ಎಂಬುದನ್ನು ಅವಲಂಬಿಸಿರುತ್ತದೆ. ಹಲವುಬಾರಿ "ಜೀನ್" ಆಕಸ್ಮಿಕವಾಗಿ ವಿಕೃತಿಯಿಂದ ಮಾರ್ಪಾಡಾಗಬಹುದು. ಒಟ್ಟಿನಲ್ಲಿ ಹೊಂದಾಣಿಕೆಯೇ ಪ್ರಾಣಿ ಪ್ರಪಂಚದ ಬದುಕಿನ ಕೇಂದ್ರ ಬಿಂದು. ಇದರಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ. ಜೀವಿಗಳಲ್ಲಿ ವಿಕಾಸಶೀಲ ಮಾರ್ಪಾಡಾಗಬೇಕಾದರೆ ಕೇವಲ ವಿಕಾಸದ "ನೈಸರ್ಗಿಕ ಆಯ್ಕೆ"ಯಿಂದ ಮಾತ್ರ ಸಾಧ್ಯ.

ಗೂಲ್ಡ್ ಆಗಿಂದಾಗ್ಗೆ ಡಾರ್ವಿನ್ನರ ಪರವಾಗಿ ವಾದಿಸಿದರೂ ಕೆಲವು ಬಾರಿ ಆತನ ವಿಕಾಸ ವಾದದ ವಿರುದ್ಧ ವಾಗ್ವಾದ ನಡೆಸುತ್ತಿದ್ದರು. ನವ್ಯ (ನಿಯೋ) ಡಾರ್ವಿನ್ ಪಂಥದ ಜೀವವಿಜ್ಞಾನಿಗಳ ಪ್ರಕಾರ, ಜೀವಿಗಳಲ್ಲಿ ಇರುವ ವಿಶೇಷ ಗುಣಗಳು, ಒಂದು ನಿರ್ದಿಷ್ಟವಾದ ಕೆಲಸಕ್ಕಾಗಿಯೇ ಹುಟ್ಟಿರುತ್ತವೆ. ಗೂಲ್ಡ್ ಮತ್ತು ಆರ್. ಲೆವಾಂಟಿನ್ ಪ್ರತಿಪಾದಿಸಿದ ಹೊಸ ಸಿದ್ಧಾಂತ ನವ್ಯ ಡಾರ್ವಿನ್ ಪಂಥದ ಈ ಹೇಳಿಕೆ ತಪ್ಪೆಂದು ಗುರುತಿಸಿತು. ಈ ಸಿದ್ಧಾಂತದ ಪ್ರಕಾರ ಜೀವಿಗಳಲ್ಲಿ ಹಿಂದಿದ್ದ ವಿಶೇಷ ಗುಣಗಳು ಮುಂದೆ ಅನವಶ್ಯಕವಾಗಬಹುದು ಅಥವಾ ಒಂದು ನಿರ್ದಿಷ್ಟ ಕಾರ್ಯವಿಲ್ಲದೆ ಹುಟ್ಟಿನಿಂದ ಬಂದ ಲಕ್ಷಣ ಮುಂದೆ ಜೀವನದಲ್ಲಿ ಹೊಸ ಕಾರ್ಯಕ್ಕಾಗಿ ಮೀಸಲಾಗಬಹುದು.

ಉದಾಹರಣೆಗೆ, ಪಾಂಡಾವಿನ ಹೆಬ್ಬೆಟ್ಟು : 'ಉಳಿದ ಸಸ್ತನಿಗಳಲ್ಲಿದ್ದಂತೆ ಇದು ಬೆರಳಿನ ಮೂಳೆಯಿಂದ ಬೆಳೆದಿಲ್ಲ. ಬದಲಿಗೆ, ಮುಂಗೈನ ಮಣಿಕಟ್ಟಿನ ರೇಡಿಯಲ್ ಸೆಸೆಮಾಯ್ಡ್ ಮೂಳೆಯಿಂದ ಬೆಳೆದಿದೆ. ಜೊತೆಗೆ ಹೆಬ್ಬೆಟ್ಟಿನ ಸ್ನಾಯುಗಳೂ ಸಹ ಈ ಮೂಳೆಗೆ ಆಸರೆ ನೀಡಿವೆ. ಪಾಂಡಾಗಳ ಹತ್ತಿರ ಸಂಬಂಧಿಯಾದ ಕರಡಿಗಳಲ್ಲಿ ಸಹ ಇದೇ ಸ್ನಾಯುಗಳು ನಿಜವಾದ ಹೆಬ್ಬೆಟ್ಟಿಗೆ ಆಸರೆಯನ್ನು ನೀಡಿವೆ. ಪಾಂಡಾನಲ್ಲಿನ ಈ ಹೊಸ ಹೆಬ್ಬೆಟ್ಟು ಬಿದಿರು ಗಿಡಗಳನ್ನು ತಿನ್ನುವಾಗ ಅದನ್ನು ಗಟ್ಟಿಯಾಗಿ ಹಿಡಿಯಲು ಸಹಾಯ ಮಾಡಿದೆ. ಇಂತಹ ಮಾರ್ಪಾಟನ್ನು ಗೂಲ್ಡ್ ಮತ್ತು ಎಲಿಜಬೆತ್ ವಿರ್ಬಾ "ಎಕ್ಸಾಪ್ಟೇಷನ್ಸ್" ಎಂದು ಕರೆದರು.

ಇದೇ ವಿಷಯವನ್ನು ಕೇಂದ್ರವಾಗಿಟ್ಟುಕೊಂಡು ೧೯೭೯ರಲ್ಲಿ "ದ ಸ್ಪಾಂಡ್ರೆಲ್ಸ್ ಆಫ್ ಸಾನ್ ಮಾರ್ಕೋ" ಎಂಬ ವೈಜ್ಞಾನಿಕ ಪ್ರಬಂಧವನ್ನು ಮತ್ತೆ ಗೂಲ್ಡ್ ಮಂಡಿಸಿದರು. ಇದರಲ್ಲಿ ಗೂಲ್ಡ್ ಉದಾಹರಿಸಿರುವುದು ವೆನಿಸ್ ನಗರದ "ಸಾನ್ ಮಾರ್ಕೋ" ಕಟ್ಟಡ. ಈ ಜಗತ್ ಪ್ರಸಿದ್ಧ ಸುಂದರ ಕಟ್ಟಡದ ಅದ್ಭುತವಾದ ಕಮಾನು ಮತ್ತು ಕಂಬಗಳ ನಡುವಿನ ಜಾಗವೇ "ಸ್ಪಾಂಡ್ರೆಲ್ಸ್." ಈ ಸ್ಥಳವನ್ನು ಅಂದದ ಕುಶಲ ಕಲಾಕೃತಿಗಳನ್ನು ಎತ್ತಿ ತೋರಿಸಲು ವಿನಿಯೋಗಿಸಲಾಗಿದೆ. ಕಲಾಭಿಮಾನಿಗಳು, ಕಟ್ಟಡ ಕಟ್ಟುವ ಸಂದರ್ಭದಲ್ಲಿ ವೀಕ್ಷಿಸುವ ಈ ಸ್ಥಳವನ್ನು ಕಲಾಪ್ರದರ್ಶನಕ್ಕಾಗಿ ಖಾಲಿಯಾಗಿ ಬಿಟ್ಟಿರಬೇಕೆಂಬ ಮಾತೂ ಇದೆ. ಆದರೆ, ವಿಷಯವೇ ಬೇರೆ. 'ಸಾನ್ ಮಾರ್ಕೋ' ಕಟ್ಟಡದ ಭದ್ರತೆಗಾಗಿ ಈ ಸ್ಪಾಂಡ್ರೆಲ್ಸ್ ಸ್ಥಾಪಿತವಾಯಿತೇ ಹೊರತು, ಅಂದಚೆಂದಕ್ಕಲ್ಲ. ಗೂಲ್ಡ್ ಮತ್ತು ಲೆವಾಂಟಿನ್‌ರ ಪ್ರಕಾರ. ಈ ರೀತಿಯ 'ಎಕ್ಸಾಪ್ಟೇಷನ್ಸ್' ವಿಕಾಸದಲ್ಲಿ ಸದಾ ನಡೆಯುತ್ತಿರುತ್ತದೆ.

ಡಾರ್ವಿನ್‌ರ ಸಿದ್ಧಾಂತಕ್ಕೆ ವಿರುದ್ಧವಾಗಿ ಗೂಲ್ಡ್‌ರ ಮತ್ತೊಂದು ಗಮನಾರ್ಹ ಹೇಳಿಕೆಯೆಂದರೆ "ವಿಕಾಸದಲ್ಲಿ ಆಕಸ್ಮಿಕ ಘಟನೆಗಳ ಪ್ರಭಾವಕ್ಕೆ ಯಾರೂ ಹೆಚ್ಚು ಮಹತ್ವವನ್ನು ಕೊಟ್ಟಿಲ್ಲ" ಎಂಬುದು. "ಉಲ್ಕೆಯೊಂದು ಭೂಮಿಗೆ ಬಿದ್ದು ಡೈನೋಸಾರ್ ಜಾತಿಯನ್ನೇ ನೆಲಸಮ ಮಾಡಿಲ್ಲದಿದ್ದರೆ, ಮಾನವನ ಜಾತಿಯ ವಿಕಾಸವಾಗುತ್ತಿತ್ತೇ ?" ಎಂಬುದು ಗೂಲ್ಡ್‌ರ ಪ್ರಶ್ನೆ. ನೈಲ್ಸ್



ಎಲ್ಡ್ರೆಜ್ ಮತ್ತು ಗೂಲ್ಡ್ ಈ ಅಂಶವನ್ನೊಳಗೊಂಡ "ಪನ್‌ಕ್ಚುಯೇಟೆಡ್ ಈಕ್ವಲೀಬ್ರಿಯಮ್" ಎಂಬ ಕ್ರಾಂತಿಕಾರಿ ಸಿದ್ಧಾಂತವನ್ನು ೧೯೭೨ರಲ್ಲಿ ವಿಜ್ಞಾನಿಗಳ ಮುಂದಿಟ್ಟರು. ಫಾಸಿಲ್‌ಗಳ ಕೂಲಂಕಷ ಅಧ್ಯಯನವೇ ಈ ನಿಲುವಿಗೆ ಆಧಾರ. ಈ ಸಿದ್ಧಾಂತ ಹೀಗಿದೆ : ನಿಸರ್ಗದಲ್ಲಿ ಬಹಳ ಸಮಯದ ವಿಕಾಸದ ಅವಧಿ ಸ್ತಬ್ಧವಾದ ನಂತರ ಒಮ್ಮೆಗೇ ಕಡಿಮೆ ಅವಧಿಯ ವಿಕಾಸಶೀಲ ಸ್ಫೋಟ ಹೊರಹೊಮ್ಮುತ್ತದೆ. ಇಂತಹ ಸ್ಫೋಟದಲ್ಲಿ ಹೊಸ ಜಾತಿಯ ಜೀವಿಗಳು ಉದ್ಭವವಾಗುವೆಂದು ಇವರ ನಂಬಿಕೆ. ಈ ಸ್ಫೋಟಕ್ಕೆ ಕಾರಣ ಉಲ್ಕೆಯಿರಬಹುದು, ಹವಾಮಾನದ ಮಾರ್ಪಾಟು ಇರಬಹುದು. ಆದರೆ ಇದನ್ನು ಸಂಪ್ರದಾಯಬದ್ಧ ವಿಕಾಸಶೀಲ ವಿಜ್ಞಾನಿಗಳು ಒಪ್ಪಲಿಲ್ಲ. ಕಾರಣ, ಡಾರ್ವಿನ್ನರ ಸಿದ್ಧಾಂತದಲ್ಲಿ ವಿಕಾಸ ಅನುಕ್ರಮವಾಗಿ ಸ್ಥಿರವೇಗದಲ್ಲಿ ನಡೆಯುವ ಪ್ರಕ್ರಿಯೆ. ಗೂಲ್ಡ್‌ರ ಈ ನವ್ಯ ಸಿದ್ಧಾಂತದಿಂದ ಹೊರಬಂದ ಉಪಯುಕ್ತ ಫಲಿತಾಂಶವೆಂದರೆ, ಮುಂದಕ್ಕೆ ವಿಜ್ಞಾನಿಗಳು ಫಾಸಿಲ್‌ಗಳ ಬಗ್ಗೆ ಹೆಚ್ಚು ಆಸಕ್ತಿ ತೋರತೊಡಗಿದ್ದು.

ಗೂಲ್ಡ್‌ರ ಮತ್ತೊಂದು ಕುತೂಹಲ ಕೆರಳಿಸುವ ಪುಸ್ತಕ "ವಂಡರ್‌ಫುಲ್ ಲೈಫ್." ಇದು "ಬರ್ಗೆಸ್ ಷೇಲ್" ಪದರಗಲ್ಲನ್ನು ಕುರಿತದ್ದಾಗಿದೆ. ಬರ್ಗೆಸ್ ಷೇಲ್ ಎಂಬ ಸ್ಥಳ ಬ್ರಿಟಿಷ್ ಕೊಲಂಬಿಯಾದ ಕೆನೇಡಿಯನ್ ರಾಕೀಸ್‌ನಲ್ಲಿದೆ. ಇಲ್ಲಿ ಅಳಿಯದೇ ಜೋಪಾನವಾಗಿ ಉಳಿದುಕೊಂಡು ಬಂದಿರುವ ಸುಮಾರು ೫೦೦-೬೦೦ ಮಿಲಿಯನ್ ವರ್ಷದಷ್ಟು ಹಳೆಯ ಫಾಸಿಲ್‌ಗಳ ಭಂಡಾರವೇ ವಿಜ್ಞಾನಿಗಳಿಗೆ ಸಿಕ್ಕಿತು. ಚಾರ್ಲ್ಸ್ ವಾಲ್ಕಾಟ್ ಇದನ್ನು ಪ್ರಥಮ ಬಾರಿ ಗುರುತು ಹಚ್ಚಿದರು. ದುರದೃಷ್ಟವಶಾತ್ ಸಂಪ್ರದಾಯಬದ್ಧ ವಿಜ್ಞಾನಿಯಾದ ವಾಲ್ಕಾಟ್ ಈ ಫಾಸಿಲ್‌ಗಳ ಮಹತ್ವದ ಬಗ್ಗೆ ಗಾಢವಾಗಿ ಯೋಚಿಸಲಿಲ್ಲ. ಬಳಿಕ, ಕೇಂಬ್ರಿಜ್‌ನ ಮೂರು ವಿಜ್ಞಾನಿಗಳು ೨೦ ವರ್ಷಗಳ ಕಾಲ ಈ ಫಾಸಿಲ್ ಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ, ಅವೆಲ್ಲವನ್ನೂ ಚಿತ್ರದ ರೂಪದಲ್ಲಿ ವಿಜ್ಞಾನಿಗಳ ಮುಂದಿಟ್ಟರು. ಗೂಲ್ಡ್, ಅವನ್ನು ವಿಶ್ವದ ಅತಿಮುಖ್ಯ ಅಕಶೇರುಕ (invertebrate) ಫಾಸಿಲ್ ಭಂಡಾರ ಎಂದು ಕರೆದರು. ಅತ್ಯಾಶ್ಚರ್ಯಕರವಾದ ವಿಷಯ ವೆಂದರೆ ಬರ್ಗೆಸ್ ಷೇಲ್‌ನ ಪ್ರಾಣಿ ಜೀವಿಗಳಿಗೂ ಇಂದಿನ ಪ್ರಾಣಿ ಜೀವಗಳಿಗೂ ಏನೂ ಸಂಬಂಧವಿಲ್ಲದಂತೆ ತೋರುತ್ತದೆ. ಪುನಃ ಡಾರ್ವಿನ್ ಪಂಥದ ವಿಜ್ಞಾನಿಗಳು ಇದನ್ನು ನಂಬಲು ಸಿದ್ಧರಿರಲಿಲ್ಲ. ಬರ್ಗೆಸ್ ಷೇಲ್‌ನಲ್ಲಿ ಸಿಕ್ಕಿರುವ ಅಪಾರ ಫಾಸಿಲ್ ಭಂಡಾರವನ್ನು ಗಮನಿಸಿದರೆ ಜೀವವಿಕಾಸದ ಮೊಟ್ಟಮೊದಲ ಸೃಜನಾತ್ಮಕ ಸ್ಫೋಟದಲ್ಲಿ ಕೋಟ್ಯಾಂತರ ಬಗೆಯ ಜೀವಿಗಳು ಹುಟ್ಟಿದವೆಂದು ತಿಳಿದುಬರುತ್ತದೆ. ನಮಗೆ ಇನ್ನೂ ತಿಳಿಯದ ಕಾರಣದಿಂದ ಇವೆಲ್ಲ ನೆಲಸಮವಾಗಿ ಕೇವಲ ಮಾನವ ಮತ್ತು ಕಶೇರುಕದ ಪೂರ್ವಜೀವಿ ಮಾತ್ರ ಅಳಿಯದೆ ಉಳಿದುಕೊಂಡು ಬಂದಹಾಗೆ ಕಾಣುತ್ತದೆ. ಇಂತಹ ಆಕಸ್ಮಿಕ ಘಟನೆ ಘಟಿಸದೇ ಇರಬಹುದಾಗಿತ್ತು. ಆಗ ಮಾನವನ ಜನನವಾಗುತ್ತಲೇ ಇರಲಿಲ್ಲ!

೧೯೮೦ರಲ್ಲಿ ಚಾರ್ಲ್ಸ್ ಡಾರ್ವಿನ್ನರ ವಿಕಾಸವಾದವನ್ನು ಧಾರ್ಮಿಕ ಪಟುಗಳು ಖಂಡಿಸಿ, ಇದರ ಬದಲು ಅಮೆರಿಕದ ಕೆಲವು ಶಾಲೆಗಳಲ್ಲಿ ಬೈಬಲ್ಲಿನ ಪ್ರಕಾರವೇ ಜೀವೋತ್ಪತ್ತಿಯನ್ನು ವಿವರಿಸಬೇಕೆಂದು ಒತ್ತಾಯಿಸಿದರು. ಆಗ ಗೂಲ್ಡ್ ಮಿಡ್‌ವೆಸ್ಟ್‌ಗೆ ಪ್ರಯಾಣ ಮಾಡಿ, ಅಲ್ಲಿನ ನ್ಯಾಯಾಸ್ಥಾನದಲ್ಲಿ ಡಾರ್ವಿನ್ನರ ವಿಕಾಸವಾದದ ಪರ ವಾದಿಸಿ ತಮ್ಮ ವಾಕ್‌ಪಟುತ್ವದಿಂದ ಎಲ್ಲರ ಬಾಯಿಗಳನ್ನು ಮುಚ್ಚಿಸಿದ್ದರು. ವಿಕಾಸವಾದದ ಜ್ಞಾನವಿಲ್ಲದೆ ''ಜೀವಶಾಸ್ತ್ರ ವ್ಯಾಸಂಗ ಮಾಡುವುದು ವ್ಯಾಕರಣವಿಲ್ಲದೆ ಇಂಗ್ಲಿಷ್ ಕಲಿತಂತೆ'' ಎಂದು ಗೂಲ್ಡ್ ಹೇಳಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಸ್ಟೀಫನ್ ಜೆ. ಗೂಲ್ಡ್ ಅವರು ವಿಜ್ಞಾನ ಪ್ರಪಂಚದಲ್ಲಿ ಉಚ್ಚ ಸ್ಥಾನ ಪಡೆಯಲು ಕಾರಣ ಬಹಾಮಾದ ''ಭೂಮಿಯ ಎರೆಹುಳ''ಗಳ ಕುರಿತ ಇವರ ಸಂಶೋಧನೆ. ''ಫಾಸಿಲ್ ಮೊಲಸ್ಕ್''ನ (ಮೃದ್ವಂಗಿ) ಜೈವಿಕ ಮಾಪನವೇ ಇವರ ಡಾಕ್ಟರೇಟ್ ಪದವಿಯ ವಿಷಯ. ಇವರ ಮೊದಲ ಪುಸ್ತಕ ''ಆಂಟೋಜನಿ ಮತ್ತು ಫೈಲೋಜನಿ.''

'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆಯಲ್ಲಿ ಒಮ್ಮೆ ಇವರು ಸಂದರ್ಶನ ನೀಡಿದಾಗ ಎರೆಹುಳವನ್ನು ಕುರಿತ ಸಂಶೋಧನೆಯನ್ನು ಏಕೆ ನಡೆಸಿದರೆಂದು ಪ್ರಶ್ನಿಸಲಾಯಿತು. ಅದಕ್ಕೆ ಗೂಲ್ಡ್ ''ನಾನು ಎಂದೂ ಒಂದು ಜೀವಿಯ ಬೆಳವಣಿಗೆ (ಆಂಟೋಜನಿ) ಮತ್ತು ಅದರ ವಂಶದ ವಿಕಾಸದ ನಡುವಿನ ಸಂಬಂಧದಲ್ಲಿ (ಫೈಲೋಜನಿ) ಅತ್ಯಾಸಕ್ತನಾಗಿದ್ದೇನೆ. ಇದರ ಬಗ್ಗೆ ತಿಳಿಯಲು ಎರೆಹುಳುವಿನ ಪಾತ್ರ ಬಹು ಮುಖ್ಯ. ಏಕೆಂದರೆ ಅದರ ಚಿಪ್ಪಿನಲ್ಲಿ ಬೆಳವಣಿಗೆಯ ಸಂಪೂರ್ಣ ಮಾಹಿತಿ ಇರುತ್ತೆ. ಪ್ರತಿ ಸಲ ಎರೆಹುಳುವಿನಲ್ಲಿ ಒಂದು ವಲಯ ಬೆಳೆದಾಗ ಅದು ಚಿಪ್ಪಿನಲ್ಲಿ ಶಾಶ್ವತವಾಗಿ ಗುರುತು ಮಾಡಿರುತ್ತೆ'' ಎಂದು ವಿವರಿಸಿದರು.

ಇದೇ ಪುಸ್ತಕದಲ್ಲಿ ಅಭಿವರ್ಧನ ಜೀವ ವಿಜ್ಞಾನವನ್ನು ವಿಕಾಸಶೀಲ ಸಿದ್ಧಾಂತದೊಳಗೆ ಅಳವಡಿಸಬೇಕೆಂದು ಕಳಕಳಿಯಿಂದ ಗೂಲ್ಡ್ ಕೇಳಿಕೊಂಡಿದ್ದಾರೆ. ಒಂದು ರೀತಿಯಲ್ಲಿ ನೋಡಿದರೆ ಇಂದು ಅಗಾಧವಾಗಿ ಬೆಳೆಯುತ್ತಿರುವ ''ವಿಕಾಸ ಮತ್ತು ಅಭಿವರ್ಧನೆ'' ಎಂಬ ಹೊಸ ವಿಭಾಗಕ್ಕೆ ಗೂಲ್ಡ್ ಮೂಲಕರ್ತರು ಎಂದು ಹೇಳಬಹುದು.

ಇತ್ತೀಚೆಗೆ, ೧೪೦೦ ಪುಟಗಳ ''ದ ಸ್ಟ್ರಕ್ಚರ್ ಆಫ್ ಎವಲ್ಯುಷನರೀ ಥಿಯರಿ'' ಎಂಬ ಮಹಾಕೃತಿಯನ್ನು ಗೂಲ್ಡ್ ಬರೆದರು. ಇದು ಒಂದು ವೈಜ್ಞಾನಿಕ ಒಡಂಬಡಿಕೆಯಾಗಿ ಮತ್ತು ಒಂದು ಮೈಲಿಗಲ್ಲಾಗಿ ನಿಲ್ಲುತ್ತದೆ.

''ದ ಸೆಲ್ಫಿಷ್ ಜೀನ್'' ಎಂಬ ಗ್ರಂಥ ಬರೆದ ರಿಚರ್ಡ್ ಡಾಕಿನ್ಸ್ ಜೊತೆ ನಡೆದ ವಾದವಿವಾದ ಇತ್ತೀಚೆಗೆ ಸಾಕಷ್ಟು ಸುದ್ದಿ ಮಾಡಿದೆ. ಇದನ್ನು ಡಾಕಿನ್ಸೈಟ್ಸ್ ವರ್ಸಸ್ ಗೂಲ್ಡೈಟ್ಸ್ ನಡುವೆ ನಡೆದ ಸಮರ ಎಂದೇ ವಿಜ್ಞಾನಿಗಳು ಹೆಸರಿಸಿದ್ದಾರೆ.

ಚಾರ್ಲ್ಸ್ ಡಾರ್ವಿನ್ ಪ್ರಕಾರ ನೈಸರ್ಗಿಕ ಆಯ್ಕೆ ಒಂದು ಜೀವಿಯ ವ್ಯಕ್ತರೂಪದ ಘಟಕದ ಮೇಲೆ ಸಕ್ರಿಯವಾಗಿ ಕೆಲಸ ಮಾಡುತ್ತದೆ. ಆದರೆ ನೈಸರ್ಗಿಕ ಆಯ್ಕೆ ಜೀನ್ಸ್ ಮಟ್ಟದಲ್ಲಿ ನಡೆಯುತ್ತದೆ ಎಂದು ಡಾಕಿನ್ಸ್ ಹೇಳಿದ್ದಾರೆ. ಡಾಕಿನ್ಸ್‌ರ ಸಿದ್ಧಾಂತ ಹೀಗಿದೆ : ಜೀವಿಗಳು ಜೀನ್ಸ್‌ನ್ನು ಹೊತ್ತಿರುವ ರೊಬೋಟ್‌ಗಳು. ಜೀನ್‌ಗಳ ಪ್ರತಿರೂಪಗಳ ತಯಾರಿಕೆಯೇ ಜೀವಿಗಳ ಅಸ್ತಿತ್ವದ ಉದ್ದೇಶ. ಚಾರ್ಲ್ಸ್ ಡಾರ್ವಿನ್ ಪ್ರಕಾರ ಪರಿಸರದ ಪ್ರಭಾವ ಜೀವಿಯ ಮೇಲೆ ಸಂಪೂರ್ಣವಾಗಿ ಬೀಳುತ್ತದೆ. ಒಂದು ಜೀವಿಯ ದೇಹದಲ್ಲಿ ಜೀನ್ ಅಲ್ಲದೆ ಬಹಳಷ್ಟು ಮುಖ್ಯವಾದ ಇತರ ವಸ್ತುಗಳೂ ಇವೆ. ಹೀಗಾಗಿ ಗೂಲ್ಡ್‌ರವರು ಡಾಕಿನ್ಸ್‌ನ ಸಿದ್ಧಾಂತವನ್ನು ಒಪ್ಪಿಕೊಳ್ಳಲಿಲ್ಲ. ಗೂಲ್ಡ್‌ರ ಮತ್ತೊಂದು ಅನಿಸಿಕೆ ಹೀಗಿದೆ: ಜೀವಿಗಳ ಅಭಿವರ್ಧನ ಕಾಲದಲ್ಲಿ ಸೂಕ್ಷ್ಮ ಬದಲಾವಣೆಗಳಾದಾಗ ಅವುಗಳಲ್ಲಿ ರೂಪಶಾಸ್ತ್ರೀಯ ನವ್ಯತೆ ಕಂಡು ಬರುತ್ತದೆ. ಅಂದಿನ ಅಭಿವರ್ಧನ ಜೀವವಿಜ್ಞಾನಿಗಳು ಇದನ್ನೂ ಸ್ವಾಗತಿಸಲಿಲ್ಲ. ಏಕೆಂದರೆ, ಆಗ ಅಭಿವರ್ಧನ ಜೀವವಿಜ್ಞಾನದಲ್ಲಿ ಎಲ್ಲರಿಗೂ ಆನುವಂಶಶಾಸ್ತ್ರದ ಗೀಳು ಹಿಡಿದಿತ್ತು. ಗೂಲ್ಡ್ ಈ ವಿಷಯವನ್ನು ಕುರಿತು ಆಂಟೋಜನಿ ಮತ್ತು ಫೈಲೋಜನಿಯಲ್ಲಿ ಬರೆದಿದ್ದಾರೆ. ಸ್ಟೀಫನ್ ಜೆ. ಗೂಲ್ಡ್ ವಿಜ್ಞಾನದ ಹೆಸರಿನಲ್ಲಿ ಆಗಬಹುದಾದ ಕೆಡುಕನ್ನ ಎಂದೂ ಸಹಿಸುತ್ತಿರಲಿಲ್ಲ. ರಾಜಕೀಯ ಉದ್ದೇಶಕ್ಕೆ ಕಪಟ ವಿಜ್ಞಾನವನ್ನು ಸಾಧನವಾಗಿ ಉಪಯೋಗಿಸಿದ ತಕ್ಕ ಪಂಡಿತರನ್ನು ಅವರು ಅಸಾಧಾರಣ ಬುದ್ಧಿಶಕ್ತಿ ಮತ್ತು ವಾಗ್ವರಿಯಿಂದ ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ಗೂಲ್ಡ್‌ರಿಂದ ಛೀಮಾರಿ ಹಾಕಿಸಿಕೊಂಡ ಪ್ರಮುಖರಲ್ಲಿ ಬಲಪಂಥೀಯ ಸಮಾಜಶಾಸ್ತ್ರಜ್ಞ ಚಾರ್ಲ್ಸ್ ಮರ್ರೆ, ''ದ ಬೆಲ್ ಕರ್ವ್'' ಲೇಖಕ. ಈ ಪ್ರಬಂಧದ ಪ್ರಕಾರ ಕಪ್ಪು ಜನಾಂಗ, ಬಿಳಿಯ ಜನಾಂಗಕ್ಕಿಂತ ಬುದ್ಧಿಶಕ್ತಿಯಲ್ಲಿ ಕೀಳು, ಏಕೆಂದರೆ ಅವರ ಆನುವಂಶಿಕ ಕಣಗಳು ಕೀಳು ದರ್ಜೆಯವು ಹಾಗೂ ಇವರ ವೃದ್ಧಿ ಸಮಾಜಕ್ಕೆ ನಷ್ಟವುಂಟುಮಾಡಬಹುದು. ಈ ವಾದದ ಪರಿಣಾಮವಾಗಿ ಅಮೆರಿಕದ ರಾಜಕೀಯದಲ್ಲಿ ಕಪ್ಪು ಜನಾಂಗಕ್ಕಾಗಿ ಮೀಸಲಾಗಿಟ್ಟಿದ್ದ ಕ್ಷೇಮಾಭಿವೃದ್ಧಿ ಕಾರ್ಯಕ್ರಮಗಳಿಗೆ ಕಡಿತ ಉಂಟಾಗುವುದರಲ್ಲಿತ್ತು.

ಗೂಲ್ಡ್‌ರ ಇತ್ತೀಚಿನ ಮಹಾಕೃತಿ ''ದ ಸ್ಟ್ರಕ್ಚರ್ ಆಫ್ ಎವಲ್ಯೂಷನರಿ ಥಿಯರಿ'' ೨೦೦೨ರಲ್ಲಿ ಪ್ರಕಟವಾದಾಗ ಅವರು ''ನನಗೆ ಕ್ಯಾನ್ಸರ್ ಇದೆ ಎಂದು ತಿಳಿದ ಮೇಲೆ, ಈ ಕೃತಿಯನ್ನು ಬರೆದು ಮುಗಿಸುತ್ತೇನೆ ಎಂಬ ನಂಬಿಕೆ ನನಗಿರಲಿಲ್ಲ'' ಎಂದಿದ್ದರು. ೧೯೮೨ರಲ್ಲಿ ಗೂಲ್ಡ್‌ಗೆ ತಗುಲಿದ 'ಮಿಸೋಥೀಲಿಯೋಮಾ' ಎಂಬ ಕ್ಯಾನ್ಸರ್ ಕಲ್ನಾರಿಗೆ ಮೈ ಒಡ್ಡುವುದರಿಂದ ಬರಬಹುದು ಎಂಬ ನಂಬಿಕೆ ಇದೆ. ಗೂಲ್ಡ್ ಎದೆಗುಂದದೆ ಶಸ್ತ್ರಚಿಕಿತ್ಸೆಯಾದ ನಂತರ ಕೂಡಲೇ ಹಾರ್ವರ್ಡ್‌ನ ಮೆಡಿಕಲ್ ಪುಸ್ತಕಾಲಯಕ್ಕೆ ತೆರಳಿ ''ಮಿಸೋಥೀಲಿಯೋಮಾ'' ಬಗ್ಗೆ ಇದ್ದ ಎಲ್ಲ ಮಾಹಿತಿಯನ್ನು ಸಂಗ್ರಹಿಸಿದರು. ಅಲ್ಲಿನ ವೈದ್ಯಕೀಯ ಗ್ರಂಥಗಳಲ್ಲಿ ನಿಯತಕಾಲಿಕೆಗಳಲ್ಲಿ ನಿರೂಪಿಸಿದ್ದನ್ನು ಯಾರೇ ಓದಿದ್ದರೂ ಹೆದರಿ ಕಂಗಾಲಾಗುತ್ತಿದ್ದರು.

ಕ್ಯಾನ್ಸರ್ ಕಾಯಿಲೆಯೊಡನೆ ಸೆಣಸಾಡಿ ಜಯಗಳಿಸಲು ಬೇಕಾದ ಗೆಲುವಿನ ವ್ಯಕ್ತಿತ್ವ, ಸ್ಥೈರ್ಯ ಮತ್ತು ಮನೋಶಕ್ತಿ ಗೂಲ್ಡ್‌ರಲ್ಲಿತ್ತು. ಒಮ್ಮೆ ಗೂಲ್ಡ್ ಹೀಗೆ ಹೇಳಿದ್ದುಂಟು : ''ಬದುಕುವುದಕ್ಕೆ ಒಂದು ಕಾಲವಾದರೆ, ಸಾಯುವುದಕ್ಕೂ ಒಂದು ಕಾಲವಿದೆ. ನನ್ನ ಸರದಿ ಬಂದಾಗ ನಾನು ಅದನ್ನು ಶಾಂತವಾಗಿ ನನ್ನದೇ ಆದ ರೀತಿಯಲ್ಲಿ ಎದುರಿಸುತ್ತೇನೆ.'' ಸ್ನೇಹಿತರೊಬ್ಬರು ಇವರಿಗೆ ಉದರದ ಮಿಸೋಥೀಲಿಯೋಮಾ ಕ್ಯಾನ್ಸರ್ ಇದೆ ಎಂದು ತಿಳಿದ ಬಳಿಕ ಗೂಲ್ಡ್ ಬದುಕಿರುವಾಗಲೇ ಶ್ರದ್ಧಾಂಜಲಿಯನ್ನು ಬರೆದರು. ಈ ಸುದ್ದಿ ವಿನೋದ ಪ್ರಿಯರಾದ ಗೂಲ್ಡ್‌ರ ಮನರಂಜಿಸಿತು. ''ನನ್ನ ಮರಣದ ಸುದ್ದಿ ನಿಜವಾಗಲೂ ಒಂದು ಅತಿಶಯೋಕ್ತಿ'' ಎಂದರು. ಕ್ಯಾನ್ಸರ್ ರೋಗ ತಗುಲಿದ ನಂತರವೂ ಗೂಲ್ಡ್, ಇಪ್ಪತ್ತು ವರ್ಷ ಉತ್ಸಾಹದಿಂದ ಉಪಯುಕ್ತ ಜೀವನವನ್ನು ನಡೆಸಿದರು. ಇವರ ಸಹ ವಿಜ್ಞಾನಿಗಳು ಸ್ಟೀಫನ್ ಗೂಲ್ಡ್‌ರನ್ನು ''ದ ಬುಲ್‌ಡಾಗ್ ಆಫ್ ಎವಲ್ಯೂಷನರೀ ಬಯಾಲಜಿ'' ಎಂದು ಕರೆದಿದ್ದಾರೆ.

ಡಾ|| ವೀಣಾ ರಾವ್
ನಂ. ಜಿ-೯, ಬ್ರಿಗೇಡ್ ಪಾರ್ಕ್ ವ್ಯೂ, ಬಿ. ಪಿ. ವಾಡಿಯಾ ರಸ್ತೆ
ಬಸವನಗುಡಿ, ಬೆಂಗಳೂರು - ೫೬೦ ೦೦೪

## ಡಾ|| ಗೌರೀಶ ಕಾಯ್ಕಿಣಿ



ನಿಧನ : ೧೭-೧೧-೦೨

೯೧ರ ಹರೆಯದಲ್ಲಿ ಕಣ್ಮರೆಯಾದ ಗೌರೀಶ ಕಾಯ್ಕಿಣಿಯವರು ತಮ್ಮ ಕಾವ್ಯ, ನಾಟಕ, ಗೀತ ನಾಟಕ ಮತ್ತು ವಿಮರ್ಶಾ ಕೃತಿಗಳಿಂದ ಕನ್ನಡ ಸಾಹಿತ್ಯಕ್ಕೆ ಹೊಸ ಜೀವಂತಿಕೆಯನ್ನು ತುಂಬಿದ ಶ್ರೇಷ್ಠ ಸಾಹಿತಿ. ಮಾರ್ಕ್ಸ್‌ವಾದ ಮತ್ತು ವೈಚಾರಿಕತೆಗಳಿಂದ ಆಳವಾಗಿ ಪ್ರಭಾವಿತರಾದ ಕಾಯ್ಕಿಣಿಯವರು ಕನ್ನಡ ಸಾರಸ್ವತ ಲೋಕವನ್ನು ತಮ್ಮದೇ ಆದ ಛಾಪಿನಿಂದ ಶ್ರೀಮಂತಗೊಳಿಸಿದರು. ತಮ್ಮ ಚಿಂತನೆಗಳಲ್ಲಿ 'ಪ್ರಶ್ನೆ'ಗೆ ಆದ್ಯತೆ ಕೊಟ್ಟವರು ಅವರು. ಮೂಲಭೂತವಾದ, ಮತಾಂಧತೆಗಳನ್ನು ಧಿಕ್ಕರಿಸಿದವರು. ಅವರ ನಿಷ್ಠುರತೆ, ಬದ್ಧತೆ ಮತ್ತು ಮುನ್ನೋಟಗಳು ಯಾವತ್ತಿಗೂ ಸ್ಫೂರ್ತಿದಾಯಕವಾಗಿರುತ್ತವೆ.

'ಹೊಸತು'ವಿನ ಮೇ ೨೦೦೧ರ ಸಂಚಿಕೆಯಲ್ಲಿ ದಿವಂಗತರೊಡನೆ ಶ್ರೀ ಆರ್. ವಿ. ಭಂಡಾರಿಯವರು ನಡೆಸಿಕೊಟ್ಟ ಸಂದರ್ಶನವನ್ನು ಪ್ರಕಟಿಸಲಾಗಿದೆ. ಇವರು ಮರಾಠಿಯಿಂದ ಕನ್ನಡಕ್ಕೆ ಅನುವಾದಿಸಿದ ಎಸ್. ಜಿ. ಸರದೇಸಾಯಿಯವರ 'ಭಾರತೀಯ ತತ್ವಜ್ಞಾನ - ವೈಚಾರಿಕ ಮತ್ತು ಸಾಮಾಜಿಕ ಸಂಘರ್ಷ' ಹಾಗೂ ಅವರೇ ರಚಿಸಿದ 'ಲೋಕಾಯತ' ಎಂಬ ಕೃತಿಗಳನ್ನು ನವಕರ್ನಾಟಕ ಪ್ರಕಟಿಸಿದೆ. ನಮ್ಮನ್ನಗಲಿದ ಶ್ರೀ ಕಾಯ್ಕಿಣಿಯವರಿಗೆ 'ಹೊಸತು' ಗೌರವ ಸೂಚಿಸುತ್ತದೆ.

# ನಭದಲ್ಲೊಂದು ಮತ್ಸ್ಯಾಲಯ



**ಮ**ಳೆಯಿಂದ ಶುಭ್ರವಾದ ಆಕಾಶ ನೀಲಿಬಣ್ಣದಿಂದ ಕಂಗೊಳಿಸುವ ತಿಂಗಳು ಇದು. ಅಲ್ಲೊಂದು ಇಲ್ಲೊಂದು ಬಿಳಿಯ ಮೋಡದ ತುಣುಕುಗಳು ಕಂಡರೂ ಅವು ನೀಲಿಬಣ್ಣದ ಹರವಿಗೆ ಶೋಭೆಯನ್ನು ಹೆಚ್ಚಿಸುತ್ತವೆಯೇ ಹೊರತು ಮಳೆಯನ್ನೇನೂ ತರುವುದಿಲ್ಲ. ಅವು ಚಂದ್ರನ ಮುಂದೆ ಹಾದು ಹೋದಾಗ ಚಂದ್ರನ ಸುತ್ತ ಪ್ರಭಾವಳಿಯೊಂದು ಮೂಡುತ್ತದೆ. ಸೂಕ್ಷ್ಮವಾಗಿ ಗಮನಿಸಿದಾಗ ಕಾಮನಬಿಲ್ಲಿನ ಏಳೂ ಬಣ್ಣಗಳು ಅಲ್ಲಿ ಕಾಣುತ್ತವೆ.

ಈಗ ನಾವು ಚಳಿಗಾಲದ ಮಧ್ಯಕ್ಕೆ ಬಂದಿದ್ದೇವೆ. ಸಂಜೆ ಬೇಗ ಕತ್ತಲು ಕವಿಯುತ್ತದೆ ಎಂಬ ಅಂಶವೂ ಗಮನಕ್ಕೆ ಬರುತ್ತದೆ. ಭೂ ಗೋಳದ ಉತ್ತರದಲ್ಲಿರುವ ನಮಗೆ ಈ ಅನುಭವವಾದರೆ ಆಫ್ರಿಕಾ, ಆಸ್ಟ್ರೇಲಿಯಾಗಳಲ್ಲಿ ಬೇಸಿಗೆಯ ಸಂಭ್ರಮ. ೨೨ರಂದು ಸೂರ್ಯ ದಕ್ಷಿಣದ ಗರಿಷ್ಠ ಬಿಂದುವನ್ನು ಮುಟ್ಟುವ ದಿನ. ಅಂದಿನಿಂದ ಉತ್ತರಕ್ಕೆ ಹೊರಡುವಂತೆ ಕಾಣುವುದರಿಂದ ಉತ್ತರಾಯಣ ಎಂಬ ಹೆಸರು ಉಚಿತವಾಗಿಯೇ ಇದೆ. ಆ ರಾತ್ರಿ ಗರಿಷ್ಠ ಅವಧಿಯದು. ಈ ತಿಂಗಳಿನ ಎಲ್ಲ ರಾತ್ರಿಗಳೂ ದೀರ್ಘವೇ ಆದದ್ದರಿಂದ ಮತ್ಸ್ಯಾಲಯಕ್ಕೆ ಭೇಟಿ ಕೊಡಲು ಸುಸಮಯ.

ಎಲ್ಲಿದೆ ಮತ್ಸ್ಯಾಲಯ? ಸಂಜೆ ಕತ್ತಲು ಕವಿದ ಕೂಡಲೇ ತಲೆ ಎತ್ತಿ ನೋಡಿ. ಅಲ್ಲಿ ನೀವು ಗುರುತಿಸುವ ನಕ್ಷತ್ರ ಪುಂಜಗಳು ಯಾವುವು? - ಪಶ್ಚಿಮದ ಅಂಚಿನಲ್ಲಿ ಮಕರ (ಇದರ ಅರ್ಧ ಶರೀರ ಮೀನಿನದು; ಇನ್ನರ್ಧ ಹೋತನದು) ಅದರ ಪಕ್ಕದ ಕ್ಷೀಣ ಪುಂಜವೇ ಕುಂಭ. ಮುಂದಿನದು ಮೀನ - ಇದರಲ್ಲಿ ಎರಡು ಮೀನುಗಳಿವೆ. ಪೆಗಸಸ್ (ರೆಕ್ಕೆಯಿರುವ ಕುದುರೆ) ಯ ಎರಡೂ ಪಕ್ಕಗಳಲ್ಲಿರುವ ಇವನ್ನು ಚೌಕದ ನೆರವಿನಿಂದ ಗುರುತಿಸಬಹುದು. ದಕ್ಷಿಣಕ್ಕೆ ತಿರುಗಿದಿರಾದರೆ ಅಲ್ಲಿ ವೈತರಣೀ ನದಿ (ಎರಿಡಾನಿಸ್). ಇನ್ನೊಂದು ಮೀನು - ದಕ್ಷಿಣ ಮೀನ ಎಂದದರ ಹೆಸರು. ಅದರ ಪಕ್ಕದಲ್ಲಿ ಬಕ




(Grus). ಇಷ್ಟೇ ಇಲ್ಲ ಪಶ್ಚಿಮದ ಅಂಚಿನ ಅಕ್ವಿಲಾ (ಗರುಡ)ದ ಪಕ್ಕ ಸಣ್ಣ ಮೀನು ಡಾಲ್ಫಿನ್ (ಡೆಲ್ಫಿನಸ್). ಇದನ್ನು ಮತ್ಸ್ಯಾಲಯ ಎನ್ನದೇ ಬೇರೇನೆಂದು ಕರೆಯೋಣ?

ಈ ಮತ್ಸ್ಯಾಲಯದ ಮುಖ್ಯ ಆಕರ್ಷಣೆ ತಿಮಿಂಗಲ. ಮೀನ ರಾಶಿಯ ಮೀನುಗಳ ಬಳಿಯೇ ಈ ಪುಂಜವಿದೆ. ಇದರ ಪಾಶ್ಚಾತ್ಯ ಹೆಸರು ಸೆಟಸ್ ಎಂದು. ಪ್ರಾಚೀನ ಖಗೋಳ ವಿಜ್ಞಾನ ಪುಸ್ತಕಗಳಲ್ಲಿ ಇದನ್ನು ''ಸಾಗರ ದೈತ್ಯ'' ಎಂದು ಉಲ್ಲೇಖಿಸಿದೆ. ಕೆಲವು ಪುರಾತನ (ಪಾಶ್ಚಾತ್ಯ) ವರ್ಣಚಿತ್ರಗಳಲ್ಲಿ ಇದರ ಕಲ್ಪನೆ ವೈವಿಧ್ಯಮಯವಾಗಿದೆ. ಬಾಯಿಯನ್ನು ಅಗಲವಾಗಿ ಹಿಗ್ಗಿಸಿ, ಕೋರೆ ಹಲ್ಲುಗಳನ್ನು ಪ್ರದರ್ಶಿಸುವ ರೂಪ ಒಂದರಲ್ಲಿದೆ. ಸೀಲ್ ಎಂಬ ಸಮುದ್ರ ಜೀವಿಯನ್ನು ಹೋಲುವ ರೂಪ ಇನ್ನೊಂದರಲ್ಲಿ, ಮೀನಿನ ಶರೀರವಿದ್ದು ಗಿಡುಗನ ಕೊಕ್ಕು, ಹಾವಿನ ಸೀಳು ನಾಲಿಗೆಯ ಚಿತ್ರಣಗಳೂ ಇವೆ. ಒಟ್ಟಿನಲ್ಲಿ ಇದೊಂದು ಕ್ರೂರ ಜಂತು. ಕ್ರೂರ ಏಕೆ ? ಇದಕ್ಕೊಂದು ಪೌರಾಣಿಕ ಹಿನ್ನಲೆ ಇದೆ.

ಜಂಭಗಾತಿ ಮಹಾರಾಣಿ ಕಾಸಿಯೋಪಿಯಾ, ಮಹಾರಾಜ ಸಿಫಿಯಸ್ ಇವರ ಏಕಮಾತ್ರ ಪುತ್ರಿ - ಚೆಲುವೆ ಆಂಡ್ರೋಮಿಡಾ. ತಾಯಿಯ ಅಹಂಕಾರವನ್ನು ಮೆಟ್ಟಲು (ರಾಜಕೀಯ) ಷಡ್ಯಂತ್ರ(!) ರೂಪುಗೊಂಡಿತು. ಸೆಟಸ್ ಎಂಬ ಸಾಗರ ದೈತ್ಯದ ಸೃಷ್ಟಿಯಾಯಿತು. ಅದರ ಹಾವಳಿಗೆ ತತ್ತರಿಸಿದ ಪ್ರಜೆಗಳು ರಾಜನಲ್ಲಿ ಮೊರೆ ಇಟ್ಟರು. ಸಂಧಾನ ನಡೆಯಿತು. ರಾಜಕುಮಾರಿಯನ್ನು ಆಹುತಿ ಕೊಟ್ಟಲ್ಲಿ ದೈತ್ಯನಿಗೆ ತೃಪ್ತಿಯಾಗುವುದೆಂದು ಒತ್ತಡ ತಂದಾಗ, ರಾಜ, ರಾಣಿ ಮಣಿಯಲೇಬೇಕಾಯಿತು. ಆಂಡ್ರೋಮಿಡಾಳನ್ನು ಸಮುದ್ರ ದಂಡೆಯ ಬಂಡೆಗಳಿಗೆ ಸರಪಳಿಗಳಿಂದ ಬಿಗಿದು ಕಟ್ಟಲಾಯಿತು. ಆಗ ಹಾರುವ ಕುದುರೆಯ ಮೇಲೆ

ಡಾ|| ಬಿ. ಎಸ್. ಶೈಲಜಾ

ಹೋಗುತ್ತಿದ್ದ ವೀರ ಪರ್ಸಿಯಸ್ ಕೆಳಗಿಳಿದ. ಅವನ ಕೈಲಿದ್ದದ್ದು ಮಾಟಗಾತಿ ಮೆಡುಸಾಳ ತುಂಡರಿಸಿದ ತಲೆ. ಅದನ್ನು ನೋಡಿದವರು ತಕ್ಷಣವೇ ಕಲ್ಲಾಗಿಬಿಡುವರೆಂಬ ವರವನ್ನು ಮೆಡುಸಾ ಪಡೆದಿದ್ದಳು. ಜಾಣತನದಿಂದ ಆಕೆಯನ್ನು ನೋಡದೇ ತಲೆಯನ್ನು ತುಂಡರಿಸಿದ್ದ ಪರ್ಸಿಯಸ್. ಆಂಡ್ರೋಮಿಡಾಳನ್ನು ರಕ್ಷಿಸಲು ಆತ ಮೆಡುಸಾಳ ತಲೆಯನ್ನು ಸೆಟಸ್ ದೃಷ್ಟಿಗೆ ಹಿಡಿದ. ಕಲ್ಲಾದ ಅದು ಸಮುದ್ರದಾಳಕ್ಕೆ ಮುಳುಗಿತು. ಇದು ಕಥೆ. ಈ ಕಥೆಯ ಪಾತ್ರಗಳೆಲ್ಲಾ ಈಗ ಸಂಜೆಯ (ಆಗಸದ) ರಂಗಭೂಮಿಯಲ್ಲಿವೆ. ಇಂಗ್ಲಿಷ್ W ಅಕ್ಷರದ ಆಕಾರದ ಕ್ಯಾಸಿಯೋಪಿಯಾ (ಕುಂತಿ) ಉತ್ತರದಲ್ಲಿ ಸ್ಪಷ್ಟವಾಗಿ ಕಾಣುವುದು. ಅದರ ಆಸುಪಾಸಿನಲ್ಲೇ ಪೆಗಸಸ್, ಸಿಫಿಯಸ್, ಪರ್ಸಿಯಸ್, ಆಂಡ್ರೋಮಿಡಾ (ನಕುಲ, ಯುಧಿಷ್ಠಿರ, ಅರ್ಜುನ, ದ್ರೌಪದಿ) ಕಾಣುತ್ತವೆ.



ತಿಮಿಂಗಲ ಮಾತ್ರ ರಾಜಕುಟುಂಬದಿಂದ ದೂರ ಇದೆ. ಡಿಸೆಂಬರ್ ೧೫ರಂದು ತಿಮಿಂಗಲ ಪುಂಜದ ಅತಿಪ್ರಕಾಶಮಾನ ನಕ್ಷತ್ರ (ಆಲ್ಫಾಸೆಟಸ್)ದ ಪಕ್ಕದಲ್ಲೇ ಚಂದ್ರನನ್ನು ಕಾಣಬಹುದು.

ಇನ್ನು ಚಂದ್ರ ಮತ್ತು ಗ್ರಹಗಳ ಬಗ್ಗೆ ತಿಳಿಯೋಣ. ಡಿಸೆಂಬರ್ ೪ರಂದು ಅಮಾವಾಸ್ಯೆ. ಸೂರ್ಯಗ್ರಹಣ ಏದೆ. ಚಂದ್ರನ ನೆರಳಿನ ಪಥ ಶ್ರೀಲಂಕಾಗಿಂತ ದಕ್ಷಿಣಕ್ಕೆ ಹಿಂದೂ ಮಹಾಸಾಗರದಲ್ಲಿ ಹಾದುಹೋಗಲಿದೆ. ಪೂರ್ಣ ಗ್ರಹಣದ ನೋಟ ಆಫ್ರಿಕಾದವರಿಗೆ ಸೂರ್ಯೋದಯ ದಲ್ಲಿ, ಆಸ್ಟ್ರೇಲಿಯಾದವರಿಗೆ ಸೂರ್ಯಾಸ್ತಕ್ಕೆ ಸ್ವಲ್ಪ ಮುಂಚೆ ದೊರಕುತ್ತದೆ.

ಹತ್ತೊಂಬತ್ತರಂದು ಹುಣ್ಣಿಮೆ. ಅಂದು ಚಂದ್ರನಿಂದ ಸ್ವಲ್ಪ ದಕ್ಷಿಣಕ್ಕೆ ಒರೈಯನ್ (ಮಹಾವ್ಯಾಧ) ಪುಂಜದ ಮೃಗಶಿರಾ ನಕ್ಷತ್ರ ಇರುತ್ತದೆ. ಆದ್ದರಿಂದ ಈ ತಿಂಗಳ ಹೆಸರು ಮಾರ್ಗಶಿರ. ಶನಿಗ್ರಹವನ್ನೂ ಚಂದ್ರನ ಪಕ್ಕ ಗುರುತಿಸಬಹುದು. ರಾತ್ರಿ ಸುಮಾರು ಒಂಭತ್ತು ಗಂಟೆಗೆ ಗುರುಗ್ರಹ ಉದಯಿಸುತ್ತದೆ. ದಿನೇ ದಿನೇ ಹೆಚ್ಚು ಪ್ರಕಾಶ ಪಡೆಯುತ್ತಿರುವ ಇದು ಸಿರಿಯಸ್ ನಕ್ಷತ್ರ (ಲುಬ್ಧಕ)ಕ್ಕಿಂತ ಪ್ರಕಾಶಮಾನವಾಗಿ ಕಾಣುತ್ತದೆ.

ಡಿಸೆಂಬರ್ ೧ರಂದು ಬೆಳಗಿನ ಜಾವ ಸಣ್ಣಗೆರೆಯಂತೆ ಕಾಣುವ ರೇಖಾಚಂದ್ರನನ್ನು ಹುಡುಕಿ. ಅದರ ಪಕ್ಕದಲ್ಲಿ ಫಳಗುಟ್ಟುವ ಶುಕ್ರ ಮತ್ತು ಕೆಂಪು ಬಣ್ಣದ ಮಂಗಳ ಕಾಣುವುವು. ಮುಂದಿನ ದಿನಗಳಲ್ಲಿ ಚಂದ್ರನ ಸಹಾಯವಿಲ್ಲದೇ ಅವುಗಳನ್ನು ಗುರುತಿಸುತ್ತಾ ಬನ್ನಿ. ಕ್ರಮೇಣ ಹತ್ತಿರವಾದಂತೆ ಕಾಣುವ ಅವು ಆರನೆಯ ತಾರೀಖಿನ ನಂತರ ಪುನಃ ದೂರ ಸರಿಯತೊಡಗುತ್ತವೆ. ತಿಂಗಳ ಕೊನೆಗೆ ೩೦ರಂದು ಪುನಃ ಚಂದ್ರ ಇವುಗಳ ನಡುವೆ ಕಾಣುತ್ತದೆ. ಬುಧಗ್ರಹ ತಿಂಗಳ ಕೊನೆಯಲ್ಲಿ ಸಂಜೆ ಪಶ್ಚಿಮದ ಅಂಚಿನಲ್ಲಿ ಕಾಣುತ್ತದೆ.

**ಖಗೋಳ ದಿನಚರಿ**

| ತೇದಿ | |
|---|---|
| ೧ | ಮಂಗಳ, ಶುಕ್ರ ಮತ್ತು ಚಂದ್ರ ಮೂರೂ ೨ ಡಿಗ್ರಿ ಕೋನದೊಳಗೆ |
| ೪ | ಅಮಾವಾಸ್ಯೆ (೧೩:೦೪) ಪೂರ್ಣ ಸೂರ್ಯಗ್ರಹಣ |
| ೬ | ಮಂಗಳ ಮತ್ತು ಶುಕ್ರ ಒಂದೂವರೆ ಡಿಗ್ರಿ ಕೋನದೊಳಗೆ |
| ೧೧ | ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಯಲ್ಲಿ) |
| ೧೨, ೧೩, ೧೪ | ಜೆಮಿನಿಡ್ ಉಲ್ಕಾವೃಷ್ಟಿ |
| ೨೦ | ಹುಣ್ಣಿಮೆ (ಬೆಳಗ್ಗೆ ೦೦:೪೦ಕ್ಕೆ) ಚಂದ್ರ, ಶನಿಗ್ರಹದ ಸಮೀಪ |
| ೨೧ | ಬುಧಗ್ರಹದ ಗರಿಷ್ಠ ಉತ್ತರ ಸಂಜೆ (ಪಶ್ಚಿಮ ದಿಗಂತದಂಚಿನಲ್ಲಿ) |
| ೨೩ | ಚಂದ್ರ ಮತ್ತು ಗುರು ಕನಿಷ್ಠ ಕೋನ |
| ೨೭ | ಚಾಂದ್ರಮಾಸದ ಕೊನೆಯಪಾದ (ಚಂದ್ರೋದಯ ನಡುರಾತ್ರಿಗೆ) |
| ೩೦ | ಚಂದ್ರ, ಮಂಗಳ ಮತ್ತು ಶುಕ್ರ ಕನಿಷ್ಠ ಕೋನದಲ್ಲಿ. |

ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ಹೈಕುಗಳು

ಡಾ॥ ಸರಜೂ ಕಾಟ್ಕರ್
'ಕಾವ್ಯ', ಬೆಳಗಾವಿ - ೧೬

ಕೊಳಲಿನಲಿ ಸೇರಿದ
ಗಾಳಿ
ಹಾಡಾಗಿ ಹೊರಗೆ ಬಂತು





ಕಾಮನಬಿಲ್ಲು
ಏರಿಸಿದವನಿಗೆ
ಜಗವೆಲ್ಲ ಮರಳು



ಕಡು ಕತ್ತಲೆಯಲಿ
ಈ ಮಿಕ
ಏನನ್ನು ಹುಡುಕುತ್ತಿದೆ ?



ನಿನ್ನ ಮುಖ ನೋಡುತ್ತ ನೋಡುತ್ತ
ಯುಗಗಳನ್ನೇ ಕಳೆದೆ
ಕ್ಷಣ ಮಾತ್ರವೂ ನೀನು ನನ್ನ ನೋಡಲಿಲ್ಲ.

ನೀನೇ ನನ್ನ
ಆಕಾಶವೆಂದಾಗ
ಭೂಮಿಗೇಕೆ ಬಂತು ಸಿಟ್ಟು ?



ಮುಳುಗುವ ಸೂರ್ಯ
ಕಂತುವ ಸಂಜೆ
ಮನೆಗೆ ವಾಪಸ್ಸಾಗುವ ಪಕ್ಷಿಗಳ ಗುಂಪು





ಆಗಸದಲಿ ಹಾರುವ
ವಿಮಾನ ಕಂಡು
ದೊಡ್ಡ ಪಕ್ಷಿಯ ಹೆಣ ತೇಲುತಿದೆ ಎಂದಿತು ಹದ್ದು

# ಬೊಗಸೆಯೊಳಗಿನ ಮರಳು

■ ಗಣೇಶ ಹೊಸ್ಮನೆ



ಮಟಮಟ ಮಧ್ಯಾಹ್ನದ ▪ ಉರಿಬಿಸಿಲ ಹೊತ್ತಿನಲ್ಲಿ, ಅಲ್ಲಲ್ಲಿ ತೂತಾದ ಸೋಗೆ ಮಾಡಿನಡಿ ಇರುವ ಮುರುಕು ಕಟ್ಟೆಯ ಮೇಲೆ ಬೀಡಿ ಹಚ್ಚಿಕೊಂಡು ಪುಸುಪುಸುನೆ ಹೊಗೆ ಬಿಡುತ್ತ ಕುಕ್ಕುರುಗಾಲಲ್ಲಿ ಕುಳಿತಿದ್ದ ಮಂಜ. ಅಲ್ಲೇ ಪಕ್ಕದಲ್ಲಿ ಬಾಯಿತುಂಬ ತಂಬಾಕಿನ ಕವಳ ತುಂಬಿಕೊಂಡು 'ಗೊಕ್‌ಗೊಕ್' ಎನ್ನುತ್ತ ರೇಷನ್ ಅಕ್ಕಿ ಕೇರುತ್ತಿದ್ದ ಅವನ ಕಟ್ಟಿಕೊಂಡವಳು ''ಎಂಥಾ ಕೆಟ್ ಘಾಟೋ ಏನೋ, ಬರೀ ಧೂಳು. ಕಡ್ಮೆ ರೇಟ್ನಾಗ್ ಕೊಡ್ತೇಂವಿ ಹೇಳಿ ಸರ್ಕ್ಯಾರಾ ಕೊಡು ರೇಸನ್ ಅಕ್ಕ್ಯಾಗ್ ಅದೆಷ್ಟ್ ರ‍್ವಾಗ್ ಬರಾ ಪೌಡ್ರ್ ಐತೋ ಏನ...'' ಎಂದು ಗೊಣಗುತ್ತಿದ್ದಳು. ಅವರಿಬ್ಬರ ಮಕ್ಕಳಾದ ದ್ಯಾವಾ, ತಿಮ್ಮಾ, ದರ್‍ಮ, ಚಂದ್ರಿ ಗರಟೆಯಲ್ಲಿ ಮರಳು ತುಂಬಿಕೊಂಡು ಅಡುಗೆ ಆಟ ಆಡುತ್ತಿದ್ದರು. ಹಿರಿಯ ಮಗ ದ್ಯಾವನಿಗೆ ಎಂಟು ವರ್ಷ ವಯಸ್ಸು. ಉಳಿದವರಿಗೆಲ್ಲ ತಲಾ ಒಂದೊಂದು ವರ್ಷ ಅಂತರವಿತ್ತು.

ಕಟ್ಟೆಯ ತುದಿಯಲ್ಲಿ ಕುಳಿತಿದ್ದ ಮಂಜನ ಬೀಡಿ ಆರಿಹೋಗಿ ''ತ್ಚೂ... ಎಲ್ಲಾ ಡೂಪ್ಲಿಕೇಟು. ಬೀಡಿನೂ ಮದ್ಲಿನ್ ಹಾಂಗ್ ಬರಾದಿಲ್ಲ.'' ಎನ್ನುತ್ತ ಮತ್ತೊಂದು ಬೀಡಿ ಹಚ್ಚಿ ಬಾಯಿಗಿರಿಸಿಕೊಂಡು ಗೆದ್ದಲು ಹಿಡಿದ ಕಂಬಕ್ಕೆ ಆತುಕೊಂಡು ಕಣ್ಣುಮುಚ್ಚಿದ. ''ಇವತ್ತು ಇಪ್ಪತ್ತೊಂದು ಬರಾದ್ ಗ್ಯಾರೆಂಟಿ. ಅದಲ್ದೆ ಹೋದ್ರೆ ಹನ್ನೆರ್ಡ್ ಬರಾದ್ ನಿಕ್ಕೀ...'' ಎಂದು ಮನಸ್ಸಿನಲ್ಲೇ ಸಾವಿರದ ಒಂದನೇ ಬಾರಿ ಹೇಳಿಕೊಂಡ. ಹೆಂಡತಿಯ ಕಿವಿಯಲ್ಲಿದ್ದ, ಅವಳ ತೌರುಮನೆಯಲ್ಲಿ ಕೊಟ್ಟಿದ್ದ ಎರಡಾಣೆ ತೂಗುವ ಚಿನ್ನದ ಕುಡುಕನ್ನು ಪಾಂಡುರಂಗ ಸೆಟ್ಟಿಯ ಬಳಿ ಅಡಾ ಇಟ್ಟು ಹನ್ನೆರಡು ಮತ್ತು ಇಪ್ಪತ್ತೊಂದು ನಂಬರಿಗೆ ತಲಾ ಇನ್ನೂರು ರೂಪಾಯಿಯಂತೆ 'ಕುಟ್ಟ'ನ ಅಂಗಡಿಯಲ್ಲಿ ಅವನು ಇವತ್ತು ಒಸಿ ಆಡಿ ಬಂದಿದ್ದ. ಅಷ್ಟು ನಿಖರವಾಗಿ ಅವನಿಗೆ ಆ ನಂಬರು ಹೊಳೆಯಲು ಹೆಂಡತಿಗೆ ಬೆಳಗಿನ ಝಾವ ಕಂಡ ಕನಸೇ ಕಾರಣವಾಗಿತ್ತು. ಬೆಳಿಗ್ಗೆ ಚಾಕಣ್ಣು ಕುಡಿವಾಗಲೇ ಅವಳು ಅದನ್ನು ಮಂಜನಿಗೆ ಹೇಳಿದ್ದಳು. ''ಇವತ್ತು ಒಸಿ ಕಟ್ಟಾದಾರ್ ಕಟ್ಟಿ. ನಂಬರಿನ್ ಕನ್ಸ್ ಕಂಡೈತೆ. ಖರೆ ಬರ್‍ದೆ ಹೋಗಾದೇ ಇಲ್ಲ. ನಾ ಅವ್ನ ಮನೀಗ್ ಹೋದಾಂವಾ ಸಿವಳ್ಳನೆ ಬಸ್ಸಿಗ್ ಪರತ್ ಬರ್‍ತಾ ಇದ್ನಾ... ಕಂಡಕ್ಟರಂಗೆ ಇನ್ನೂ ಟಿಕೇಟಿಗೆ ದುಡ್ಡೇ ಕೊಡ್ಲಾಗಿತ್ತು. ಅವ್ನೇ ನನ್ ಹತ್ರ ಬಂದು ಟಿಕೇಟ್ ಕೊಟ್ಟು ಮೇಲಿಂದ ಒಂದ್ ಇಪ್ಪತ್ತು ರೂಪೈ ನೋಟು ಮತ್ತೊಂದು ಒಂದ್ ರೂಪೈ ಪಾವ್ಲಿ ಕೊಟ್ಟ... ನಾ ಸುಮ್ಮುಗ್ ತಗಂಡು ಇಟ್ಗಬುಟ್ಟೆ..'' ಎಂದು ತನ್ನ ಕನಸಿನ ವೃತ್ತಾಂತವನ್ನು ವಿವರಿಸಿದ್ದಳು. ''ಹಂಗಾರೇ, ಇವತ್ತು ಇಪ್ಪತ್ತೊಂದ್ ಬರಾದ್ ಗ್ಯಾರೆಂಟಿ, ತಪ್ಪೀರೆ ಹನ್ನೆರ್ಡ್ ಬತ್ತೈತೆ..'' ಎಂದು ಆಗ ಮಂಜ ಮೊದಲನೇ ಬಾರಿ ಹೇಳಿದ್ದ. ಆದರೆ ಇವತ್ತು ಅವನ ಬಳಿ ಒಂದೆರಡು ರೂಪೈ ಪುಡಿಗಾಸು ಬಿಟ್ಟರೆ ಕೈಯಲ್ಲಿ ದುಡ್ಡಿರಲಿಲ್ಲ. ''ಥತ್, ನಿನ್ನೆ ಆ ಕೆರ‍್ಯಾನ್ ಸಂತಿಗ್ ಪ್ಯಾಟಿಗ್ ಹೋಗಿ, ಹೆಂಡಾ ಕುಡ್ದು ಮುನ್ನೂರ್ ರೂಪೈ ಖರ್ಚಾತು... ಮದ್ಲೆ ಗೊತ್ತಿದ್ರೆ ಅದ್ನೆ ಉಳಿಸ್ಕಂಡು ಒಸಿ ಆಡಕ್ಕಾಗಿತ್ತು...ನೂರೇ ಕಟ್ಟಿದ್ರೂ ಎಂಟ್ಸಾವಿರ್ ರೂಪೈ ನೆಗ್ದ್ ಬೀಳ್ತಿತ್ತು.'' ಎಂದು ಖರಾರುವಾಕ್ಕಾಗಿಯೇ ಲೆಖ್ಖ ಮಾಡಿ ಹಲುಬಿಕೊಂಡಿದ್ದ. 'ಎಂಟು ಸಾವಿರ' ಎಂಬ ಮಾತು ಕೇಳಿ ಒಂದು ಘಳಿಗೆ ಅದನ್ನು ಪಡೆದಷ್ಟೇ ಸಂತೋಷ ಅನುಭವಿಸಿದ ಅವನ ಹೆಂಡತಿ, ಆಡಲು ದುಡ್ಡಿಲ್ಲ ಎಂಬುದೂ ನೆನಪಾಗಿ ಅಲವತ್ತುಕೊಂಡಳು. ''ನಿಮ್ಮ ಕೈಯ್ಯಾಗ್ ಯಾವಾಗ ದುಡ್ಡಿರ್‍ತೈತೆ ? ನಾಕ್ ಕಾಸು ಕೈಲಿತ್ತು ಅಂದ್ರೆ ಬೀಡಿ ಸೇದಿ ಹೆಂಡಾಕುಡ್ದು ಎಲ್ಲಾ ಖರ್ಚ್ ಮಾಡ್ಕುಂತೀರಿ... ವಾರಕ್ಕೊಂದಿನಾ ಕೆಲ್ಸಾ ಮಾಡಾದು, ಆರ್‌ದಿನಾ ಕುಡ್ಕುಂಡ್ ತಿರ್‍ಗಾದು... ಈ ವರ್ಸಾ ನಾ ಅಡ್ಕೆ ಸುಲ್ದಿದ್ದು ಹನ್ನೆರ್ಡ್ ನೂರ್ ರೂಪೈ ಆಗಿತ್ತು... ಅಷ್ಟೂ ನೀವೇ ತಗಂಡ್ಬಂದ್ ಖರ್ಚ್ ಮಾಡಿದ್ರಿ... ಅದ್ರಾಗ್ ಒಂದ್ ರೂಪೈ ಆದ್ರೂ ನನ್ ಕೈ ಸೇರ್‍ತಾ ? ನಂಗೆ ನನ್ ಮಕ್ಳಿಗೆ ಒಂಚೂರು ಬಟ್ಟೆಬರೆನೂ ತಂದಿದ್ದಿಲ್ಲಾ... ನಮ್ಗ್ ಹೋಗ್ಲಿ, ನಿಮ್ ಪಂಚೆ ಸರ್ಟು ನೋಡಿ. ಹರ್‍ದು ಮೂರಾ ಬಟ್ಟೆ ಆಗ್ಯೆತೆ... ಅದ್ನೆ ತೊಡ್ಗಂಡು ಪ್ಯಾಟೀಗ್ ಹೋತೀರಿ... ಇಸ್ಕೂಲಿಗ್ ಹೋಗ ಆ ಹುಡ್ಗುರಿಗ್ ಒಂದ್ ಘನಾ ಪಾಟೀ ಚೀಲ ಇಲ್ಲ... ಚಪ್ಪಲಿಗೂ ಗತಿ ಇಲ್ಲ... ಮಳೆಗಾಲ್ದಾಗ್ ಸೂಡ್ಕುಂಡ್ ಹೋಗಾಕ್ ಕೊಡೆ ಸಾಯ್ಲಿ, ಒಂದ್ ಕಂಬ್ಳಿ ಚೊಪ್ಪಿಗೂ ಗತಿ ಇಲ್ಲ... ನಾಕೂ ಜನಾ ಗೋಣಿ ಹೊದ್ಕುಂಡು ಸಾಲೀಗ್ ಹೋಗಿ ಬಂದು ಮಾಡಿದ್ವು ಪಾಪ... ಎಂಥಾ ಹೇಳಾದು ? ಜಾಸ್ತಿ ಹೇಳಾಕ್ ಹೋದ್ರೆ ಮಕಾ ಮುಸುಡಿ ನೋಡ್ದೆ ಹೊಡಿತೀರಿ... ಕುಡ್ಕುಂಡ್ ಬಂದ್ರಿ ಅಂದ್ರೆ ದಯಾ ಇಲ್ಲ ಕರುಣೆ ಇಲ್ಲಾ... ಆ ದಿನಾ ಕತ್ತಿ ಹಿಮ್ಮಡಿಯಾಗ್ ಹೊಡ್ದಿದ್ದು... ಮರ್‍ದಿನಾ ಮುಖಾ ಎಲ್ಲಾ ಬಾತು ದಪ್ಪಗಾಗ್ಹೋಗಿತ್ತು... ಕಂಡ ವ್ರೆಲ್ಲಾ 'ನಾಗೀ ಎಂತಾ ಆತೇ ? ಮಕಕ್ ಎಂಥಾ ಆಗ್ಯೆತೆ?' ಅಂತ್ ಕೇಳಾವ್ರು... ನನ್ ಮನೆ ಮರ‍್ಯಾದಿ ನೋಡಿ, ಎಲ್ಲರ ಹತ್ರೂ 'ಕಡ್ಜೇನ್ ಕಚ್ತು' ಹೇಳಿ ಹೇಳಂತ ಬಂದೆ... ಎಲ್ಲಾ ನನ್ ಗ್ರಾಚಾರ...'' ಹೇಳುತ್ತ ಹೇಳುತ್ತ ಕಣ್ಣಲ್ಲಿ ನೀರು ತುಂಬಿ ಬಂದು, ಅದನ್ನು ಎದುರಿಗೆ ತೋರಿಸಿಕೊಳ್ಳಬಾರದೆಂದು ತಣ್ಣಗಾದ ಚಾವನ್ನು ಗಟಗಟನೆ ಕುಡಿದು ಅಲ್ಲಿಂದ ಸರಕ್ಕನೇ ಎದ್ದು ಹೋಗಿದ್ದಳು. ಆದರೆ ಮಂಜನ ಮನಸ್ಸಿನಲ್ಲಿ ಆ ಎರಡೂ ನಂಬರುಗಳು ಗಟ್ಟಿಯಾಗಿ ಬೇರೂರಿಬಿಟ್ಟಿದ್ದವಾದ್ದರಿಂದ ಹೆಂಡತಿಯನ್ನು ಹೇಗೋ ರಮಿಸಿ, ನಂಬಿಸಿ ಒಸಿಯ ಹಣ ಬಂದ ಕೂಡಲೇ ಬಿಡಿಸಿಕೊಂಡು ಬರುತ್ತೇನೆಂಬ ಭರವಸೆ ನೀಡಿ ಅವಳ ಕಿವಿಯ ಆಭರಣವನ್ನು ಕಿತ್ತುಕೊಂಡಿದ್ದ. ಸ್ವತಃ ಕೈಯಾರೆ ಕಳಚಿ ಕೊಟ್ಟಿದ್ದಳು. ಅವಳು ಹಾಗೆ ಕೊಡಲು ಕಾರಣವೇನೆಂದರೆ ಅವಳಿಗೂ 'ಒಸಿ'ಯ ಮೇಲೆ ತುಸು ನಂಬುಗೆಯಿತ್ತು. ಹಿಂದೆ ಹೀಗೆಯೇ ಒಂದು ಬಾರಿ ಅವಳಿಗೆ ಕಂಡ ಕನಸಿನ ಆಧಾರದ ಮೇಲೆಯೇ ನಾಲ್ಕು ರೂಪೈ ಒಸಿ ಕಟ್ಟಿದ್ದ ಮಂಜ, ಮುನ್ನೂರಿಪ್ಪತ್ತು ರೂಪಾಯಿಗಳನ್ನು ಗಳಿಸಿ ತಂದಿದ್ದ. ಆಗಲೇ ಅವಳಿಗೆ ಒಸಿಯಾಟದ ಬಗ್ಗೆ ಆಸಕ್ತಿ ಹುಟ್ಟಿ ಅದರ ಬಗ್ಗೆ ಅನೇಕ ವಿವರಗಳನ್ನು ತಿಳಿದುಕೊಂಡಿದ್ದಳು.

''ಒಂದ್ರುಪೈ ಒಸಿ ತಾಗ್ತು ಅಂದ್ರೆ ಎಂಬತ್ ರೂಪೈ ಕೊಡ್ತಾವಂತೆ. ಅಷ್ಟೂ ನಗ್ದಾನಗ್ದು ! ಹೆಬ್ಬೆಟ್ ಒತ್ಬೇಕು ಹೇಳಿಲ್ಲ, ಸೈ ಹಾಕ್ಬೇಕು ಹೇಳಿಲ್ಲ. ನಮ್ಗೆ ದಿನಾ ಇಡೀ ಜೀಂವಾ ಹಣ್ಣಾಗುವಂಗೆ ದುಡ್ದ್ರೂ ಸಿಗಾದು ಬರೀ ಮೂವತ್ ನಲ್ವತ್ ರೂಪ್ಯಾ. ಅದೂ ಒಡೇರ್ ಮುಂದೆ ನಿಂತ್ಕಂಡು ''ಸ್ವಲ್ಪ ದುಡ್ ಬೇಕಾಗಿತ್ತಾ...'' ಅಂತ ಗೋಗರಿಬೇಕು. ಅವ್ರು ಕೊಟ್ರೆ ಕೊಟ್ರು, ಇಲ್ಲಾಗಿರೆ ''ನಾಗಿ ಇವತ್ ದುಡ್ಡಿಲ್ವಲೇ, ನಾಳೆ ಪ್ಯಾಟೀಗ್ ಹೋಗ್ಬರ್‍ತೆ...

ನಾಡ್ಟಿಗ್ ಕೊಡ್ತೇನೆ ಆಗ್ದಾ'' ಅಂತಾರೆ. ಇನ್ ಸರ್ಕಾರಾ ಬಡೂರಿಗೆ ಅಂತ ಪಂಚಾಯ್ತಾದಾಗ್ ಏನಾರೂ ಕೊಡುದಿದ್ರೆ, ರೇಸನ್ ಕಾರ್ಡ್ ಮಾಡ್ಸೂದಿದ್ರೆ, ಫೋಟು ಹೊಡಿಸ್ಕ ಬರ್ಬೇಕು. ಬಿಲ್ಲು ಪಾವ್ತಿ ಎಂತೆಂತೋ ಎಲ್ಲಾ ತೆಗಿಸ್ಕ ಬರ್ಬೇಕು. ತಹಸೀಲ್ದಾರ್ರು ಸಾನ್‌ಭೋಗ್ರು ಅವ್ರತ್ರೆ ಇವ್ರತ್ರೆ ಎಲ್ಲ ಒಂದೈವತ್ ತಿರ್ಗಾಟಾ ಮಾಡಿ, ದಮ್ಮಯ್ಯಾ ದಾತಾರ ಹೇಳಿ, ನೂರೋ ಐವತ್ತೋ ಕೊಟ್ಟು ಕೈ ಬಿಶಿ ಮಾಡಿ... ತಗೂಬೇಕು. ಈ ಒಸಿ ನಾ ಯಾ ಪುಣ್ಯಾತ್ಮಾ ಮಾಡ್ಯಾನೋ ಏನೋ... ಒಂದ್ ಸಣ್ ಚೀಟ್ಯಾಗ್ ಬರೆಸ್ಕು ಬಂದ್ರಾತಂತೆ. ಅದೇ ನಂಬರ್ ಬಂದ್ರೆ ಚಂಜೀಗೇ ದುಡ್ ಸಿಕ್ತೈತೆ'' ಎಂಬೆಲ್ಲಾ ಅಭಿಪ್ರಾಯಕ್ಕೆ ಬಂದಿದ್ದ ಅವಳು, ಈ ಬಾರಿ ಒಸಿ ಹಣ ಬಂದಾಗ ಎಲ್ಲವನ್ನೂ ತನಗೇ ತಂದುಕೊಡಬೇಕೆಂಬ ಷರತ್ತು ಹಾಕಿ, ಗಂಡನಿಗೆ 'ಅಡಾ' ಇಡಲು ಕಿವಿಯ ಕುಡುಕನ್ನು ಕಳಚಿಕೊಟ್ಟಿದ್ದಳು.

ಅದನ್ನು ಪಾಂಡ್ರಂಗ ಸೆಟ್ಟಿಯ ಬಳಿ ಐನೂರು ರೂಪಾಯಿಗೆ ಅಡವಿಟ್ಟ ಮಂಜ, ನೂರು ರೂಪೈಯನ್ನು ಇವತ್ತಿನ ಎಣ್ಣೆ ಖರ್ಚಿಗೆಂದು ಉಳಿಸಿಕೊಂಡು ಉಳಿದುದನ್ನು ಒಸಿ ಕಟ್ಟಿ ಬಂದಿದ್ದ. ''ಮಂಜಾ ಎಂತಕ್ಕೋ ಇಷ್ಟೊಂದ್ ದುಡ್ಡು?'' ಎಂದು ಕೇಳಿದ ಸೆಟ್ಟರ ಬಳಿ, ತನ್ನ ಹೆಂಡತಿಯ ಕನಸಿನ ವೃತ್ತಾಂತವನ್ನು ವಿವರಿಸಿ 'ಇವತ್ತು ಇಪ್ಪತ್ತೊಂದು ಅಥ್ವಾ ಹನ್ನೆರ್ಡು ಗ್ಯಾರೆಂಟಿ' ಎಂದು ಹೇಳಿದ್ದ. ಅದನ್ನು ಕೇಳಿ ಸೆಟ್ಟರಿಗೂ ಸಣ್ಣ ಆಸೆ ಹುಟ್ಟಿ ಐವತ್ತು ರೂಪ್ಯಾ ಕೊಟ್ಟು ತನ್ನದೂ ಆಡುವಂತೆ ಹೇಳಿದ್ದರು. ಅಲ್ಲಿಂದ ಹೊರಬಿದ್ದು ಹೊರಡುತ್ತಿದ್ದಂತೆ ಊರ ದೇವಸ್ಥಾನದ ಅರ್ಚಕರಾದ ಗಣಪತಿಭಟ್ಟರು ದಾರಿಯಲ್ಲಿ ಸಿಕ್ಕಿ, ಎಲ್ಲಿಗೆ ಹೋಗಿದ್ದೆ ಏನು ಅಂತೆಲ್ಲ ವಿಚಾರಿಸಿದರು.

ಮತ್ತೆ ಮಂಜ ತನ್ನ ಹೆಂಡತಿಯ ಕನಸಿನ ವೃತ್ತಾಂತವನ್ನು ವಿವರಿಸಿ, ಇವತ್ತು ಬರಲಿರುವ ನಂಬರನ್ನು ಹೇಳಿ, ಅದನ್ನು ಆಡುವುದಕ್ಕಾಗಿ ತಾನು ಸೆಟ್ಟರ ಬಳಿ ಅಡಾ ಇಡಲು ಹೋದದ್ದು ಅವರೂ ಒಸಿಗೆ ಐವತ್ತು ರೂಪ್ಯಾ ಕೊಟ್ಟದ್ದು ಎಲ್ಲ ಬಿಡಿಸಿ ಬಿಡಿಸಿ ಹೇಳಿದ. ಅದನ್ನೆಲ್ಲ ಶ್ರದ್ಧೆಯಿಂದ ಕೇಳಿದ ಭಟ್ಟರು ಒಂದು ಕ್ಷಣ ಹೇಳಲೋ ಬೇಡವೋ ಎಂದು ಆಲೋಚಿಸಿ ''ಏ ಮಂಜಾ... ಆ ನಂಬರಿಗೆ ನಂದೂ ಐವತ್ ರೂಪ್ಯಾ ಆಡೋ.. ಯಾರಿಗೂ ನಾ ಒಸಿ ಆಡ್ದೆ ಅಂತ ಹೇಳಾಕ್ ಹೋಗ್ಬೇಡಾ... ಬಂತು ಅಂದ್ರೆ ನಾಳೆನೇ ದುಡ್ ತಂದ್ ಮುಟ್ಸುಬುಡು, ಸ್ವಲ್ಪ ದುಡ್ಡಿನ್ ಅಡ್ಚಣೆ ಐತೆ ಮಾರಾಯಾ'' ಎಂದು ಐವತ್ತರ ಎರಡು ನೋಟುಗಳನ್ನು ಕೊಟ್ಟಿದ್ದರು.

ಇಷ್ಟೇ ಅಲ್ಲದೆ ಮಂಜನ 'ಗ್ಯಾರೆಂಟಿ' ನಂಬರಿನ ವಿಷಯ ತಿಳಿದು ಬಿ. ಎ. ಓದುತ್ತಿರುವ ಹೆಗಡೇರ ಮಗ ನಾರಾಯಣ, ಜೋಯಿಸರ ಮಗ 'ವಿಶ್ವ', ತಾಮ್ರದ ಕೆಲಸ ಮಾಡುವ 'ಅಕ್ಬರ', ಬ್ಯಾಂಕ್ ನೌಕರಿಗೆ ಹೊರಟಿದ್ದ ಕೇಶವನಾಯ್ಕ ಇವರೆಲ್ಲರೂ ಗುಟ್ಟಾಗಿ ಅಷ್ಟಿಷ್ಟು ಹಣ ಕೊಟ್ಟು ಒಸಿ ಆಡಿ ನಂಬರ್ ಬಂದರೆ ಬೇಗ ಹಣ ತಲುಪಿಸಿಬಿಡಬೇಕೆಂದು ಮಂಜನಿಗೆ ಹೇಳಿದ್ದರು.

ಮಂಜ ಎಲ್ಲರಿಗೂ ಭರವಸೆ ನೀಡಿ 'ಕುಟ್ನ'ನ ಅಂಗಡಿಗೆ ಬಂದು ಒಸಿ ಕಟ್ಟುತ್ತಿರುವಾಗ, ಅಲ್ಲಿಯೇ ಇದ್ದ 'ಲೈನ್‌ಮ್ಯಾನ್ ರಾಬರ್ಟ್', 'ವೈನ್‌ಶಾಪ್ ಶಂಭುಲಿಂಗ', 'ಫಾರೆಸ್ಟ್ ಗಾರ್ಡ್ ರಾಮಯ್ಯ', 'ಎಕ್ಸೇಂಜ್ ಆಫೀಸ್ ದಿವಾಕರ', ಮತ್ತಿತರರು ಮಂಜ ಆಡುತ್ತಿರುವ ಅಮೌಂಟನ್ನು ಕಂಡು ಆಶ್ಚರ್ಯಚಕಿತರಾಗಿ ವಿಚಾರಿಸಿದಾಗ, ಮಂಜ ಮತ್ತೆ ಬೆಳಗಿನ ಝೂವದಲ್ಲಿ ತನ್ನ ಹೆಂಡತಿಗೆ ಕಂಡ ಕನಸಿನ ವೃತ್ತಾಂತವನ್ನು ವಿವರಿಸಿ ''ಇವತ್ತು ಹನ್ನೆರ್ಡು ಅಥ್ವಾ ಇಪ್ಪತ್ತೊಂದ್ ಬರಾದ್ ಗ್ಯಾರೆಂಟಿ'' ಎಂದು ಆಗ ಬಾಯ್ಬಿಟ್ಟು ನೂರನೇ ಸಲ ಹೇಳಿದ್ದ. ಅದನ್ನು ಕೇಳಿ ಅಲ್ಲಿದ್ದವರೆಲ್ಲ ತಾವೂ ಅದೇ ನಂಬರಿಗೆ ಐವತ್ತು-ನೂರು ಹಾಕಿದರು. ಅಷ್ಟರಲ್ಲೇ ಅಲ್ಲಿಗೆ ಬಂದು ವಿಷಯ ತಿಳಿದುಕೊಂಡ 'ಪೊಲೀಸ್ ಪೇದೆ ಹೊನ್ನಪ್ಪ' ಕಿಸೆಯಲ್ಲಿದ್ದ ನೂರರ ಆರು ನೋಟುಗಳನ್ನು ಎಸೆದು ''ಅದೆರ್ಡೂ ನಂಬರಿಗೆ ಸರಿಸರಿ ಹಾಕಿ ಬಿಡು, ನೋಡೋಣ ಮಂಜಂದು ನಮ್ದು ಲಕ್ ಹೆಂಗೈತೆ ಅಂತ'' ಎನ್ನುತ್ತ ಪೊಲೀಸ್ ಗತ್ತಿನಲ್ಲಿ ಸಿಗರೇಟ್ ಹಚ್ಚಿದ್ದ. ಕುಟ್ನನಿಗೆ ಇವತ್ತಿನ ಕಲೆಕ್ಷನ್ ಕಂಡು ಖುಷಿಯಾಗಿ ಅದಕ್ಕೆ ಕಾರಣನಾದ ಮಂಜನಿಗೆ ಒಂದು 'ಚಾ' ಕುಡಿಸಿ ಕಳಿಸಿದ್ದ.

*   *   *

ಸಂಜೆ ಐದೂವರೆ ಗಂಟೆ ಆಗಿಹೋಗಿತ್ತು. ಮಂಜ ಸರಸರನೆ ಕುಟ್ನನ ಅಂಗಡಿಯತ್ತ ಧಾವಿಸಿದ. ಅವನ ಆಲೋಚನೆಯಂತೆ ಇಪ್ಪತ್ತೊಂದು ನಂಬರ್ ಬಂದಿತ್ತು ! ಹೋದ ತಕ್ಷಣವೇ ಕುಟ್ನ ಹಣವನ್ನು ಎಣಿಸಿ ಎಣಿಸಿ ಕೊಟ್ಟ ಎಷ್ಟಿತ್ತೊ ಏನೋ?! ಮಂಜನಿಗೆ ಲೆಖ್ಖ ಮಾಡಲೂ ಸಾಧ್ಯವಿರಲಿಲ್ಲ. ಅದಷ್ಟನ್ನೂ ಪಂಚೆಯಲ್ಲಿ ಸುತ್ತಿಕೊಂಡು ಗುಟ್ಟಾಗಿ ಹೋಗಿ ತನ್ನ ಬಳಿ ಆಡಲು ಕೊಟ್ಟವರಿಗೆಲ್ಲ ಹಣವನ್ನು ಹಂಚಿದ. ಅವರೆಲ್ಲರೂ ಅವನಿಗೆ ನೂರು-ಐವತ್ತು ರೂಪಾಯಿಗಳನ್ನು ಬಹುಮಾನವಾಗಿ ವಾಪಸ್ಸು ಕೊಟ್ಟರು. ಮಂಜ ಕಟ್ಟಿದ ಹಣ ಈಗ ಹದಿನಾರು ಸಾವಿರವಾಗಿತ್ತು ! ಅದಷ್ಟನ್ನು ಕರಾರುವಾಕ್ಕಾಗಿ ಎಣಿಸಿ ಹೆಂಡತಿಯ ಕೈಗೆ ಒಪ್ಪಿಸಿ, ತನಗೆ ಬಹುಮಾನವಾಗಿ ಬಂದ ಹಣವನ್ನು ತೆಗೆದುಕೊಂಡು ವೈನ್‌ಶಾಪಿನತ್ತ ಹೆಜ್ಜೆ ಹಾಕಿದ. ಅಲ್ಲಿ ನೋಡಿದರೆ ಲೈನ್‌ಮ್ಯಾನು, ಪೊಲೀಸ್ ಪೇದೆ... ಮುಂತಾದ ಬಳಗವೆಲ್ಲ ಮಂಜನಿಗಾಗಿಯೇ ಕಾದಂತಿತ್ತು. ''ಬಾರೋ ಮಂಜಾ ನಿನ್ನಿಂದ ನಮ್ಗೆಲ್ಲ ಇವತ್ತು ಲಾಟ್ರೀ ಹೊಡ್ದಾಂಗಾಯ್ತು. ಎಷ್ಟ್ ಕುಡೀತೀಯೋ ಕುಡಿ... ಇವತ್ತು ನಾಳೆ ನೀನು ಎಷ್ಟೇ ಖರ್ಚ್ ಮಾಡಿದ್ರೂ ಅದ್ನೆಲ್ಲ ನಾವೇ ಕೊಡ್ತೇವೆ...'' ಮಂಜನಿಗೆ ಖುಶಿಯೋ ಖುಶಿ. ಎಲ್ಲರ ಜೊತೆಗೆ ಸೇರಿ ಕುಡಿದೇ ಕುಡಿದ. ಕೊನೆಗೆ ಟೇಪಿನಲ್ಲಿ 'ಮುಕ್ಕಾಲಾ...'' ಹಾಡನ್ನು ಹಾಕಿಕೊಂಡು ಎಲ್ಲರೂ ಕುಣಿಯತೊಡಗಿದಾಗ ತಾನೂ ಅವರ ಜೊತೆ ಕುಣಿದ.

''ಮಂಜಾ... ಮಂಜಾ...'' ಎಂದು ಯಾರೋ ಕರೆದು ಭುಜವನ್ನು ಅಲ್ಲಾಡಿಸಿದಾಗ ಕಟ್ಟೆಯ ತುದಿಯಲ್ಲೇ ಕುಳಿತು ನಿದ್ದೆ ಹೋಗಿದ್ದ ಮಂಜ ಥಟ್ಟನೆ ಎಚ್ಚರವಾಗಿ ಕಣ್ಣು ತೆರೆದ. ಎದುರಿಗೆ ವೈನ್‌ಶಾಪ್ ಶಂಭುಲಿಂಗ ನಿಂತಿದ್ದ. ''ಒಂದ್ ನಂಬರ್ನಾಗ್ ಹೋತಲ್ಲೋ ಮಂಜಾ.. ಇಪ್ಪತ್ತೊಂದು ಬರೋ ಬದ್ಲಿಗೆ ಮೂವತ್ತೊಂದ್ ಬಂತಂತೆ... ಅದೇ ನಂಬರ್ ಬಂದಿದ್ರೆ ಎಲ್ರಿಗೂ ದುಡ್ಡಾಕ್ತಿತ್ತು... ಹೋಗ್ಲಿ ಬಿಡು, ಸಾವ್ಕಾರ್ರು ಹೇಳಿಕಳ್ಸಿದ್ದಾರೆ... ನೀನು ಬರ್ಬೇಕಂತೆ... ಅದೇನೋ ಹಳೇಬಾಕಿ ಐತಂತಲ್ಲ...'' ಶಂಭುಲಿಂಗ ಹೇಳುತ್ತಲೇ ಇದ್ದ.

ಮಂಜ ತದೇಕಚಿತ್ತದಿಂದ ಅಂಗಳದಲ್ಲಿ ಆಡುತ್ತಿದ್ದ ಮಕ್ಕಳನ್ನು ನೋಡತೊಡಗಿದ್ದ. ಈಗ ಆ ನಾಲ್ವರೂ ಮಕ್ಕಳು ಅಡುಗೆಯ ಆಟ ಬಿಟ್ಟು, ಬೊಗಸೆಯೊಳಗೆ ಮರಳು ತುಂಬಿಕೊಂಡು, ಬೆರಳುಗಳ ಸಂದಿಯಿಂದ ಅದು ಜರ್ರನೆ ಜಾರಿಹೋಗುವ ಹೊಸ ಆಟವನ್ನು ಆಡತೊಡಗಿದ್ದರು.

**ಗಣೇಶ ಹೊಸ್ಮನೆ**
ಜಾನ್ಮನೆ - ೫೮೧೩೧೫ ಶಿರಸಿ (ಉ. ಕ.)

## ಹೆಣವಾಗಿದ್ದಾರೆ



ಹೌದು,
ದುಗುಡಗಳ ದುಪ್ಪಟಿ
ಹೊದ್ದ ಮನುಷ್ಯರಿಲ್ಲಿ
ಹೆಣವಾಗಿದ್ದಾರೆ.

ಅಲ್ಲಿ:
'ಅಲ್ಲಾ ಹೋ' ನ
ಹಜಾನಿನ ಧ್ವನಿಗೂ
ಖರ್ಜೂರದ ನಿಶೆ.
ಕೊನೆಗೂ ಮೂಡೇಬಿಟ್ಟ
ಹಿಂದೂಖುಷ್ ಪರ್ವತಗಳಲ್ಲಿ
ಕೆಂಪು ಗಾಯದ ಚಂದ್ರ !

ಇಲ್ಲಿ
ಗೋಧೂಳಿಯ ಸಂಜೆಗೂ
ಕೂಡ, ದಳ್ಳುರಿಯ ಕಾವು.
ಸೆಳವು ಕಳೆದುಕೊಂಡ
'ಸರಯೂ' ನದಿಯಲ್ಲಿ
ಸರಿದ ನೆರಳು.

ಗೋಧ್ರಾದ ಬೀದಿಗಳಲ್ಲಿ
ಮೈದುಂಬಿಕೊಂಡ ರಾಮ-
ರಕುತವಾಗಿಬಿಟ್ಟ!

ಉಂಡುಟ್ಟ ಉ(ಯು)ಗಾದಿ
ಚಂದ್ರನೂ ಕೂಡ
ತಗಾದೆಯಲ್ಲಿದ್ದಾನೆ;
ಗುಜರಾತಿನ ಬೀದಿಗಳಲ್ಲಿ
ಬಿಡಾರ ಹೂಡಿದ್ದಾನೆ.
ಹರಿತ ಹತಾರಗಳ
ಅಂಗಡಿಯಿಟ್ಟಿದ್ದಾನೆ.

ರಾಮಚಂದ್ರನ
ಕೆರ ಹೊತ್ತವರು
ಗಿರಾಕಿಗಳಾಗಿದ್ದಾರೆ

ಏಕೆಂದರೆ –
ದುಗುಡಗಳ ದುಪ್ಪಟಿ
ಹೊದ್ದ ಮನುಷ್ಯರಿಲ್ಲಿ
ಹೆಣವಾಗಿದ್ದಾರೆ !

**ಎ. ಬಿ. ಮಲ್ಲಪ್ಪ**
ಪ್ರವಾಸಿ ಮಂದಿರದ ಹಿಂಭಾಗ
ಹೂವಿನ ಹಡಗಲಿ (ಪೋ) ಬಳ್ಳಾರಿ ಜಿಲ್ಲೆ

# ಹರಿಹರನ ರಗಳೆಗಳು: ಸಾಂಸ್ಕೃತಿಕ ಮುಖಾಮುಖಿ

ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ

**ಯಾ**ವುದೇ ಪ್ರಾಚೀನ ಕೃತಿಯ ಓದು ನಮ್ಮ ಪ್ರಜ್ಞೆಯ ವಿಚಾರವೇ ಹೊರತು ಆರಾಧನೆಯ ವಿಚಾರವಲ್ಲ. ಈ ಪಾತಳಿಯಲ್ಲಿ ಸಮಕಾಲೀನ ಜಗತ್ತಿನ ಕಣ್ಣುಗಳ ಮೂಲಕ ಅವುಗಳನ್ನು ಅಧ್ಯಯನ ಮಾಡಬೇಕು. ಹಾಗೆ ಮಾಡುವಾಗ ಕೃತಿಯ ಬಗೆಗೆ ಸಹಾನುಭೂತಿಯನ್ನು ಬಿಟ್ಟು ಕೊಡದೆ ಅದರ ತಾತ್ವಿಕ ಮತ್ತು ಭೌತಿಕ ವಿನ್ಯಾಸವನ್ನು ರೂಪುಗೊಳಿಸಿದ ಅದರ ಚಾರಿತ್ರಿಕ ಘಟ್ಟ ಮತ್ತು ಸಾಂಸ್ಕೃತಿಕ ನೆಲೆಗಳನ್ನು ಅದಕ್ಕೆ ಹಿನ್ನೆಲೆಯಾಗಿ ಲಕ್ಷಿಸಬೇಕು. ಅದು ಸಾಧ್ಯವಾದಲ್ಲಿ ನಮ್ಮಲ್ಲಿ ಪರಂಪರೆಯ ಪ್ರಜ್ಞೆ ಮೂಡುತ್ತದೆ. ಆ ಪ್ರಜ್ಞೆ ಸಮಕಾಲೀನ ಜಗತ್ತನ್ನು ಅತ್ಯಂತ ವಾಸ್ತವವಾದಿ ನೆಲೆಗಟ್ಟಿನಲ್ಲಿ ಗ್ರಹಿಸಿಕೊಳ್ಳಲು ಅನುವು ಮಾಡುತ್ತದೆ. ಈ ಬಗೆಯ ಭೂತ ಮತ್ತು ವರ್ತಮಾನಗಳ ಮುಖಾಮುಖಿಯಲ್ಲಿ ನೆಲೆಗೊಳ್ಳುವ ಗಟ್ಟಿ ನೆಲದಲ್ಲಿ ಭವಿಷ್ಯತ್ತಿನ ಕಟ್ಟಡವೂ ಸಮರ್ಪಕವಾಗಿ ಬೆಳೆದು ನಿಲ್ಲುತ್ತದೆ. ಅಂತಹ ವಿವಕ್ಷೆ ನಮ್ಮನ್ನು ಚರಿತ್ರೆಗೆ ಮತ್ತು ಅದರ ಕನ್ನಡಿಗಳಾದ ಕೃತಿಗಳಿಗೆ ಸೆಳೆಯುತ್ತಿರಬೇಕು. ಈ ತಾತ್ವಿಕ ನೆಲೆಯಲ್ಲಿ ಹರಿಹರನ ರಗಳೆಗಳನ್ನು ಗುರುತಿಸಿಕೊಳ್ಳಲು ಯತ್ನಿಸುತ್ತೇನೆ.

ವಾಸ್ತವವಾಗಿ ಹರಿಹರನು ತನ್ನ ಭೌತಿಕ ರೂಪದಲ್ಲಿ ಹನ್ನೆರಡನೆಯ ಕೊನೆ ಮತ್ತು ಹದಿಮೂರನೆಯ ಶತಮಾನದ ಆದಿ ಭಾಗದವನು. ಆದರೆ ಆ ಕಾಲದ ಚೌಕಟ್ಟಿನಲ್ಲಿ ಮೂಡಿದ ಅವನ ಚಿಂತನೆ ಮತ್ತು ಅದರ ಅಭಿವ್ಯಕ್ತಿ ರೂಪವಾದ ಕಾವ್ಯವು ಸಾರ್ವಕಾಲಿಕತೆಯ ಉಸಿರನ್ನು ಪಡೆದಿರುವುದರಿಂದ ಭೌತಿಕವಾಗಿ ಮಣ್ಣು ಸೇರಿರುವ ಹರಿಹರ ನಮ್ಮ ನಡುವೆ ಜೀವಂತವಾಗಿ ಉಳಿಯುತ್ತಾನೆ. ಆ ಮೂಲಕ ನಮ್ಮ ಮತ್ತು ಅವನ ನಡುವಿನ ಅನುಸಂಧಾನ ಸಾಧ್ಯವಾಗುತ್ತದೆ. ಈ ಬಗೆಯ ಅನನ್ಯತೆ ಹರಿಹರ ಮತ್ತು ಆತನಂತಹ ಅನೇಕ ಕವಿಗಳಿಗೆ ಸಾಧ್ಯವಾಗಿದೆ. ಇದು ಮೂಲಭೂತವಾಗಿ ಕಾವ್ಯದ ಅನನ್ಯತೆಯೇ ಹೌದು.

ವಾಸ್ತವವಾಗಿ ಹರಿಹರನು ತನ್ನ ಭೌತಿಕ ರೂಪದಲ್ಲಿ ಹನ್ನೆರಡನೆಯ ಕೊನೆ ಮತ್ತು ಹದಿಮೂರನೆಯ ಶತಮಾನದ ಆದಿ ಭಾಗದವನು. ಆದರೆ ಆ ಕಾಲದ ಚೌಕಟ್ಟಿನಲ್ಲಿ ಮೂಡಿದ ಅವನ ಚಿಂತನೆ ಮತ್ತು ಅದರ ಅಭಿವ್ಯಕ್ತಿ ರೂಪವಾದ ಕಾವ್ಯವು ಸಾರ್ವಕಾಲಿಕತೆಯ ಉಸಿರನ್ನು ಪಡೆದಿರುವುದರಿಂದ ಭೌತಿಕವಾಗಿ ಮಣ್ಣು ಸೇರಿರುವ ಹರಿಹರ ನಮ್ಮ ನಡುವೆ ಜೀವಂತವಾಗಿ ಉಳಿಯುತ್ತಾನೆ. ಆ ಮೂಲಕ ನಮ್ಮ ಮತ್ತು ಅವನ ನಡುವಿನ ಅನುಸಂಧಾನ ಸಾಧ್ಯವಾಗುತ್ತದೆ. ಈ ಬಗೆಯ ಅನನ್ಯತೆ ಹರಿಹರ ಮತ್ತು ಆತನಂತಹ ಅನೇಕ ಕವಿಗಳಿಗೆ ಸಾಧ್ಯವಾಗಿದೆ. ಇದು ಮೂಲಭೂತವಾಗಿ ಕಾವ್ಯದ ಅನನ್ಯತೆಯೇ ಹೌದು.

ಈ ನಿಟ್ಟಿನಲ್ಲಿ ನಾವು ಹರಿಹರನನ್ನು ಕುರಿತು 'ನಮ್ಮ ಹರಿಹರ' ಎಂಬುದಕ್ಕಿಂತ ಮಿಗಿಲಾಗಿ 'ನಮ್ಮ ಹರಿಹರ ಎಂಥವ?' ಎಂಬ ಬೌದ್ಧಿಕ ಚಟುವಟಿಕೆಗೆ ತೊಡಗಬೇಕಾಗಿದೆ. ವಸಾಹತುಶಾಹಿ ಕಾಲ ಕಲಿಸಿದ ಅನೇಕ ಪಾಠಗಳಲ್ಲಿ ಚರಿತ್ರೆ, ಅದರ ಕಾಲದ ಸಾಹಿತ್ಯ, ಜಾನಪದ, ಪುರಾಣ ಮೊದಲಾದವನ್ನು ಕುರಿತು 'ವೈಭವೀಕೃತ ನೋಟ' ಇಂದಿನ ಅಗತ್ಯವಲ್ಲವಾಗಿದೆ. ಅದರೂ ಅಂದಿನ ರಾಷ್ಟ್ರೀಯವಾದ ಚಿಂತಕರು - ಚರಿತ್ರೆಕಾರರು ಚಾರಿತ್ರಿಕತೆಯ ಒತ್ತಡದಲ್ಲಿ ಅನಿವಾರ್ಯವಾಗಿ ಸೃಷ್ಟಿಸಿದ ಆ ಬಗೆಯ ಪಾಠಗಳಿಂದೀಚೆಗೆ ಬಾರದ ಅನೇಕ ಚಿಂತಕರು- ಬರಹಗಾರರು ಸಾಹಿತ್ಯ, ಚರಿತ್ರೆ, ಜಾನಪದ ಮೊದಲಾದ ನೆಲೆಗಳಲ್ಲಿ ಇನ್ನೂ ಕ್ರಿಯಾಶೀಲಗೊಂಡಿರುವ ಇವತ್ತಿನ ದಿನಗಳಲ್ಲಿ ನಾವು ಹರಿಹರನನ್ನು ಕುರಿತು ಈಗಾಗಲೇ ಪ್ರಸ್ತಾಪಿಸಿರುವಂತೆ 'ಕೇವಲ ಅಭಿಮಾನ'ಕ್ಕೆ ಹೊರತಾದ ಪ್ರಜ್ಞೆಯ ನೆಲೆಯಲ್ಲಿ ನಿಂತು ಮಾತನಾಡಲು ಯತ್ನಿಸಬೇಕಿದೆ. ಇದೇ ನಿಜದ ಅಭಿಮಾನದ ವಿನ್ಯಾಸವಾಗಿ ಪುಟಗೊಳ್ಳಬೇಕಾದ ಅಗತ್ಯ ಇವತ್ತಿನದಾಗಿದೆ.

### ಪ್ರಯೋಗಶೀಲತೆ ಮತ್ತು ಅರ್ಥಪೂರ್ಣತೆ

ಹರಿಹರ ಅನೇಕ ದೃಷ್ಟಿಗಳಿಂದ ನನ್ನ ಗಮನವನ್ನು ಸೆಳೆದವನು. ಅಂದಿನ ಕಾಲಕ್ಕೆ ಚಂಪೂ ಎಂಬುದು ಪ್ರತಿಷ್ಠಿತ ಸಾಹಿತ್ಯ ಪ್ರಕಾರ ಮತ್ತು ಪಂಥ ಆಗಿತ್ತು. ಅಂತಹ ಸವಾಲಿನೆದುರಿನಲ್ಲಿ 'ಗಿರಿಜಾ ಕಲ್ಯಾಣ'ವನ್ನು ಬರೆದು ಉಬ್ಬಿದ ಈತ ರಗಳೆಗಳ ರಚನೆಯ ಮೂಲಕವಾಗಿ ಮಾತ್ರ ಯಶಸ್ವೀ ಕವಿಯಾಗುತ್ತಾನೆ. ಈ ನೆಲೆಯಲ್ಲಿ ಜೀವಂತ ಕಾವ್ಯ ಪರಂಪರೆಯ ವಿಸ್ತರಣೆಯಾಗಿ ನಿಲ್ಲುತ್ತಾನೆ. ಇಲ್ಲಿ ತನ್ನೆಲ್ಲಾ ವ್ಯಕ್ತಿತ್ವವನ್ನು ಕವಿತ್ವವನ್ನಾಗಿ ಮೂಡಿಸಿ, ಕನ್ನಡ ಕಾವ್ಯ ಪರಂಪರೆಗೆ ಹೊಸ ಆಯಾಮವನ್ನು ಕಲ್ಪಿಸುತ್ತಾನೆ. ಈ ಮೂಲಕ ಪಂಪ, ರನ್ನ, ಪೊನ್ನರ ಸಾಲಿನಲ್ಲಿ ಹತ್ತರಲ್ಲಿ ಹನ್ನೊಂದನೆಯವನಾಗದೆ ಹಿಮಾಲಯದ ಶಿಖರಗಳಲ್ಲಿ ಮತ್ತೊಂದು ಮೇರು ಶಿಖರವಾಗಿ ನಿಲ್ಲುತ್ತಾ, ಪರಂಪರೆಯ ನಿರ್ಮಾಪಕನಾಗುತ್ತಾನೆ. ಇದು ಈತನಿಗಿರುವ ಸಾಂಸ್ಕೃತಿಕ ಆಯಾಮ ಮತ್ತು ಚಾರಿತ್ರಿಕ ಮಹತ್ವ.

ಹರಿಹರ ಜಡ ಶಾಸ್ತ್ರಗಳಿಗೆ ಮೈಸೋತವನಲ್ಲ. ಅದರಿಂದ ಮೈಮುರಿದು ಎದ್ದವನು. ಆದ್ದರಿಂದಲೇ ಜಗಣ (u-u) ಎಂಬುದು ಕಾವ್ಯದಲ್ಲಿ ದೋಷ ಎಂದಿದ್ದಾಗಲೂ ಅದನ್ನು ಗುಣವನ್ನಾಗಿ ಮಾರ್ಪಡಿಸುವ ಯಶಸ್ವಿ ಪ್ರಯೋಗಶೀಲತೆಯನ್ನು ಮೆರೆಯುತ್ತಾನೆ. ರಳ, ಕುಳ. ಕ್ಷುಳಗಳ ಬಗೆಗೆ ಶಾಸ್ತ್ರಕಾರರು ಏನೇ ಹೇಳಿದರೂ ತಾನು ಜನಪದರ ನೆಲೆಯಲ್ಲಿ ನಿಂತು, ಮುಜುಗರವಿಲ್ಲದೇ ಅವನ್ನು ಲಿಬರಲ್ಲಾಗಿ ಬಳಸುತ್ತಾ ಬರುತ್ತಾನೆ. ಈ ಮೂಲಕ ಜನಪದರಾಡುವ ಭಾಷೆಯ ಕ್ರಮವೇ ಅಂತಿಮ ಎಂಬ ಭಾಷಾ ವಿಜ್ಞಾನಿಗಳ ತಾತ್ವಿಕತೆಯನ್ನು ಮೆರೆಯುತ್ತಾನೆ. ಈ ನಿಟ್ಟಿನಲ್ಲಿ ಜೀವಂತ ಭಾಷೆಯ ವಕ್ತಾರನಾಗಿ ಅಥವಾ ಪ್ರತಿಪಾದಕನಾಗಿ ನಿಂತು, ಪರೋಕ್ಷವಾಗಿ ತಾನು ಭಾಷಾ ಮಾಧ್ಯಮದ ವಿಚಾರದಲ್ಲಿ ಆರೋಗ್ಯಪೂರ್ಣ ಚಿಂತಕನಾಗಿ ಗಮನವನ್ನು ಸೆಳೆಯುತ್ತಾನೆ. ಈ ನೆಲೆಯಲ್ಲಿ ಇವತ್ತಿನ ಕನ್ನಡ ಚಿಂತನೆಗೆ ಮಾರ್ಗದರ್ಶಕನೂ ಆಗುತ್ತಾನೆ.

ಹೀಗೆ ಪ್ರಯೋಗಶೀಲತೆ ಮತ್ತು ಅರ್ಥಪೂರ್ಣತೆಗಳನ್ನು ಏಕತ್ರವಾಗಿ ಸಾಧಿಸುವ ಈತ ಚಲನಶೀಲ ಗುಣವನ್ನುಳ್ಳ 'ಪರಂಪರೆ' ಎಂಬ ಕಲ್ಪನೆಗೆ ಅರ್ಥಪೂರ್ಣ ವಿಸ್ತರಣೆಯನ್ನು ಕಲ್ಪಿಸುವ ಅಥವ ಅದರ ಪೂರ್ಣಪಾಠದ ರೂಪಕ ಪ್ರತಿಭೆಯಾಗಿ ನಮ್ಮ ಸಾಹಿತ್ಯ ಪರಂಪರೆಯಲ್ಲಿ ಅಷ್ಟೇ ಅಲ್ಲದೆ ಸಂಸ್ಕೃತಿ ಪರಂಪರೆಯಲ್ಲಿಯೂ ಒಂದು ಮೈಲಿಗಲ್ಲಾಗಿ ಯಶಸ್ಸನ್ನು ಪ್ರಕಟಿಸುತ್ತಾನೆ. ಇದು ಅವನ ಭದ್ರ ಸ್ಥಾನ. ಇಲ್ಲಿ ಬೇಂದ್ರೆ, ಕುವೆಂಪು, ಅಡಿಗ, ಸಿದ್ಧಲಿಂಗಯ್ಯ ಮೊದಲಾದ ಪ್ರವರ್ತಕರು ನೆನಪಾಗುತ್ತಾರೆ.

ಹೀಗೆ ಶಾಸ್ತ್ರ ಅಥವಾ ಮೀಮಾಂಸೆ ನಿರ್ದೇಶಿಸುವ ಕಾವ್ಯಕ್ಕಿಂತ ಪ್ರತಿಭೆಯೇ ಮುಖ್ಯವಾಗಿ ನಿರ್ದೇಶಿಸುವ ಜೀವಂತ ಕಾವ್ಯ ಪರಂಪರೆಯ ವಕ್ತಾರನಾಗಿ ನಿಲ್ಲುವ ಈತ ಕನ್ನಡ ಕಾವ್ಯ ಮೀಮಾಂಸೆಗೆ ಹೊಸ ತತ್ವ ಅಥವಾ ಪಾಠವೊಂದನ್ನು ಸೇರಿಸುತ್ತಾನೆ. ಇಲ್ಲಿ ಬಸವಣ್ಣನ 'ಆನು ಒಲಿದಂತೆ ಹಾಡುವೆ' ಎಂಬ ಮಾತನ್ನು ಅನ್ವಯಿಕ ನೆಲೆಯಲ್ಲಿ ಇರಿಸಿಕೊಳ್ಳಬಹುದೆಂದು ಭಾವಿಸುತ್ತೇನೆ.

**ಕವಿ ಚರಿತೆಗೆ ಕವಿತೆಯೇ ದಾರಿ :** ಕವಿಯ ವ್ಯಕ್ತಿತ್ವ ಮತ್ತು ಕವಿತ್ವಗಳ ಮೂಲ ಸ್ತರದಲ್ಲಿ ಭಿನ್ನತೆಯಿಲ್ಲ ಎಂದು ತಿಳಿದವನು ನಾನು. ಈ ನೆಲೆಯಲ್ಲಿ ಹರಿಹರನ ರಗಳೆಗಳ ಒಳಗೆ ಕಾಣಿಸಿಕೊಳ್ಳುವ ಬಹುತೇಕ ಪಾತ್ರಗಳ ಹೆಸರುಗಳು ಬೇರೆ ಬೇರೆಯಾಗಿದ್ದರೂ ಅವುಗಳ ಮೂಲಭೂತ ವ್ಯಕ್ತಿತ್ವವು ಹರಿಹರನದೇ ಆಗಿದೆ. ಅಂತಹ ಸೋಪಜ್ಞತೆ ಈ ರಗಳೆಗಳಿಗಿದೆ. ಆದ್ದರಿಂದ ಸಾಂಪ್ರದಾಯಿಕ ನೆಲೆಯಲ್ಲಿ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ವಿಧಾನಕ್ಕಿಂತ ಅಂದರೆ, ಕವಿಯ ಕೃತಿ ಮತ್ತು ಇತರೆ ಕಾವ್ಯ ಶಾಸನಗಳು ಕವಿಯ ಬಗೆಗೆ ನೇರವಾಗಿ ಏನನ್ನು ಹೇಳುತ್ತವೆ ಎಂಬುದನ್ನು ಆಧರಿಸಿ ಕಟ್ಟುವ ಕ್ರಮಕ್ಕಿಂತ ಇಡೀ ಕಾವ್ಯವನ್ನು ಸೂಕ್ಷ್ಮ ಸಂವೇದಿ ನೆಲೆಯಲ್ಲಿ ಗ್ರಹಿಸಿ, ಆ ಮೂಲಕ ಕವಿಯ ಒಟ್ಟು ವ್ಯಕ್ತಿತ್ವವನ್ನು ಮತ್ತು ಅವನ ಚರಿತ್ರೆಯ ಸಾಂಸ್ಕೃತಿಕ ಎಳೆಗಳನ್ನು ಬಿಡಿಸುವ ಬಗೆ ಅತ್ಯಂತ ಸೂಕ್ತ ಮತ್ತು ಸಾರ್ಥಕ ಎಂದು ಭಾವಿಸುತ್ತೇನೆ. ಈ ನೆಲೆಯಲ್ಲಿ ನಿಂತು ನೋಡಿದಾಗ ಪಂಪ, ಅಲ್ಲಮ, ಬಸವ, ಹರಿಹರ, ಕನಕ ಮೊದಲಾದ ಎಲ್ಲಾ ಬರಹಗಾರರು ತಮ್ಮೆಲ್ಲಾ ಬಣ್ಣಗಳೊಂದಿಗೆ ಸಾಕ್ಷಾತ್ಕಾರಗೊಳ್ಳುತ್ತಾರೆ. ಹಾಗಾದಾಗ ನೈಜ ಸಾಹಿತ್ಯ ಚರಿತ್ರೆ ಮೂಡುತ್ತದೆ. ಅದು ಅಂತಿಮವಾಗಿ

ಸಂಸ್ಕೃತಿ ಚರಿತ್ರೆಯೂ ಆಗಿ ನಿಲ್ಲುತ್ತದೆ. ಅಂತಹ ಬರವಣಿಗೆ ನಮಗೆ ಚರಿತ್ರೆಯ ಹೊಸ ಪಾಠಗಳನ್ನು ಕಲಿಸಬೇಕಿದೆ. ಈ ದಾರಿಯಲ್ಲಿ ನಾವು ನಡೆದಿದ್ದೇವಾದರೂ ನಡೆಯಬೇಕಾದಷ್ಟು ನಡೆದಿಲ್ಲ. ಇಂತಹ ಸಾಂಸ್ಕೃತಿಕ ತಿಳುವಳಿಕೆಯ ಹಿನ್ನೆಲೆಯಲ್ಲಿ ಈಗ ಹರಿಹರ ನಮಗೆ ಕಾಣಬೇಕಾಗಿದೆ.

**ಸಾಂಸ್ಕೃತಿಕ ದೂರ** : ಕಾವ್ಯದ ಬಗೆಗೆ 'ಮಾನಸಿಕ ದೂರ' ಸಾಧ್ಯ. ಆದರೆ ಇಲ್ಲಿ ಹರಿಹರನ ಕಾವ್ಯ ಮತ್ತು ಚಿಂತನೆಗಳಿಂದ 'ಮಾನಸಿಕ ದೂರ' ಅಷ್ಟೇ ಅಲ್ಲ, ಸಾಂಸ್ಕೃತಿಕ ದೂರವನ್ನು ಸಹ ಕಾಯ್ದುಕೊಳ್ಳುವುದು ಹೆಚ್ಚು ಆರೋಗ್ಯಕರ ವಿಚಾರವಾಗುತ್ತದೆ. ಕಾರಣ, ಇಲ್ಲಿ ಪ್ರತಿಪಾದಿತವಾಗುವುದು ಏಕರೂಪಿ ಸಂಸ್ಕೃತಿ ಮತ್ತು ಅದರ ಭಾಗವಾದ ಏಕದೇವೋಪಾಸನೆ. ಇದು ಶಿವ ಮತ್ತು ಶಿವ ಸಂಸ್ಕೃತಿಗೆ ಹೊಂದಿಕೊಂಡದ್ದು. ಇಲ್ಲಿಯ ದೈವ ಮತ್ತು ಸಂಸ್ಕೃತಿ ಯಾವುದೇ ಇರಲಿ, ಒಟ್ಟಾರೆಯಾಗಿ ಕಾಣುವ 'ಏಕ'ದ ಮೂಲಕವಾಗಿ ಪ್ರತಿಪಾದಿತವಾಗುವ ವಿಚಾರವೇ ಮೂಲಭೂತವಾಗಿ ಅಪಾಯಕಾರಿಯಾದದ್ದು. ಇಂತಹ ಅನೇಕ 'ಏಕ'ಗಳ ಸೃಷ್ಟಿಯೇ ಸಂಘರ್ಷದ ದಾರಿ. ಅಂತಹ ಅನೇಕ ಧರ್ಮಗಳು ಜಗತ್ತಿನ ಇತಿಹಾಸದಲ್ಲಿ ನಕ್ಷೆಯ ತುಂಬಾ ಹರಿಸಿರುವ ನೆತ್ತರನ್ನು ನಾವು ಸ್ಮರಿಸಿಕೊಳ್ಳಬೇಕಿದೆ. ಆ ಧರ್ಮಗಳು ತಾತ್ವಿಕತೆಯ ಅಥವಾ ತತ್ವಶಾಸ್ತ್ರದ ನೆಲೆಯಲ್ಲಿ ಏನೇ ಹೇಳಲಿ, ಅವು ವಾಸ್ತವದ ನೆಲೆಯಲ್ಲಿ ಅದಕ್ಕಿಂತ ಭಿನ್ನವಾದ ರೂಪದಲ್ಲಿ ಕಾಣಿಸಿಕೊಂಡು ಪುರುಷರಲ್ಲಿ ಮನುಷ್ಯತ್ವವನ್ನು ಕಾಣೆಯಾಗಿಸಿ, 'ಗೋಡೆ'ಗಳನ್ನು ನಿರ್ಮಿಸಿವೆ; ರಕ್ತವನ್ನು ಹರಿಸಿವೆ. ಆ ರಕ್ತ ಇನ್ನೂ ಹರಿಯುತ್ತಿದೆ ಮತ್ತು ಗೋಡೆಗಳು ದಿನೇ ದಿನೇ ಮುಗಿಲನ್ನು ಮುಟ್ಟುವತ್ತ ಬೆಳೆಯುತ್ತಿವೆ. ಹೀಗಾಗಿ ಧಾರ್ಮಿಕತೆಯನ್ನು ಪ್ರತಿಪಾದಿಸುವ ಹರಿಹರ ನಮ್ಮ ಇವತ್ತಿನ ಆದರ್ಶವಲ್ಲ. ಆದರೆ ಈತನನ್ನು ಅರಿಯುವ ಮೂಲಕವೇ ಅಂದಿನ ಧಾರ್ಮಿಕ ಸಂಸ್ಕೃತಿಯನ್ನು ಮತ್ತು ಅದರ ಮೂಲದಲ್ಲಿ ನಿರ್ಮಾಣಗೊಂಡ ಇವತ್ತಿನ ವರ್ತಮಾನವನ್ನು ತಿಳಿಯಬೇಕಿದೆ. ಈ ಬಗೆಯ ಚಾರಿತ್ರಿಕ ನೋಟಕ್ಕಾಗಿ ಹಾಗೂ ಇವತ್ತನ್ನು ಕಾಳಜಿಯ ನೆಲೆಯಲ್ಲಿ ಕೇಂದ್ರವಾಗಿಸಿಕೊಳ್ಳುವ ಪ್ರಯತ್ನಕ್ಕೆ ಪೋಷಕವಾಗುವ ಪರಂಪರೆಯ ಪ್ರಜ್ಞೆಯನ್ನು ಪಡೆಯಲಿಕ್ಕಾಗಿ ಹರಿಹರನನ್ನು ಕುರಿತ ಓದು ಅತ್ಯಾವಶ್ಯಕವಾಗಿದೆ. ಈ ನೆಲೆಯಲ್ಲಿ ಅವನು, ಅವನ ಧರ್ಮ, ಅವನ ಬದುಕಿನ ವಿನ್ಯಾಸ ಮತ್ತು ಚಿಂತನೆ ಇತ್ಯಾದಿಗಳ ಅರಿವು ನಮಗೆ ಹಲವು ಒಳನೋಟಗಳನ್ನು ನೀಡುತ್ತದೆ.

**ಧರ್ಮ ಮತ್ತು ಭಯೋತ್ಪಾದಕತೆ**

ಧರ್ಮ ಮತ್ತು ಭಯೋತ್ಪಾದಕತೆಗೆ ನಿಕಟ ನಂಟು. ಇದು ಈ ಹೊತ್ತಿನ ಮಾತಲ್ಲ. ಸಾವಿರಾರು ವರ್ಷದ್ದು ಮತ್ತು ಪ್ರಪಂಚದ ಅನೇಕ ದೇಶಗಳದ್ದು. ಈ ನಿಟ್ಟಿನಲ್ಲಿ ಶೈವ ಧರ್ಮದ ಭಯೋತ್ಪಾದಕತೆಗೆ ಅನೇಕ ಕಾವ್ಯಗಳು, ಶಾಸನಗಳು ನಮ್ಮ ಮುಂದಿವೆ. ಈ ನಿಟ್ಟಿನಲ್ಲಿ ಇಱೆಭಕ್ತನನ್ನು ಕಥಾನಾಯಕನನ್ನಾಗಿ ಹೊಂದಿರುವ ರಗಳೆಯೂ ಒಂದು.

ಇಱೆಭಕ್ತನ ಧಾರ್ಮಿಕ ನಿಷ್ಠೆ ವೀರ ಎಂಬುದಕ್ಕಿಂತ ಕ್ರೌರ್ಯದ್ದು. ತನ್ನದಲ್ಲದ ಧರ್ಮ ಧಾರ್ಮಿಕರನ್ನು ಕುರಿತ ಸಹಿಷ್ಣುತೆ ಇವನಲ್ಲಿ ಇಲ್ಲವಾದ್ದರಿಂದ ಅಂಥವರನ್ನು ಪರಶು (ಕೊಡಲಿ)ವಿನಿಂದ ಕಡಿಯುತ್ತಾ ಹೋಗುತ್ತಾನೆ. ಇದನ್ನು ತನ್ನ ದೇಶದ ರಾಜನೂ ಸಹಮತಿಸುತ್ತಾನೆ. ಇಂಥವನಿಗೆ ಶಿವನಿಂದ ಶಿಕ್ಷೆಯಿಲ್ಲ ; ಬದಲಿಗೆ ಕೈಲಾಸದಲ್ಲಿ ಗಣ ಪದವಿ ಪ್ರಾಪ್ತವಾಗುತ್ತದೆ !

ಆದ್ದರಿಂದಲೇ 'ನಮ್ಮ ಹರಿಹರ' ಎಂಬುದಕ್ಕಿಂತ 'ನಮ್ಮ ಹರಿಹರ ಎಂಥವ ?' ಎಂಬ ಪ್ರಜ್ಞಾಕೇಂದ್ರಿತವಾದ ಪ್ರಶ್ನೆ ಅವಶ್ಯಕ ಎಂದದ್ದು. ಈ ಮೂಲಕ ಹರಿಹರನ ಕಾಲದ ಸಂಸ್ಕೃತಿ ಮತ್ತು ಅದರ ಭಾಗವಾದ ಧರ್ಮ ಸಂಘರ್ಷ ಹಾಗೂ ಅವುಗಳ ಅಮಾನವೀಯ ನೆಲೆಗಳನ್ನು ಗುರುತಿಸಿಕೊಳ್ಳಬೇಕಿದೆ.

ಇದೇ ನೆಲೆಯಲ್ಲಿ ಏಣಾಧಿನಾಥನ ಕತೆಯೂ ಬರುತ್ತದೆ. ಈತನೂ ಶಿವಭಕ್ತ. ಭಕ್ತರ ಆರಾಧನೆಗಾಗಿ ವ್ಯವಸಾಯ, ದಾನ, ವಾಣಿಜ್ಯ ಮೊದಲಾದ ಯಾವುದೇ ವೃತ್ತಿಯನ್ನು ಅವಲಂಬಿಸುವ ಇಚ್ಛೆ ಈತನಿಗಿಲ್ಲ. ಹಾಗಾಗಿ ವೀರಭದ್ರನು ಈತನ ಕನಸಿನಲ್ಲಿ ಬಂದು 'ಇಕೋ, ಕತ್ತಿ ಗುರಾಣಿ ಇಲ್ಲಿವೆ. ಇವನ್ನು ಹಿಡಿದು ಕಾದು, ಬಂದ ದ್ರವ್ಯದಿಂದ ಭಕ್ತರ ಸೇವೆಯನ್ನು ಮಾಡು' ಎನ್ನುತ್ತಾನೆ. ಈತ ಅದೇ ದಾರಿಯಲ್ಲಿ ನಡೆದೂಬಿಡುತ್ತಾನೆ. ಇದು ಈತನ ಭಕ್ತಿಯ ಕ್ರಮ ! ಅಂತಿಮವಾಗಿ ಈತನಿಗೂ ಗಣಪದವಿ !!

ಒಟ್ಟಾರೆ, ಈ ಬಗೆಯ ವಿಕೃತಿಗಳು ಹರಿಹರನ ಕಾಲದ್ದೂ ಹೌದು. ಆದರೆ ಅವುಗಳ ಬಗೆಗೆ ಹರಿಹರ ತಳೆದಿದ್ದ ನಿಲುವು ಎಂಥಾದ್ದು ಎಂಬುದು ಇಲ್ಲಿಯ ಗಂಭೀರ ಪ್ರಶ್ನೆ. ಇದಕ್ಕೆ ಉತ್ತರವಾಗಿ, ಈ ಮೂಲಭೂತವಾದಿ ಉಗ್ರ ಧಾರ್ಮಿಕ ನಿಷ್ಠುರು ಕವಿಯಿಂದಾಗಿ ಕನಿಷ್ಠ ನೇತ್ಯಾತ್ಮಕ ದೃಷ್ಟಿಗೆ ಒಳಗಾಗಿಲ್ಲ ಎಂಬುದು ಇಲ್ಲಿಯ ಆತಂಕದ ನೋಟ. ಆದ್ದರಿಂದಲೇ ಒಟ್ಟು ಹರಿಹರನ ಸಂದರ್ಭದಲ್ಲಿ ನಾವು ಸಾಂಸ್ಕೃತಿಕ ದೂರವನ್ನು ಉಳಿಸಿಕೊಳ್ಳುವುದು ಇವತ್ತಿನ ಅನೇಕ ಜರೂರುಗಳಲ್ಲಿ ಒಂದು ಎನ್ನಿಸುವುದು.

ಕೋಮುವಾದ ಮತ್ತು ಅದರ ಆಯಾಮವನ್ನು ಪಡೆದಿರುವ ಭಯೋತ್ಪಾದಕತೆಯು ವಿಜೃಂಭಿಸುತ್ತಿರುವ ಈ ದಿನಗಳಲ್ಲಿ ಇಂತಹ ಸಾಹಿತ್ಯವನ್ನು ಹೆಚ್ಚು ಜಾಗರೂಕತೆಯಿಂದ ತಿಳಿಯುವ ಅಗತ್ಯವಿದೆ. ಇಂತಹ 'ಇತಿಹಾಸವೇ' ಇವತ್ತಿನ ದಿನಗಳ ತಾಯಿ ಎಂಬುದನ್ನು ಅರಿತು ಮುನ್ನಡೆಯಬೇಕಾಗಿದೆ.

**ಹರಿಹರನ ಭಕ್ತಿ ಸಾಂಸ್ಥಿಕವೇ ? ಖಾಸಗಿಯೇ ? ಅಥವಾ ಮನುಷ್ಯ ಪರವೇ ?**

ಹರಿಹರನ ರಗಳೆಗಳ ಪ್ರಧಾನ ನೆಲೆ – ಭಕ್ತಿ. ಅಲ್ಲಿ ಅನೇಕ ಮಾದರಿಗಳಿವೆ. ಗುಪ್ತಭಕ್ತಿ, ವೀರಭಕ್ತಿ, ಸಾಂಸ್ಥಿಕೇತರ ನೆಲೆಯಲ್ಲಿ ಕಾಣುವ ಉಪಸಂಸ್ಕೃತಿ ಮೂಲದ ಭಕ್ತಿ (ಉದಾ: ಕಣ್ಣಪ್ಪನ ಭಕ್ತಿ) ಇತ್ಯಾದಿ. ಒಟ್ಟಾರೆ ಈ ಎಲ್ಲಾ ಮಾದರಿಗಳ ಕೇಂದ್ರ ಶಿವನೇ ಆಗಿದ್ದಾನೆ. ಅವನನ್ನು ಕುರಿತ ನಿಷ್ಠೆಯನ್ನು ಪ್ರಕಟಿಸುವವರು ಮಾತ್ರ ಭಕ್ತರೆನಿಸಿ, ಉಳಿದವರು ಭವಿಗಳೆನಿಸಿಬಿಡುತ್ತಾರೆ. ಉದಾಹರಣೆಗೆ, ವೈಷ್ಣವರು, ಜೈನರು ಮತ್ತು ಅಷ್ಟಾಗಿ ಇಲ್ಲದಿದ್ದ ಬೌದ್ಧರು ಇತ್ಯಾದಿ.

ಹೀಗೆ ಶಿವನ ಹೆಸರಿನಲ್ಲಿ ಸಾಂಸ್ಥೀಕರಣಕ್ಕೊಳಗಾಗುವ ಭಕ್ತಿಯು ಅನ್ಯಧರ್ಮೀಯರ ಮೇಲೆ ನಡೆಸುವ ಬಲಾತ್ಕಾರ, ಅತ್ಯಾಚಾರ ಮತ್ತು ಹಿಂಸಾಚಾರಗಳ ಮೂಲಕವಾಗಿ ಮಿಲಿಟೆನ್ಸಿಯ ಆಯಾಮವನ್ನು ಪಡೆಯುತ್ತದೆ. ಇಲ್ಲಿ ಆದಾಯ ಹಾಗೂ ಈಗಾಗಲೇ ಪ್ರಸ್ತಾಪಿಸಲ್ಪಟ್ಟಿರುವ ಇಡೆಭಕ್ತ, ಏಣಾಧಿನಾಥ ಮೊದಲಾದ ಶಿವಭಕ್ತರು ಪ್ರಾತಿನಿಧಿಕವಾಗಿ ನಿಲ್ಲುತ್ತಾರೆ.

ಹೀಗೆ ಹಿಂಸೆಗೆ ಪ್ರೇರಕವಾಗುವ ಸಾಂಸ್ಥೀಕೃತ ಭಕ್ತಿ ತನ್ನ ಆಶಯವನ್ನು ಮರೆತು ನಿಲ್ಲುತ್ತದೆ. ಅದೇ ಸಂದರ್ಭದಲ್ಲಿ ತನ್ನ ಅಸ್ತಿತ್ವದ ವಿಸ್ತರಣೆಗಾಗಿ ಅನ್ಯಧರ್ಮೀಯರ ಮೇಲೆ ಹಿಂಸೆಯನ್ನು ಮೆರೆಯಲು ಸಿದ್ಧವಾಗುತ್ತದೆ; ತನ್ನ ವಿವೇಕವನ್ನೂ ಕಳೆದುಕೊಳ್ಳುತ್ತದೆ. ಅಂತಹ ಪ್ರಕ್ರಿಯೆಯ ವಕ್ತಾರರಾಗಿ ಕಾಣಿಸಿಕೊಳ್ಳುವ ಉಗ್ರರ ಬಗೆಗೆ ಮೃದುತ್ವವನ್ನು ತಾಳುವ ಹರಿಹರ ತಾನೂ ಒಬ್ಬ ಮಿಲಿಟೆಂಟ್ ಆಗಿ ಕಾಣಬರುತ್ತಾನೆ. ಅಂತಹ ಇತಿಹಾಸದ ಮೂಲದಲ್ಲಿ ಹುಟ್ಟುವ ವರ್ತಮಾನದ 'ಭುಜರಂಗ' ದಳಗಳು ನನಗೆ ಆಶ್ಚರ್ಯವನ್ನು ತರುವುದಿಲ್ಲ. ಆದ್ದರಿಂದಲೇ ಸಾಂಸ್ಥೀಕರಣಕ್ಕೊಳಗಾಗುವ ಯಾವುದೇ ಭಕ್ತಿ ಎಷ್ಟರ ಮಟ್ಟಿಗೆ ಮನುಷ್ಯತ್ವದ ಆಯಾಮವನ್ನು ಪಡೆದಿರುತ್ತದೆ ಎಂಬ ಪ್ರಶ್ನೆಯನ್ನು ಜೀವಂತಗೊಳಿಸುವುದು.

**ಹರಿಹರನ ಭಕ್ತಿಗೆ ಇನ್ನೂ ಕೆಲವು ಆಯಾಮಗಳಿವೆಯೇ ?**

ಮೂಲಭೂತವಾಗಿ ಯಾವುದೇ ಭಕ್ತಿಯ ವಿನ್ಯಾಸಕ್ಕೆ ವೈಚಾರಿಕ ತಳಹದಿಯಿರುವುದಿಲ್ಲ. ಇದು ಪ್ರಾಥಮಿಕ ಸತ್ಯ. ಸೃಷ್ಟಿ ಮತ್ತು ಅದರೊಳಗಿನ ವ್ಯಾಪಾರವು ಪ್ರಾಚೀನ ಮನುಷ್ಯನಲ್ಲಿ ಭಯದ ಹುಟ್ಟಿಗೆ ಕಾರಣವಾದರೆ, ಆ ಭಯವು ದೈವದ ಹುಟ್ಟಿಗೆ ಕಾರಣವಾಗುತ್ತದೆ. ಇದು ಮಾನವಶಾಸ್ತ್ರೀಯ ಸತ್ಯ. ಈ ಹಿನ್ನೆಲೆಯಲ್ಲಿ ಸೃಷ್ಟಿಯನ್ನು ತಿಳಿಯಲಾಗಿದೆ ಎಂದು ಭಾವಿಸಲ್ಪಡುವ ಈ ಕಾಲದಲ್ಲಿಯೂ ದೈವ ಮತ್ತು ಅದನ್ನು ಕುರಿತ ಭಕ್ತಿಯ ಪ್ರಸ್ತಾಪ ಬಂದಾಗ, ಅದು ಅತ್ಯಂತ ಸಹಜವಾಗಿ ಅವೈಚಾರಿಕ ಎನ್ನಿಸಿಬಿಡುತ್ತದೆ. ಇಂತಹ ಭಕ್ತಿಯು ಮೌಢ್ಯವನ್ನು ಪೋಷಿಸುವುದಲ್ಲದೆ, ಪ್ರಶ್ನೆಗಳನ್ನೆತ್ತುವ ಮನೋಧರ್ಮವನ್ನು ಸಹ ಕುಂಠಿತಗೊಳಿಸುತ್ತದೆ. ಅದರಿಂದಾಗಿ ಸಹಜವಾಗಿಯೇ ಮನುಷ್ಯ ಬದುಕಿನ ಭೌತಿಕ ಮತ್ತು ಬೌದ್ಧಿಕ ಹಿನ್ನಡೆ ಮೊದಲಾಗುತ್ತದೆ. ಆದ್ದರಿಂದ ಮೌಢ್ಯವನ್ನು ಬಿತ್ತುವ ಭಕ್ತಿಯ ಪರಿಕಲ್ಪನೆ ಮತ್ತು ಅದರ ಅಸ್ತಿತ್ವಕ್ಕಾಗಿ ಹೋರಾಡುವ ಹರಿಹರನ ರಗಳೆಗಳು ನಮಗೆ ಸಾಂಸ್ಕೃತಿಕವಾಗಿ ಎಷ್ಟು ದೂರ ಎಂಬ ವಿವೇಕಯುತವಾದ ಪ್ರಶ್ನೆ ನಮ್ಮಲ್ಲಿ ಮೂಡಬೇಕು; ಅಂತಹ 'ದೂರ'ದಲ್ಲಿ ನಮ್ಮ ಮತ್ತು ಹರಿಹರನ ಕ್ಷೇಮವಿದೆ. ಇದು ಹರಿಹರನ ಮಿತಿಯಲ್ಲ ; ಮೂಲಭೂತವಾಗಿ ಆ ಕಾಲದ ಮಿತಿ. ಅಷ್ಟೇ ಏಕೆ ? ಅದು ಈ ಕಾಲದ ವಿರೋಧಾಭಾಸವೂ ಹೌದು !

ಏನೇ ಇರಲಿ ಹರಿಹರನೊಂದಿಗೆ ಮತ್ತು ಅವನು ಪ್ರತಿನಿಧಿಸುವ ಮಿಲಿಟೆಂಟ್ಸ್ ಹಾಗೂ ಧರ್ಮ ಹಾಗೂ ಅಂತಹ ಎಲ್ಲಾ ಧರ್ಮಗಳೊಂದಿಗೆ ಅಂತರವನ್ನಿಟ್ಟುಕೊಳ್ಳುವುದು ನಮ್ಮ ಇವತ್ತಿನ ಅರಿವಿನ ಭಾಗವಾಗಬೇಕು.

ಮೂಲಭೂತವಾಗಿ ಶರಣತ್ವ ಎಂಬುದು ಜಂಗಮ ರೂಪಿಯಾದುದು. ಆದರೆ ಅದು ಹರಿಹರನ ಕಾಲಕ್ಕಾಗಲೇ ಸ್ಥಾವರಗೊಂಡದ್ದು ವಿಪರ್ಯಾಸ. ಸಾಧನೆಯಿಂದ ಸಾಧಿಸಿಕೊಳ್ಳಬೇಕಾದ ಅದನ್ನು ಹುಟ್ಟಿನಿಂದ ಅಥವಾ ಮತಾಂತರದಿಂದ ಸಿದ್ಧಿಗೊಳಿಸಿಕೊಂಡದ್ದು ದುರಂತ. ಅಂತಹ ಅನೇಕ 'ಸಿದ್ಧ' ಶೈವರು ಹರಿಹರನ ರಗಳೆಗಳ ನಾಯಕರಾಗಿದ್ದಾರೆ. ಅಂಥವರಲ್ಲಿ ಒಬ್ಬ ಕತ್ತಿಯನ್ನು ಹಿಡಿದು ಹೊರಟರೆ, ಮತ್ತೊಬ್ಬ ಕತ್ತಿ ಗುರಾಣಿ ಎರಡನ್ನೂ ಹಿಡಿದು ಹೊರಡುತ್ತಾನೆ. ಆದ್ದರಿಂದಲೇ ಮಾರ್ಕ್ಸ್ 'ಧರ್ಮವೆಂಬುದು ಮನುಕುಲದ ಅಫೀಮು' ಎಂದು ಸಾರಿ ಹೇಳಿದ್ದು !

ಹೀಗೆ ಮೌಢ್ಯ, ಅವೈಚಾರಿಕತೆ, ಹಿಂಸೆ, ಸಾಂಸ್ಥಿಕತೆ ಮೊದಲಾದ ಅನೇಕ ಆಯಾಮಗಳನ್ನು ಪಡೆದಿರುವ ರಗಳೆಗಳಲ್ಲಿನ ಭಕ್ತಿಯ ಪರಿಕಲ್ಪನೆ ನಮ್ಮ ಸಮಕಾಲೀನ ಸಂದರ್ಭವನ್ನು ವಿವರಿಸಿಕೊಳ್ಳಲು ಬೇಕಾದ ಮಹತ್ತರ ಒಳನೋಟಗಳನ್ನು ನೀಡುತ್ತದೆ ಎಂದು ಭಾವಿಸುತ್ತಾ, ಹೊಸ ನಿರೀಕ್ಷೆಗಳನ್ನು ಇಟ್ಟುಕೊಳ್ಳುತ್ತೇನೆ.

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ
ಕನ್ನಡ ಅಧ್ಯಾಪಕ, ಸ್ನಾತಕೋತ್ತರ ಕೇಂದ್ರ., ಬೆಂಗಳೂರು ವಿಶ್ವವಿದ್ಯಾಲಯ, ಕೋಲಾರ - ೫೬೩ ೧೦೧

## ಹೀಗೇಕೆ ಹಿಂಬಾಲಿಸುವೆ ನನ್ನ?



ಆ ನೀಲಿ ಆಕಾಶದಲ್ಲಿ
ಫಳ ಫಳ ಹೊಳೆಯುವ
ನಕ್ಷತ್ರಗಳ ಮಧ್ಯೆ ನಗುವ ಚಂದಿರಾ
ನೀನು ಹೀಗೇಕೆ ಹಿಂಬಾಲಿಸುವೆ ನನ್ನ ?

ನೀನು ಆಕಾಶದ ಸ್ವತ್ತು
ನಾನು ಭೂಮಿಯ ಸ್ವತ್ತು
ನಿನಗೂ ನನಗೂ ಅಜಗಜಾಂತರ
ಆದರೂ ನಾನು ಹೋದಲೆಲ್ಲಾ
ನೀನು ಹೀಗೇಕೆ ಹಿಂಬಾಲಿಸುವೆ ನನ್ನ ?

ನೀನೋ ಸ್ವಚ್ಛ ಆಕಾಶದಲ್ಲಿ ಸ್ವಚ್ಛಂದ
ನಾನೊ ಕಟ್ಟುಪಾಡುಗಳ ಕಗ್ಗಂಟು
ನನಗೂ ನಿನಗೂ ಎಲ್ಲಿಯ ಸಂಬಂಧ ?
ನೀನು ಹೀಗೇಕೆ ಹಿಂಬಾಲಿಸುವೆ ನನ್ನ ?
ನಿರ್ಬಂಧವಿಲ್ಲದೆ ತಿರುಗಾಡುವ ನೀನು
ಸಂಬಂಧಗಳ ಸುಳಿಯಲ್ಲಿ ನಾನು
ನನಗೂ ನಿನಗೂ ಎಲ್ಲಿಯ ಸಂಬಂಧ ?
ನೀನು ಹೀಗೇಕೆ ಹಿಂಬಾಲಿಸುವೆ ನನ್ನ ?

ನಿನಗೊ, ನಗುವುದು ಬಿಟ್ಟರೆ ಮತ್ತೇನು ಬರುವುದು ?
ನನ್ನ ಹಾಗೆ ಅಳಲಿಕ್ಕೇನಾದರೂ ಬರುವುದೆ ?

ನನಗೂ ನಿನಗೂ ಎಲ್ಲಿಯ ಸಂಬಂಧ
ನೀನು ಹೀಗೇಕೆ ಹಿಂಬಾಲಿಸುವೆ ನನ್ನ ?
ಹೋಗು, ನಿನ್ನ ದಾರಿಯಲಿ ನೀನು.

ಲೀಲಾ ಎಸ್. ಸುತ್ರಾವೆ
೧೬೪೬/೧೮, ಮಹಡಿ, ''ಸಿದ್ದೇಶ್ವರ ನಿಲಯ'' ವಿದ್ಯಾನಗರ,
ದಾವಣಗೆರೆ - ೫೭೭೦೦೫

### ಗುರುತು ಕಥಾ ಸ್ಪರ್ಧೆ - ೨೦೦೩

ಮುಂಬಯಿ ಪ್ರಕಾಶಿತ ಗುರುತು ಪತ್ರಿಕೆಯು ಕಥಾ ಸ್ಪರ್ಧೆಯನ್ನು ಆಯೋಜಿಸಿದ್ದು ಕಥೆಗಾರರಿಂದ ಕಥೆಗಳನ್ನು ಆಹ್ವಾನಿಸುತ್ತದೆ.

ಕಥೆ ತಲುಪಬೇಕಾದ ಕೊನೆಯ ತಾರೀಖು ೩೧-೦೧-೨೦೦೩.

ಕಥೆಯ ಪ್ರತಿಕೃತಿಯನ್ನು ಸ್ವೀಕರಿಸುವುದಿಲ್ಲ.

ಬಹುಮಾನ ಮೊತ್ತ : ಪ್ರಥಮ ೫೦೦೦/-, ದ್ವಿತೀಯ ೩,೦೦೦/- ತೃತೀಯ ೨,೦೦೦/-

*ಕಥೆ ತಲುಪಬೇಕಾದ ವಿಳಾಸ*

ಸಂಪಾದಕರು, ಗುರುತು ಕಥಾ ಸ್ಪರ್ಧೆ - ೨೦೦೩
ಬಿಲ್ಲವಾ ಜಾಗೃತಿ ಬಳಗ, ೧, ಮೋತಿವಾಲಾ ಮ್ಯಾನ್ಷನ್, ನಾದಿರ್‌ಶಾ ಸುಖಿಯಾ ಸ್ಟ್ರೀಟ್, ಫೋರ್ಟ್, ಮುಂಬಯಿ- ೪೦೦ ೦೦೧

# ಮನುಷ್ಯ ಪ್ರಾಮಾಣಿಕವಾಗಿ ಬದುಕಲು ಸಾಧ್ಯವೇ ?

ಕಳೆದ ಬದುಕಿನತ್ತ ಒಮ್ಮೆ ದೃಷ್ಟಿ ಹರಿಸಿದರೆ, ಪ್ರಾಮಾಣಿಕವಾಗಿ ಬದುಕಲು ನಡೆಸಿದ ನಿರಂತರ, ತೀವ್ರ ಹೋರಾಟ, ಆದ ಆಘಾತಗಳು ಕಣ್ಣುಗಳ ಮುಂದೆ ಚಿತ್ರ ತಳೆದು ನಿಲ್ಲುತ್ತವೆ. ಎಲ್ಲ ಮನುಷ್ಯರಿಗೂ ಬದುಕಿನಲ್ಲಿ ತಮ್ಮ ತಮ್ಮ ಛಾಪು ಮೂಡಿಸಬೇಕೆಂಬ ಪ್ರಬಲವಾದ ಇಚ್ಛೆ ಇರುತ್ತದೆ. ಇದರಿಂದಾಗಿಯೆ ವ್ಯಕ್ತಿ ವ್ಯಕ್ತಿಗಳ ನಡುವೆ ಘರ್ಷಣೆಗಳು ಜೀವ ತಾಳುತ್ತವೆ. ವ್ಯಕ್ತಿಯ ಅಹಂಗೆ ಪ್ರೀತಿ, ಸ್ನೇಹ, ಮಾನವೀಯತೆಗಳ ಕಡಿವಾಣ ಇಲ್ಲದಾಗ 'ಈವಿಲ್' (ಕೇಡು) ಮೇಲೆದ್ದು ಬರುತ್ತದೆ. ಮನುಷ್ಯನನ್ನು ಸಿನಿಕನನ್ನಾಗಿ ಮಾಡುವ, ದುಷ್ಟನನ್ನಾಗಿ ಮಾಡುವ ಶಕ್ತಿಗಳು ಯಾವುವು ? ಎಂಬುದರ ಬಗ್ಗೆ ಯೋಚನೆಗಳು ಓಡುತ್ತವೆ. ಹುಟ್ಟು ವಾಗಲೇ ವ್ಯಕ್ತಿಯೊಬ್ಬನಲ್ಲಿರುವ ಜೀನ್ಸ್, ಅವನ ವ್ಯಕ್ತಿತ್ವ ವನ್ನು ರೂಪಿಸುತ್ತದೆ, ಬದಲಾವಣೆ ಸಾಧ್ಯವೇ ಇಲ್ಲ – ಎಂದುಕೊಳ್ಳೋಣವೇ ? ಹಾಗೆ ಯೋಚನೆ ಮಾಡು ವುದು ಅಪಾಯಕಾರಿ. ಆಗ, ನಮ್ಮೆಲ್ಲ ಶಿಕ್ಷಣದ, ಸಂಘಟನೆಯ ಪ್ರಯತ್ನಗಳು ನೀರಿನಲ್ಲಿ ಹೋಮ ಮಾಡಿದಂತೆ ಎಂದು ಅಂದುಕೊಳ್ಳ ಬೇಕಾಗುತ್ತದೆ. 'ಅರಿವೇ ಗುರು' ಎಂಬ ಮಾತು ನೆನಪಾಗುತ್ತದೆ. ಮನುಷ್ಯ ತನ್ನನ್ನು ತಾನೇ ಅರಿತುಕೊಳ್ಳುವ ಮಟ್ಟಕ್ಕೆ ಮುಟ್ಟಲು ಭದ್ರವಾದ ನೈತಿಕ, ಧಾರ್ಮಿಕ ನೆಲೆಗಟ್ಟಿರಬೇಕು. ಈ ನೆಲೆಗಟ್ಟನ್ನು ಕಟ್ಟುವುದು ಹೇಗೆ ?

ಹಲವರು ಹಣ, ಮನೆ, ಆಸ್ತಿ– ಇವಿಷ್ಟರಲ್ಲೇ, ಅಂದರೆ ವ್ಯಾವಹಾರಿಕ ಬದುಕಿನ ಸುಖಗಳಲ್ಲೇ, ಸಂತೃಪ್ತಿಯನ್ನು ಕಾಣುತ್ತಾರೆ. ಅದಕ್ಕಾಗಿ ಇನ್ನಿಲ್ಲದ ಕೆಲಸಗಳನ್ನು ಮಾಡುತ್ತಾರೆ, ಸುಳ್ಳು ಹೇಳುತ್ತಾರೆ, ನಾಟಕ ಮಾಡುತ್ತಾರೆ, ಬೀಗುತ್ತಾರೆ. ಇನ್ನು ಕೆಲವರಿಗೆ 'ಒಳ್ಳೆಯದ'ನ್ನು ಮಾಡುವ ಹುಚ್ಚು ಅಂಟಿ ಕೊಂಡಿರುತ್ತದೆ. ಅಂಥಹವರು ಸಮಾಜ ಸೇವೆ ಮಾಡುತ್ತಾರೆ, ದಾನ ಕೊಡುತ್ತಾರೆ, ದೇವರ ಪೂಜೆ ಮಾಡುತ್ತಾರೆ ಇತ್ಯಾದಿ. ಮನುಷ್ಯನ ಮನಸ್ಸು ಸಂಕೀರ್ಣವಾದದ್ದು. ಆದ್ದರಿಂದ ಅಲ್ಲಿ ಹುಟ್ಟುವ ಭಾವಗಳು, ಭಾವಾವೇಶಗಳು ಅಸಂಖ್ಯ. ಇಂತಹ ಮನಸ್ಸಿಗೆ ಪ್ರಾಮಾಣಿಕವಾಗಿ ಬದುಕಬೇಕೆಂದು ಕೊಂಡವರು ಸಾಹಿತ್ಯ, ನಾಟಕ, ಕವಿತೆ, ಕಾದಂಬರಿ – ಹೀಗೆ ಏನೇನೋ ದಾರಿಗಳನ್ನು ಹುಡುಕಿಕೊಳ್ಳುತ್ತಾರೆ. ಆದರೆ, ಬರವಣಿಗೆಯಲ್ಲಿ ಮೂಡುವ ಸತ್ಯಾನ್ವೇಷಣೆ, ಬದುಕಿನ ದಾರಿಯಲ್ಲಿ ಜಾರಿಕೊಳ್ಳಲು ಸಾಧ್ಯವಾಗುವುದೇ ? ಎಂದು ಪ್ರಶ್ನೆ ಹುಟ್ಟಿದರೆ, 'ಇಲ್ಲ' ಎಂದೇ ಉತ್ತರ ಹೇಳಬೇಕಾಗುತ್ತದೆ. ಸಾಹಿತ್ಯ, ನಾಟಕ, ರಾಜಕೀಯ, ಸಮಾಜಸೇವೆ ಮುಂತಾದವು ಕೆಲವರಿಗೆ ಚಟವಾಗಿರುತ್ತವೆ, ಕೆಲವರಿಗೆ ಫ್ಯಾಷನ್ ಆಗಿರುತ್ತವೆ, ಕೆಲವರಿಗೆ ಉದ್ಯೋಗವಾಗಿರುತ್ತವೆ. ಅರಿವಿಗೂ ಇರವಿಗೂ ನಡುವೆ ವ್ಯತ್ಯಾಸವಿಲ್ಲದಂತೆ ಬದುಕುವ ಪ್ರಯತ್ನ ಮಾಡುತ್ತಿರುವವರು ಕೆಲವೇ ಮಂದಿ.

ಹಣಕ್ಕಾಗಿ ದುಡಿಯುವ ಮಂದಿ ಇದ್ದಾರೆ, ಹೆಸರಿ ಗಾಗಿ-ಕೀರ್ತಿಗಾಗಿ ಹಪಹಪಿಸುವ ಮಂದಿ ಇದ್ದಾರೆ. ಆದರೆ, ಇದ್ಯಾವ ಆಮಿಷಕ್ಕೂ ಒಳಗಾಗದೆ ಬದುಕಿನ ಸೌಂದರ್ಯ ವನ್ನು ಅಂತಃಕರಣದ, ಕರುಣೆಯ, ಪ್ರೇಮದ ನೆಲೆಯಲ್ಲಿ ಆವಿರ್ಭವಿಸಿಕೊಳ್ಳುವುದಕ್ಕೆ ಹೋರಾಡುವ ಮಂದಿ ಎಷ್ಟು ಜನ ಇದ್ದಾರೆ ? ಇಲ್ಲಿ, ಬೇಕೆಂದೇ 'ಹೋರಾಟ' ಎಂಬ ಪದವನ್ನು ಉಪಯೋಗಿಸಿದ್ದೇನೆ. ಏಕೆಂದರೆ, ಪ್ರಾಮಾಣಿಕ ವಾಗಿ ಬದುಕುವುದು ಎಂದರೆ ಸಂನ್ಯಾಸಿಯಂತೆ ಎಲ್ಲವನ್ನೂ ತ್ಯಜಿಸಿ ಬದುಕುವುದಲ್ಲ. ಹಿಂಸೆ, ಕ್ರೌರ್ಯ, ದುರಾಸೆಗಳು ತುಂಬಿರುವ ಈ ಬದುಕಿನ ಸಂಕೀರ್ಣತೆಯಲ್ಲೂ, ಬದುಕಲೊಂದು ದಾರಿ ಹುಡುಕುತ್ತಾ, ಪ್ರಾಮಾಣಿಕ ವಾಗಿರಬೇಕೆಂದರೆ ಅದೊಂದು ಹೋರಾಟವೇ ಸರಿ.

ವೇದಿಕೆಗಳಲ್ಲಿ ಸ್ತ್ರೀಸಮಾನತೆಯ ಬಗ್ಗೆ ಭಾಷಣ ಮಾಡಿ ಮನೆಯಲ್ಲಿ ಹೆಂಡತಿಯನ್ನು ಹೊಡೆಯುವ ಗಂಡಸರನ್ನು ನಾನು ಕಂಡಿದ್ದೇನೆ, ಜಾತ್ಯಾತೀತತೆಯ ಮಾತನಾಡುತ್ತ ಜಾತಿಯನ್ನು ಪಾಲಿಸುವ ಜನರನ್ನು ನಾನು ಕಂಡಿದ್ದೇನೆ. ಇಷ್ಟೇ ಅಲ್ಲ, ರಾಜಕಾರಣಿಗಳಿಗೆ ಭಾಷಣ ಮಾಡಲು ಒಂದು ಸಿದ್ಧವಾದ ಪದಭಂಡಾರವೇ ಇರುತ್ತದೆ. ಮಂತ್ರಗಳಂತೆ ಅವುಗಳನ್ನು ಅವರು ಉಚ್ಚರಿಸುತ್ತ, ಚಪ್ಪಾಳೆ ಗಿಟ್ಟಿಸುತ್ತ ಹೋಗುತ್ತಾರೆ. ಈ ರಾಜಕಾರಣಿಗಳ ಜೀವನ ವಿಧಾನಗಳನ್ನು ನೋಡಿದರೆ, ಅವರ ಭಾಷಣಗಳೆಲ್ಲ ಅರ್ಥವಿಲ್ಲದ, ಜೀವಸ್ಪರ್ಶವಿಲ್ಲದ, ಕುರ್ಚಿಗಾಗಿ ಮಾಡುವ ಬಡಬಡಿಕೆಗಳಷ್ಟೇ ಎಂದು ಅನ್ನಿಸದಿರದು. ಇನ್ನು, ಪ್ರಾಮಾಣಿಕತೆಯನ್ನು ಎಲ್ಲಿ ಹುಡಕಬೇಕು ?

ಆಸ್ತಿವಂತರಿಗೆ ಪ್ರಾಮಾಣಿಕವಾಗಿ ಬದುಕುವ ಅವಕಾಶವಿರುತ್ತದೆ. ಆದರೂ ಅವರಲ್ಲೆಷ್ಟೋ ಜನ ಅಪ್ರಾಮಾಣಿಕರಾಗಿಯೇ ಬದುಕುತ್ತಾರೆ. ಆದರೆ, ಹುಟ್ಟಾದರಿದ್ರನಿಗೆ ಹೊಟ್ಟೆಯ ಯೋಚನೆಯಲ್ಲಿ ಮೌಲ್ಯಗಳ ಬಗ್ಗೆ ಚಿಂತಿಸಲು ಸಮಯವೇ ಕಡಿಮೆ. ಅವನಿಗೆ ಹೇಗಾದರೂ ಮಾಡಿ ಎರಡು ಹೊತ್ತಿನ ಊಟಕ್ಕೆ, ಸಂಸಾರದ ಖರ್ಚಿಗೆ ಹೊಂದಿಸಿ ಕೊಳ್ಳುವುದೇ ಸಾಕು ಸಾಕಾಗುತ್ತದೆ. ಇಂತಹ ದರಿದ್ರ, ಬದುಕಲಿಕ್ಕಾಗಿ ಹಲವು ರಾಜಿಗಳನ್ನು ಮಾಡಿಕೊಳ್ಳ ಬೇಕಾಗುತ್ತದೆ. ಆದರೆ, ರಾಜಿ ಮಾಡಿಕೊಳ್ಳುವಾಗ ಆತನಲ್ಲಿ ಅದರ ಅರಿವನ್ನು ಜಾಗೃತವಾಗಿರಿಸುವುದು ಅವನ ನೈತಿಕ ಪ್ರಜ್ಞೆ. ನೈತಿಕ ಪ್ರಜ್ಞೆಯೇ ಇಲ್ಲದ ಮನುಷ್ಯ ಸಮಾಜಕಂಟಕನಾಗುತ್ತಾನೆ, ವ್ಯಕ್ತಿವಾದಿಯಾಗುತ್ತಾನೆ, ತನ್ನ ಸುತ್ತಲೂ ಭಯದ, ಅನುಮಾನದ ವಿಷವನ್ನು ಹರಡುತ್ತಾನೆ.

ಹೇಗಾದರೂ ಬದುಕಿದರೆ ಸಾಕು ಎಂದುಕೊಳ್ಳುವುದ ಕ್ಕಿಂತ, ಯಾವುದಾದರೂ ಆದರ್ಶಗಳಿಗಾಗಿ ಬದುಕಲು ಹಲವರು ಹವಣಿಸುತ್ತಾರೆ. ಇದ್ಯಾಕೆ ಹೀಗೆ ? ಎಂಬ ಪ್ರಶ್ನೆ ನನ್ನನ್ನು ಸದಾ ಕಾಡುತ್ತದೆ. ಮನುಷ್ಯ ಪ್ರಾಣಿಗಳಂತಲ್ಲ, ಅವನು ಮನೋಜೀವಿ. ತನ್ನ ಮನಸ್ಸನ್ನು ಸಂತೋಷ ದಿಂದಿಟ್ಟುಕೊಳ್ಳಲು ಎಲ್ಲ ಮನುಷ್ಯರೂ ಹವಣಿಸುತ್ತಾರೆ. ಹುಟ್ಟಾ ಕ್ರಿಮಿನಲ್‌ಗಳು ನನಗೊಂದು ಗೂಢ ಪ್ರಶ್ನೆಯೇ.... ಇವರಿಗೆ ಹಿಂಸೆಯಿಂದ, ಕ್ರೌರ್ಯದಿಂದ ಸಂತೋಷ ಸಿಗುತ್ತದೆಯೇ ? ಇಂತಹವರಿಗಾಗಿಯೇ ಜೈಲು, ಪೊಲೀಸು ವ್ಯವಸ್ಥೆಗಳು ಅನಿವಾರ್ಯವಲ್ಲವೇ ?

ಒಟ್ಟಿನಲ್ಲಿ ಪ್ರಾಮಾಣಿಕತೆಯೆಂಬುದು ಉರುಳಾಗದೆ, ಪ್ರೀತಿಯನ್ನು ಉದ್ದೀಪಿಸುವ ಸೆಲೆಯಾದರೆ ಮಾತ್ರ ಅದು ಬದುಕೀತು....

ಎಸ್. ಮಾಲತಿ
ಮಹಾಲಸ ನಿಲಯ, ಜೋಗ್ ರೋಡ್
ಸಾಗರ - ೫೭೭ ೪೦೧ ಶಿವಮೊಗ್ಗ ಜಿಲ್ಲೆ

# ಅಕ್ಷರಗಳಿಂದ ಸ್ವಾಭಿಮಾನದತ್ತ

**ಪ್ರ**ತಿದಿನ ಮುಂಜಾನೆ ಮತ್ತು ಸಾಯಂಕಾಲ ಕಾಫಿ ಸೇವನೆಗಾಗಿ ನನ್ನ ನೆಚ್ಚಿನ ಹೋಟೆಲಿಗೆ ಹೋಗುವುದು ನನ್ನ ದಿನಚರಿಯಲ್ಲೊಂದಾಗಿತ್ತು.

ಬಿಸಿ ಕಾಫಿಯನ್ನು ಸೇವಿಸಿ ಪರಿಚಯದವರು ಸಿಕ್ಕರೆ ಅವರೊಂದಿಗೆ ಸ್ವಲ್ಪ ಹೊತ್ತು ವಿರಾಮವಾಗಿ ಮಾತನಾಡಿ ಹೊರಬಂದರೆ ಹೋಟೆಲಿನ ಬಾಗಿಲಲ್ಲೇ ನಿಂತಿರುತ್ತಿದ್ದ ವೆಂಕಟಗಿರಿ ತನ್ನ ಕೈಯನ್ನು ನನ್ನ ಮುಂದೆ ಚಾಚುತ್ತಿದ್ದ. ನಾಲ್ಕಾಣೆ ಇಲ್ಲವೆ ಎಂಟಾಣೆಯನ್ನು ಕೊಟ್ಟರೆ ಸಾಕು ಸಂತೋಷದಿಂದ ತನ್ನ ಕಿಸೆಗೆ ಸೇರಿಸಿ ವಂದನೆ ಹೇಳುತ್ತಿದ್ದ.

ಆರೋಗ್ಯವಂತನಾಗಿದ್ದು, ದೃಢಕಾಯನಾದ ಆತನನ್ನು ಒಂದು ದಿನ ''ಈ ವೃತ್ತಿಯಿಂದ ನಿನ್ನ ಹೊಟ್ಟೆ ತುಂಬುವುದೇ ಗಿರಿ ?'' ಎಂದು ಪ್ರಶ್ನಿಸಿದೆ.

''ಹೌದು ಸಾರ್,'' ಎಂದಷ್ಟೇ ಹೇಳಿ ಮತ್ತೊಬ್ಬರ ಮುಂದೆ ಕೈಚಾಚಿ ಅವರು ಕೊಟ್ಟಿದ್ದನ್ನು ತನ್ನ ಕಿಸೆಗೆ ಸೇರಿಸಿದ.

''ಗಿರಿ, ನಿನಗೆ ದುಡಿದು ತಿನ್ನುವ ಶಕ್ತಿಯಿದೆ. ಈ ಭಿಕ್ಷಾವೃತ್ತಿಯನ್ನು ತೊರೆದು ಯಾವುದಾದರೊಂದು ಕೆಲಸಕ್ಕೆ ಸೇರಿ ಮರ್ಯಾದೆಯಿಂದ ಬದುಕುವುದನ್ನು ಕಲಿ'' ಎಂದೆ.

ಗಿರಿ ''ಅಕ್ಷರ ಜ್ಞಾನವಿಲ್ಲದ ಈ ಮೂಢನಿಗೆ ಯಾರು ಕೆಲ್ಸ ಕೊಡ್ತಾರೆ ಬುದ್ಧಿ ?'' ಎಂದ

''ನಿನ್ನ ಶರೀರದಲ್ಲಿ ಶಕ್ತಿಯಿದೆ. ಬದುಕಬೇಕೆಂಬ ಆಸೆ ಇದೆ. ನೋಡು ನೀನಿಷ್ಟ ಪಟ್ರೆ ನನ್ನ ಸ್ನೇಹಿತನ ಕಾರ್ಖಾನೆಯಲ್ಲೊಂದು ಕೆಲ್ಸ ಕೊಡಿಸ್ತೀನಿ, ಕಷ್ಟ ಪಟ್ಟು ದುಡ್ದ್ರೆ ಈ ಸಮಾಜದಲ್ಲಿ ಎಲ್ಲರಂತೆ ನೀನೂ ಸಹ ಗೌರವದಿಂದ ಬದುಕಬಹುದು'' ಅಂತ ಅವನನ್ನು ರೇಗಿಸಿದೆ. ಅವನು ಸ್ವಲ್ಪ ಹೊತ್ತು ಮೌನತಳೆದ ನಂತರ, ''ನಿಮ್ಗೆ ಎಂಗ್ ತೋಚುತ್ತೋ ಅಂಗ್ ಮಾಡಿ'' ಎಂದ. ಒಂದೆರಡು ದಿನಗಳು ಆದಮೇಲೆ ನನ್ನ ಸ್ನೇಹಿತನನ್ನು ಭೇಟಿ ಮಾಡಿ ಅವನ ಕಾರ್ಖಾನೆಯಲ್ಲಿ ವೆಂಕಟಗಿರಿಗೊಂದು ಕೆಲಸ ಕೊಡಿಸುವಲ್ಲಿ ಸಫಲನಾದೆ.

ಮೊದಲ ವರ್ಷ - ಸಂಬಳ ಕಡಿಮೆ, ನಂತರದ ವರ್ಷಗಳಲ್ಲಿ ಅವನ ದುಡಿಮೆಯನ್ನು ನೋಡಿ ಸಂಬಳವನ್ನು ಹೆಚ್ಚಿಸುವುದಾಗಿ ತಿಳಿಸಲಾಯಿತು.

ಮಾರನೇ ದಿನದಿಂದ ವೆಂಕಟಗಿರಿಯ ಸುಳಿವು ಹೋಟೆಲಿನ ಬಳಿ ಕಾಣಲಿಲ್ಲ. ಅಂದರೆ ಆತ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿರಬಹುದೆಂದು ಊಹಿಸಿ, ಸಂತೋಷ ಪಟ್ಟೆ. ಆದರೂ ಸಹ ಪರೀಕ್ಷಿಸಿ ನೋಡಬೇಕೆಂಬ ಉದ್ದೇಶದಿಂದ ನನ್ನ ಸ್ನೇಹಿತನಿಗೆ ಫೋನ್ ಮಾಡಿ ವೆಂಕಟಗಿರಿಯ ಬಗ್ಗೆ ವಿಚಾರಿಸಿದೆ. ಆತ ಕೆಲಸಕ್ಕೆ ಬಂದಿರುವುದಾಗಿ ತಿಳಿದು ನನಗೆ ಯಾವುದೋ ದಿಗ್ವಿಜಯ ಸಾಧಿಸಿದಷ್ಟು ಖುಷಿಯಾಯಿತು.

ಕೆಲಸದ ಒತ್ತಡದಿಂದಾಗಿ ಒಂದು ತಿಂಗಳ ಕಾಲ ನನ್ನ ಸ್ನೇಹಿತನನ್ನು ಭೇಟಿ ಮಾಡಲು ಸಾಧ್ಯವಾಗಲಿಲ್ಲ.

ಒಂದು ದಿನ ಸಾಯಂಕಾಲ ಲೋಕಾಭಿರಾಮವಾಗಿ ನನ್ನ ಸ್ನೇಹಿತನ ಕಾರ್ಖಾನೆಯತ್ತ ಹೋಗಿದ್ದೆ. ವೆಂಕಟಗಿರಿಯನ್ನು ನೋಡಿ ಮಾತನಾಡಬೇಕೆಂಬ ಕುತೂಹಲದಿಂದ ಅವನ ಕೊಠಡಿಗೆ ಹೋದೆ.

ಒಂದನೇ ತರಗತಿಯ ಕನ್ನಡ ಪುಸ್ತಕವನ್ನು ಕೈಯಲ್ಲಿ ಹಿಡಿದು ಅಕ್ಷರಗಳನ್ನು ಕೂಡಿಸಿಕೊಂಡು ನಿಧಾನವಾಗಿ ಓದುತ್ತಿದ್ದ. ''ಏನ್ ಗಿರಿ ಅಕ್ಷರಾಭ್ಯಾಸ ಎಲ್ಲಿಯವರೆಗೆ ನಡೆದಿದೆ ?'' ಎಂದು ಕೇಳಿದೆ.

ತಲೆಯೆತ್ತಿ ನೋಡಿ ''ನಮಸ್ಕಾರ ಒಳಗ್ಬನ್ನಿ ಸಾರ್'' ಎಂದು ಗಿರಿ ಬರಮಾಡಿಕೊಂಡ.

ಷೂಗಳನ್ನು ಬಿಚ್ಚಿ ಕೊಠಡಿಯೊಳಕ್ಕೆ ಹೋಗಿ ಕುಳಿತೆ. ''ಸಾರ್, ನಂಜೊತೇಲಿ ಕೆಲ್ಸ ಮಾಡ್ತಿರೋ ಹುಡ್ಗ ಚೆನ್ನಾಗಿ ಓದವ್ನೆ ; ಅವ್ನಿಂದ ಓದು ಬರಹ ಕಲೀತಿದ್ದೀನಿ'' ಎಂದ.

ಸಂತೋಷದಿಂದ ನಾನು ಅವನ ಬೆನ್ನು ತಟ್ಟಿ ''ವಿದ್ಯೆಗಿಂತ ಶ್ರೇಷ್ಠವಾದ ಆಸ್ತಿ ಮತ್ತೊಂದಿಲ್ಲ ಚೆನ್ನಾಗಿ ಓದುಬರಹ ಕಲ್ತು ನಿನ್ನ ಬಾಳು ಬಂಗಾರ ಮಾಡಿಕೊ'' ಎಂದೆ.

''ಆಗ್ಲಿ ಸಾರ್, ಬಿಡುವಿದ್ದಾಗ, ವ್ಯರ್ಥ ಮಾಡ್ದೆ ಅಕ್ಷರಾಭ್ಯಾಸ ಮಾಡ್ತೀನಿ'' ಎಂದ.

ದಿನಗಳುರುಳಿದವು. ವೆಂಕಟಗಿರಿಯನ್ನು ಭೇಟಿ ಮಾಡುವ ಉದ್ದೇಶದಿಂದ ಅವನಿರುವ ಕಾರ್ಖಾನೆಯತ್ತ ನಡೆದೆ.

ದಾರಿಯಲ್ಲೇ ಅವನ ಮನೆ ಇದೆಯೆಂದು ಗೊತ್ತಾಯಿತು.

ಈಗವನು ಸಣ್ಣ ಕೊಠಡಿಯನ್ನು ಬಿಟ್ಟು ಸ್ವಲ್ಪ ದೊಡ್ಡದಾದ ಮನೆಯಲ್ಲಿ ವಾಸವಾಗಿದ್ದ. ಆ ಮನೆಯೊಳಗಡೆ ಐದಾರು ಜನ ಕುಳಿತಿದ್ದರು. ಇದೇನಿದು, ವೆಂಕಟಗಿರಿ ಮತ್ತೆ ತನ್ನ ಹಳೆಯ ವೃತ್ತಿಯನ್ನು ಪ್ರಾರಂಭಿಸಲು ಸನ್ನಾಹ ಮಾಡುತ್ತಿರುವನೇ ಎಂದು ಯೋಚಿಸುತ್ತ ಒಳ ನಡೆದೆ.

''ನಮಸ್ಕಾರ ಸಾರ್'' ಎಂದು ವೆಂಕಟಗಿರಿ ನನ್ನನ್ನು ಆಹ್ವಾನಿಸಿದ.

ಕುಳಿತಿದ್ದವರ ಕಡೆಗೆ ಕೈ ತೋರಿಸಿ ''ಇವರೆಲ್ಲ ನನ್ನ ಸ್ನೇಹಿತರು. ನನ್ನ ಜೊತೆ ಭಿಕ್ಷೆ ಬೇಡ್ತಿದ್ದೋರು. ಈಗ್ಲೂ ಅವರಿಗೆ ಅದೇ ಸಂಪಾದನೆ'' ಎಂದ.

''ಭಿಕ್ಷಾವೃತ್ತಿಯೊಂದು ಅವಮಾನಕರವಾದ ವೃತ್ತಿ ಅಂತ ನಿಮ್ಮಿಂದ ತಿಳಿದ ನಾನು ಅಂತಹ ಹೇಯವೃತ್ತಿಯನ್ನು ಬಿಟ್ಟು ಜೀವನದಲ್ಲಿ ನೆಲೆ ಕಾಣೋದಕ್ಕೆ ಸಾಧ್ಯ ಆಯಿತು. ಈವೊಂದು ಉಪಕಾರಕ್ಕೆ ನಿಮಗೆ ನಾನು ತುಂಬಾ ಚಿರ ಋಣಿ, ಸಾರ್'' ಎಂದು ಸಮಾಧಾನದಿಂದ ನಕ್ಕ. ''ಭಿಕ್ಷಾವೃತ್ತಿಯಲ್ಲೇ ತೊಳಲಾಡುತ್ತಿರೋ ಇವರಿಗೆ, ಸ್ನೇಹಿತರಿಗೆ ಅಂತಹ ಅರಿವನ್ನು ಮೂಡಿಸಲು ಪ್ರತಿದಿನ ಅಕ್ಷರಾಭ್ಯಾಸ ಮಾಡಿಸುತ್ತಾ ಇದ್ದೀನಿ'' ಎಂದು ಎದೆ ಮುಂದುಮಾಡಿದ.

ಅವನ ಮಾತಿನಿಂದ ನನಗೆ ಅಪರಿಮಿತವಾದ ಆನಂದವಾಯಿತು.

ವೆಂಕಟಗಿರಿಯನ್ನು ಅಪ್ಪಿಕೊಂಡು ಅವನಿಗೆ ಆ ಪ್ರಯತ್ನದಲ್ಲಿ 'ಯಶಸ್ಸು ದೊರೆಯಲಿ' ಎಂದು ಹಾರೈಸಿದೆ.

ಎಚ್. ಗವಿಸಿದ್ದಯ್ಯ
ಬುಳ್ಳಹಳ್ಳಿ, ಹಾರೋಹಳ್ಳಿ ಅಂಚೆ, ದೇವನಹಳ್ಳಿ, ತಾ।। ಬೆಂಗಳೂರು ಗ್ರಾ - ಜಿಲ್ಲೆ

## ಕಾಂ. ವಾಸುದೇವ ರಾವ್ ಇನ್ನಿಲ್ಲ

**ಕ**ಮ್ಯುನಿಸ್ಟ್ ಪಾರ್ಟಿಯ ನಿಷ್ಠಾವಂತ ಕಾರ್ಯಕರ್ತ, ಸ್ವಾತಂತ್ರ್ಯ ಹೋರಾಟಗಾರ, ಪತ್ರಕರ್ತ, ಲೇಖಕ ಕಾಂ. ಕೆ. ವಾಸುದೇವ ರಾವ್ ಇವರು ತಮ್ಮ ೯೧ನೇ ವಯಸ್ಸಿನಲ್ಲಿ ನವೆಂಬರ್ ೧೨ರಂದು ಲಕ್ನೋದಲ್ಲಿ ನಿಧನ ಹೊಂದಿದರೆಂದು ವಿಷಾದದಿಂದ ತಿಳಿಸಬಯಸುತ್ತೇವೆ.

ಕೆ. ವಿ. ರಾವ್ ಎಂದೇ ಎಲ್ಲರಿಗೂ ಪರಿಚಿತರಾಗಿದ್ದ ವಾಸುದೇವ ಹುಟ್ಟಿದ್ದು ಕೋಲಾರ ಜಿಲ್ಲೆಯ ಗ್ರಾಮವೊಂದರಲ್ಲಿ, ಬೆಂಗಳೂರಿನಲ್ಲಿ ಇಂಟರ್ ಮೀಡಿಯೆಟ್ ಓದುತ್ತಿರುವಾಗಲೇ ಗಾಂಧೀಜಿ ಕರೆಗೆ ಓಗೊಟ್ಟು ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ಕಾಂಗ್ರೆಸ್ ಸೇವಾದಳ ಸೇರಿ ಖಾದಿ ಪ್ರಚಾರ ಕೈಗೊಂಡ ವಾಸುದೇವ ಕೆಲಕಾಲ ಗಾಂಧಿ ಆಶ್ರಮದಲ್ಲಿ ಇದ್ದರಲ್ಲದೆ, ಹಿರಿಯ ಕಾಂಗ್ರೆಸ್ ನಾಯಕ ರಂಗನಾಥ ದಿವಾಕರ ರಾಯರ ಜೊತೆಯಲ್ಲಿ ಬಂಗಾಳ ಕ್ಷಾಮದ ಕಾಲದಲ್ಲಿ ಪರಿಹಾರ ಕಾರ್ಯದಲ್ಲಿ ಸ್ವಯಂಸೇವಕರಾಗಿ ದುಡಿದವರು. ಅನಂತರ ಮುಂಬಯಿಯಲ್ಲಿ ಉದ್ಯೋಗ ಮಾಡತೊಡಗಿದ ವಾಸುದೇವ ಕಮ್ಯುನಿಸ್ಟ್ ಪಕ್ಷ ಸೇರಿ ಪಕ್ಷದ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಮುಂಬಯಿಯ ಕನ್ನಡ ಚಟುವಟಿಕೆಗಳಲ್ಲೂ ಭಾಗವಹಿಸುತ್ತಿದ್ದ ಅವರು ಕರ್ನಾಟಕ ಕಮ್ಯುನಿಸ್ಟ್ ಪಾರ್ಟಿಯ ಜೊತೆ ನಿಕಟ ಸಂಪರ್ಕ ಹೊಂದಿದ್ದರು. ಮುಂಬಯಿಯ ಪ್ರಸಿದ್ಧ ವಕೀಲ ಟಿ. ಎಸ್. ಹೆಗಡೆಯವರ ಜೊತೆಯಲ್ಲಿ 'ಸಮದರ್ಶಿ'ಎಂಬ ಪುರೋಗಾಮಿ ಮಾಸಪತ್ರಿಕೆ ಸಂಪಾದಿಸುತ್ತಿದ್ದರು. ಸಾಹಿತಿ ನಿರಂಜನರ ನಿಕಟವರ್ತಿಯಾಗಿದ್ದ ಅವರು ನಿರಂಜನ ಪ್ರಾರಂಭಿಸಿದ 'ಪುರೋಗಾಮಿ ಪ್ರಕಾಶನ'ದ ಸಹಸಂಪಾದಕರಾಗಿದ್ದರು. ಸೋವಿಯತ್ ವಾರ್ತಾ ವಿಭಾಗದಲ್ಲಿ ಮೂರು ದಶಕಗಳಿಗೂ ಹೆಚ್ಚು ಕಾಲ ದುಡಿದ ವಾಸುದೇವ ಹಲವು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. 'ಕಮ್ಯುನಿಸ್ಟ್ ಮ್ಯಾನಿಫೆಸ್ಟೋ' ಮತ್ತು ಮ್ಯಾಕ್ಸಿಂ ಗೋರ್ಕಿಯ 'ತಾಯಿ' ಕಾದಂಬರಿಯನ್ನು ಕನ್ನಡಿಸಿದ ಮೊದಲಿಗರು ಅವರು. 'ತಾಯಿ' ಕಾದಂಬರಿ ಚಿತ್ರಗುಪ್ತ ಪತ್ರಿಕೆಯಲ್ಲಿ 'ನಿರಂಜನ ವಾಸುದೇವ ಹೆಸರಿನಲ್ಲಿ ಧಾರಾವಾಹಿಯಾಗಿ ಪ್ರಕಟವಾಗುತ್ತಿತ್ತು. ಜೆಕೋಸ್ಲೋವಾಕಿಯಾದ ಕಮ್ಯುನಿಸ್ಟ್ ನಾಯಕ ಜ್ಯೂಲಿಯಸ್ ಫ್ಯೂಚಿಕರ ಸ್ವಾನುಭವ ಕಥನ 'ನೇಣುಗಂಬದ ನೆರಳಿನಲ್ಲಿ' ಕನ್ನಡಿಸಿದವರು ವಾಸುದೇವ.

ಅವರ ನಿಧನದಿಂದ ಹಿರಿಯ ಕಮ್ಯುನಿಸ್ಟ್ ಕಾರ್ಯಕರ್ತರನ್ನು ಕಳೆದುಕೊಂಡಂತಾಗಿದೆ. ಅವರ ಕುಟುಂಬ ಪರಿವಾರದವರಿಗೆ 'ಹೊಸತು' ಬಳಗ ಈ ಮೂಲಕ ಸಂತಾಪ ಸೂಚಿಸುತ್ತದೆ.

- ಸಿ.ಯಾರ್ಕೆ

ಇಂದು ದೇಶಕ್ಕೆ ಆಕ್ರಮಣಕಾರಿಗಳಿಗಿಂತಲೂ ಅಥವಾ ಉಗ್ರವಾದಿಗಳಿಗಿಂತಲೂ ಅಧಿಕ ಅಪಾಯವಿರುವುದು 'ಕುರ್ಚಿ' ಮತ್ತು 'ಆಡಳಿತ ಪಿಪಾಸೆ'ಯ ರಾಜಕೀಯ ನಾಯಕರಿಂದ. ಅಪರಾಧ ಪ್ರವೃತ್ತಿಯ ಈ ಜನ ಇಂದು ಕಾನೂನು ರಚಿಸುವ ಸದನದ ತನಕ ತಲುಪುತ್ತಿದ್ದಾರೆ. ಇಂತಹ ನಾಯಕರು ಸಮಾಜದಲ್ಲಿ ಯಾವ ರೀತಿಯ ನೈತಿಕ ಮೌಲ್ಯ ಸ್ಥಾಪಿಸಲು ಸಾಧ್ಯವಿದೆ ?

ಪ್ರಜಾಪ್ರಭುತ್ವ ಎಂದು ಕರೆಸಿಕೊಳ್ಳಬೇಕಾದರೆ ಮೂರು 'ಸಿ'ಗಳು ಅಗತ್ಯ ಎಂದು ವಿನ್ಸ್ಟನ್ ಚರ್ಚಿಲ್ ಹೇಳಿದ್ದರು. ಅವುಗಳೆಂದರೆ ಕಾನ್ಶಸ್ (ಅಂತಃಸಾಕ್ಷಿ), ಕಾನ್ಸ್ಟಿಟ್ಯೂಎನ್ಸಿ (ಚುನಾವಣಾ ಕ್ಷೇತ್ರ) ಮತ್ತು ಕಂಟ್ರಿ (ದೇಶ).

ಆದರೆ ಭಾರತದಲ್ಲಿ ಇದು ಬೇರೆಯೇ ಆದ ಅರ್ಥವನ್ನು ಪ್ರತಿಪಾದಿಸಲು ಹೊರಟಂತಿದೆ. ಇಲ್ಲಿ ಮೂರು 'ಸಿ' ಯಾವುದು ? ಕ್ಯಾಸ್ಟಿಸಂ (ಜಾತಿವಾದ), ಕರಪ್ಶನ್ (ಭ್ರಷ್ಟಾಚಾರ) ಮತ್ತು ಕ್ರಿಮಿನಲೈಸೇಶನ್ (ಅಪರಾಧೀಕರಣ). ಭಾರತದಲ್ಲಿ ೧೯೬೨ರ ಮಹಾ ಚುನಾವಣೆಯ ನಂತರ ಭ್ರಷ್ಟಾಚಾರ ಎನ್ನುವುದು ಉನ್ನತ ಸ್ಥಾನವನ್ನು ಅಲಂಕರಿಸುತ್ತಾ ಬಂದಿದೆ ಎನ್ನುವ ತಜ್ಞರ ಮಾತನ್ನು ಅಲ್ಲಗಳೆಯಲಾದೀತೇ ?

'ಜನಪ್ರತಿನಿಧಿ'ಯು ಚುನಾವಣೆಯಲ್ಲಿ ವಿಜಯಿಯಾದ ನಂತರ 'ಧನಪ್ರತಿನಿಧಿ' ಎಂದು ಕರೆಸಿಕೊಳ್ಳಲು ಇಷ್ಟಪಡುತ್ತಿದ್ದಾನೆ.

ಶ್ರೀನಿವಾಸ [illegible]

# ನಿದ್ರಿಸುತ್ತಿರುವ ಮತದಾರ ಮತ್ತು ಕೋಮುಗಲಭೆಗಳು

ಇಂತಹ ದೃಶ್ಯವಿರುವಾಗ ಕೋಮುಗಲಭೆಗಳಲ್ಲಿ ರಾಜಕೀಯ ಪಾತ್ರವನ್ನು ಕೆದಕುವ ಮೊದಲು ಸದ್ಯದ ರಾಜಕೀಯ ರಂಗದತ್ತ ದೃಷ್ಟಿ ಹರಿಸಬೇಕು. ಹೆಚ್ಚಿನ ಸಮಸ್ಯೆಗಳ ಮೂಲ ಇರುವುದೇ ರಾಜಕೀಯದಲ್ಲಿ. ಅದು ಸರಿಯಾಗಿದ್ದರೆ ನಂತರದ ಎಲ್ಲವೂ ಸರಿಯಾಗಿಬಿಡುತ್ತದೆ. ಪ್ರತಿಯೊಂದು ಕ್ಷೇತ್ರದಲ್ಲೂ (ಪ್ರಶಸ್ತಿಗಳನ್ನು ಹಿಡಿದು) ರಾಜಕೀಯವು ತನ್ನ 'ಮೂಗು' ತೂರಿಸುತ್ತಾ ಬರುವುದರಿಂದ ಅದನ್ನು ಸರಿಪಡಿಸದೆ ಮುಂದುವರಿದರೆ ಸಮಸ್ಯೆಗಳು ಪರಿಹಾರವಾಗುವ ಮಾತು ಕನಸಾಗಿ ಉಳಿದುಬಿಡುತ್ತದೆ. ಇಂದು ಅಪರಾಧಿಗಳೇ ಚುನಾವಣೆಗೆ ಸ್ಪರ್ಧಿಸಿ ಗೆದ್ದು ಬರುತ್ತಿದ್ದಾರೆ. ಇತ್ತೀಚೆಗೆ ಹಲವೆಡೆ ಇಂತಹ ಪ್ರಸಂಗಗಳು ಮಾಮೂಲಿಯಾಗಿಬಿಡುತ್ತಿವೆ.

ನಮ್ಮ ಕೆಲವು ಪ್ರಮುಖ ಚುನಾವಣೆಗಳನ್ನು ಗಮನಿಸಿದರೆ ಕೆಲವು ಅಭ್ಯರ್ಥಿಗಳಿಗೆ ಟಿಕೇಟುಗಳನ್ನು ಅವರು ಗೆಲ್ಲುವ ಸಾಮರ್ಥ್ಯವನ್ನು ಅವಲಂಬಿಸಿ ನೀಡಲಾಗಿದೆಯೇ ಹೊರತು ಆ ಅಭ್ಯರ್ಥಿ ಅಪರಾಧಿ ಹೌದೋ ಅಲ್ಲವೋ ಎನ್ನುವುದನ್ನು ವಿಮರ್ಶೆ ಮಾಡಲು ಹೋಗಿಲ್ಲ. ಭಾರತದ ಕೆಲವು ಪ್ರಮುಖ ರಾಜಕೀಯ ಪಕ್ಷಗಳಲ್ಲಿ 'ಅಭ್ಯರ್ಥಿಗಳ ಆಯ್ಕೆ ಸಮಿತಿ'ಯ ಕೆಲವು ಸದಸ್ಯರಿಗೆ ಆ ಪಕ್ಷದ್ದೇ ಕೆಲವು ಅಭ್ಯರ್ಥಿಗಳು ತಮಗೆ 'ಟಿಕೇಟು' ಸಿಗುವುದಕ್ಕಾಗಿ ಹತ್ತರಿಂದ ಇಪ್ಪತ್ತೈದು ಲಕ್ಷ ರೂಪಾಯಿ ತನಕವೂ 'ಲಂಚ' ನೀಡಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ.

ಇಲ್ಲಿ ಬರೇ ಚುನಾವಣೆಯಲ್ಲಿ ಪಕ್ಷದ ಟಿಕೇಟ್ ಸಿಗುವುದಕ್ಕೆ ಇಷ್ಟು ಹಣ ಖರ್ಚು ಮಾಡಿದರೆ ಇನ್ನು ಚುನಾವಣೆಯಲ್ಲಿ ಗೆಲ್ಲುವುದಕ್ಕೆ ಅದೆಷ್ಟು ಖರ್ಚು ಮಾಡಲಾರರು ? ಊಹಿಸೋಣ. ಒಂದು ವೇಳೆ ಗೆದ್ದರೆ ಆ ನಂತರ ಇಷ್ಟೆಲ್ಲ ಹಣವನ್ನು ಚಕ್ರಬಡ್ಡಿ ಸಹಿತ ಜನರಿಂದ ವಸೂಲಿ ಮಾಡದೆ ಇರುತ್ತಾರೋ ?

ಸಿ.ಬಿ.ಐ.ಯ ಮಾಜಿ ನಿರ್ದೇಶಕ ಜೋಗಿಂದರ್ ಸಿಂಗ್ ಹೇಳಿದ್ದನ್ನು ನೆನಪಿಸಬೇಕಾಗಿದೆ. "ಭಾರತದಲ್ಲಿ ಈ ಸಮಯ ಸುಮಾರು ೪೦ ಸಂಸದರು ಮತ್ತು ೬೭೮ ಶಾಸಕರ ವಿರುದ್ಧ ಪೊಲೀಸ್ ಕಡತಗಳಲ್ಲಿ ಒಂದಲ್ಲ ಒಂದು ಕೇಸು ದಾಖಲಾಗಿದೆ."

ಕೇಂದ್ರ ಸರಕಾರವು ಈ ಮೊದಲು ಅಪರಾಧ ಮತ್ತು ರಾಜನೀತಿಯ ಒಳಗಿನ ಸಂಬಂಧಗಳ ತನಿಖೆಗಾಗಿ ಎನ್.ಎನ್. ವೋಹ್ರಾ ಸಮಿತಿಯನ್ನು ೧೯೯೩ರಲ್ಲಿ ಸ್ಥಾಪಿಸಿತು. ಆ ಸಮಿತಿ ತನ್ನ ವರದಿಯನ್ನೂ ನೀಡಿತ್ತು. ಆದರೆ ಫಲಿತಾಂಶ ಏನು ಬಂತು !


ನಾಗರಿಕರಿಗೆ ಪೊಲೀಸ್ ರಕ್ಷಣೆ

ಭಾರತದ ರಾಜಕಾರಣವು ನಿಶ್ಚಿತವಾಗಿಯೂ ತೊಂಬತ್ತರ ದಶಕದ ನಂತರ ಕೇವಲ 'ಪ್ರತಿಗಾಮಿ' ನಿಲುವು ಮಾತ್ರವಲ್ಲ, 'ವಿಧ್ವಂಸಕಾರಿ' ಪ್ರವೃತ್ತಿಯತ್ತಲೂ ಮುಖ ಮಾಡಿದೆ. ಸ್ವಾತಂತ್ರ್ಯ ದೊರೆತ ಈ ೫೫ ವರ್ಷಗಳಲ್ಲಿ ನಾವು ಅಣುಬಾಂಬ್ ತಯಾರಿಸುವ ತನಕ ಪ್ರಗತಿ ಸಾಧಿಸಿದ್ದೇವೆ. ಆದರೆ ನಮ್ಮ ಸಮಾಜದ ನಡುವೆ ಭಾವೈಕ್ಯ ಬೆಳೆಸುವಲ್ಲಿ ಇನ್ನೂ ಸೋತಿದ್ದೇವೆ. ಕಳೆದ ಐದು ದಶಕಗಳಲ್ಲಿ ಅನೇಕ ಕೋಮುಗಲಭೆಗಳನ್ನು ಭಾರತ ದೇಶ ಅನುಭವಿಸಿದೆ. ಕೋಮುಗಲಭೆಗಳಲ್ಲೇ ಅತ್ಯಂತ ಭಯಾನಕವಾದುದು ಇತ್ತೀಚಿನ ಗುಜರಾತ್ ಕಾಂಡ ಎನ್ನಬಹುದು. 'ಸಾರೆ ಜಹಾಂಸೆ ಅಚ್ಚಾ ಹಿಂದೂಸ್ತಾನ್ ಹಮಾರಾ....' ಎಂದು ಯಾವ ಮುಖದಲ್ಲಿ ಹಾಡಬೇಕೆನ್ನುವುದೂ ಗೊಂದಲ ಹುಟ್ಟಿಸಬಹುದು.

ನಿಜ ಹೇಳುವುದಾದರೆ ನಾವು ಭಾರತೀಯರಿಗೆ ಯಾರಿಂದಲೂ ಧರ್ಮ ನಿರಪೇಕ್ಷತೆಯ ಪಾಠ ಕಲಿಯಬೇಕಾದ ಅಗತ್ಯವಿಲ್ಲ. ವಿವಿಧತೆಯಲ್ಲಿ ಏಕತೆ ನಮ್ಮ ಸಂಸ್ಕೃತಿ. ಬಹುಧರ್ಮ, ಬಹುಜಾತಿ ಮತ್ತು ಬಹು - ಆಯಾಮವುಳ್ಳ ಭಾರತದಲ್ಲಿ ಪ್ರತಿ ವ್ಯಕ್ತಿಯೂ ಇನ್ನೊಬ್ಬರ ಜಾತಿ, ಧರ್ಮ, ಭಾಷೆಯನ್ನು ಸನ್ಮಾನಿಸಿದರೆ ಆಗ ಮಾತ್ರ ವಿಕಾಸದ ದೃಶ್ಯ ಕಾಣಬಹುದಾಗಿದೆ.

ಭಾರತದಲ್ಲಿ ಕಂಡುಬಂದ ಕೆಲವು ಪ್ರಮುಖ ಕೋಮುಗಲಭೆಗಳನ್ನು ಗಮನಿಸಿದರೆ ೧೯೩೧ರಲ್ಲಿ ಕಾನ್ಪುರ, ೧೯೬೭ರಲ್ಲಿ ರಾಂಚಿ, ೧೯೬೯ರಲ್ಲಿ ಅಹ್ಮದಾಬಾದ್, ಭಿವಂಡಿ ಮತ್ತು ಜಲ್‌ಗಾಂವ್, ೧೯೭೦ರಲ್ಲಿ ಬನಾರಸ್, ೧೯೭೭ರಲ್ಲಿ ಜಮ್‌ಶಡ್‌ಪುರ, ೧೯೭೯ರಲ್ಲಿ ಮೇರಠ್, ೧೯೮೬- ೮೭ರಲ್ಲಿ ಬಾಗಲ್‌ಪುರ್, ೧೯೮೯ರಲ್ಲಿ ಅಯೋಧ್ಯೆ, ೧೯೯೨- ೯೩ರಲ್ಲಿ ಮುಂಬಯಿ ಮತ್ತು ೨೦೦೨ ರಲ್ಲಿ ಗುಜರಾತ್ ಕೋಮುಗಲಭೆಗಳು ಭೀಭತ್ಸ ನರಸಂಹಾರ ಘಟನೆಗಳನ್ನು ಕಾಣಿಸಿವೆ. ಕೆಲವು ಘಟನೆಗಳ ನಂತರ 'ತನಿಖಾ ಸಮಿತಿಗಳನ್ನು ರಚಿಸಲಾಗಿದ್ದು' ಅವು ತಮ್ಮ ವರದಿಯನ್ನೂ ನೀಡಿವೆ. ಅಲ್ಲಿಗೆ ಅದರ ಕತೆಯೂ ಮುಗಿದುಬಿಡುತ್ತದೆ. ಅದರಲ್ಲಿನ ಸಲಹೆಗಳು ಅನುಷ್ಠಾನಕ್ಕೆ ಬರುವುದೇ ಬಹು ಅಪರೂಪ.

ಭಾರತದಲ್ಲಿ ನಡೆಯುತ್ತಿರುವ ಕೋಮುಗಲಭೆಗಳಿಗೆ ಯಾರು ಜವಾಬ್ದಾರಿ ? ಉತ್ತರ ಬಹಳ ಕಷ್ಟ ಮತ್ತು ಕ್ಲಿಷ್ಟ. ಮೇಲುನೋಟಕ್ಕೆ ಬಹುಸಂಖ್ಯಾತ ಸಮಾಜವನ್ನೇ ಗಲಭೆಗೆ ಜವಾಬ್ದಾರಿ ಎನ್ನುತ್ತಾ ಬರಲಾಗಿದೆ. ಇನ್ನು ಕೆಲವರು ಪೊಲೀಸರೇ ಪರೋಕ್ಷ ಕಾರಣ ಎಂದರೆ ಇದರ ಹಿಂದೆ ರಾಜಕೀಯ ನಾಯಕರೂ ತಮ್ಮ ಪಾಲನ್ನು ನೀಡಿದ್ದಾರೆ.

ಭಾರತೀಯ ಪೊಲೀಸ್ ಸೇವೆಯ ವರಿಷ್ಠ ಅಧಿಕಾರಿ ವಿಭೂತಿ ನಾರಾಯಣ್ ಮೂರು ವರ್ಷದ ಹಿಂದೆ 'ಕೋಮುಗಲಭೆ ಮತ್ತು ಭಾರತೀಯ ಪೊಲೀಸ್' ಎನ್ನುವ ಪುಸ್ತಕ ಬರೆದಿದ್ದರು. ಬ್ರಿಟಿಷ್ ಸಾಮ್ರಾಜ್ಯದ ಅಂತರ್ವಿರೋಧದ ಕೊಡುಗೆಯಾದ ಈ ಕೋಮುಗಲಭೆ ಸ್ವಾತಂತ್ರ್ಯಾನಂತರ ತನ್ನ 'ಸ್ವರೂಪ' ಮತ್ತು 'ಕಾರಣ'ವನ್ನು ಬದಲಿಸಿದೆ. ಇದನ್ನು ತಡೆಯುವಲ್ಲಿ ಭಾರತೀಯ ಪೊಲೀಸರು ವಿಫಲರಾಗಿದ್ದಾರೆ. ಇದಕ್ಕೆ ಪ್ರಮುಖ ಕಾರಣ ಎಂದರೆ ಹೆಚ್ಚಿನ ಪೊಲೀಸರು ಬಹುಸಂಖ್ಯಾತ ಸಮಾಜದಿಂದ ಬಂದವರು. ಹೀಗಾಗಿ ಅವರು ಮಾನಸಿಕವಾಗಿ ಅಲ್ಪಸಂಖ್ಯಾತ ಸಮುದಾಯದ ವಿರುದ್ಧವೇ ಇರುತ್ತಾರೆ. ವಿಭೂತಿ ಹೇಳುವಂತೆ ನಮ್ಮ ಪೊಲೀಸರು ಒಂದು ವಿಶೇಷ ಪ್ರಕಾರದ ಪೂರ್ವಾಗ್ರಹ ಮತ್ತು ಅಲ್ಪಸಂಖ್ಯಾತ ವಿರೋಧಿ ಭಾವನೆಯಿಂದ ಕೆಲಸ ಮಾಡುತ್ತಿರುವುದೇ ಕೋಮುಗಲಭೆಯ ಸಮಯ ಅದನ್ನು ನಿಯಂತ್ರಿಸಲು ವಿಫಲರಾಗುತ್ತಿರುವುದಕ್ಕೆ ಕಾರಣ. ಅವರಿಗೆ ದೋಷಪೂರ್ಣ ತರಬೇತಿ ಸಿಗುತ್ತಿರುವುದೂ ಇಲ್ಲಿ ಮುಖ್ಯ ತೊಂದರೆಯಾಗಿದೆ.

ಶೀಲಾರಾಯ್ ಅನುವಾದಿಸಿದ 'ದಂಗೆಯ

ಇತಿಹಾಸ' ಎನ್ನುವ ಕೃತಿಯಲ್ಲಿ ಕೋಮುಗಲಭೆಯ ಕುರಿತಂತೆ ಇನ್ನೂ ಆಳವಾಗಿ ಕೆದಕಿದ್ದಾರೆ. ಧರ್ಮದ ರಾಜಕೀಯ ಉಪಯೋಗದ ಫಲಸ್ವರೂಪವಾಗಿ ಬೇರೆ ಮತಧರ್ಮಗಳ ವಿಷಯದಲ್ಲಿ ಅಸಹಿಷ್ಣುತೆಯ ಫ್ಯಾಸಿಸ್ಟ್ ಮನೋಭಾವ ಏನು ವಿಕಾಸವಾಗುತ್ತಿದೆಯೋ ಅದರಿಂದ ಸ್ವದೇಶ-ಸ್ವ ಸಮಾಜದ 'ಒಂದು ಭಾಗ'ವು 'ಇನ್ನೊಂದು ಭಾಗ'ವನ್ನು 'ದೇಶದ್ರೋಹಿ' ಎಂದು ತಿಳಿಯಲು ಹೊರಟಂತಿದೆ. ರಾಷ್ಟ್ರೀಯ ಏಕತೆಗಾಗಿ ಈ ದೃಶ್ಯ ಸಂಕಟ ತರುವಂಥದ್ದು. ಇಲ್ಲಿ 'ದನ' ಕೂಡಾ ಕೋಮು ಘರ್ಷಣೆಗಳಿಗೆ ಆರಂಭದಿಂದಲೂ ಚಿಕ್ಕದಾದ ನೆಪವಾಗಿ ಬಿಡುವುದಿದೆ. ಇನ್ನೊಂದು ಕಾರಣ 'ಧಾರ್ಮಿಕ ಆಚರಣೆಗಳ ಸಾರ್ವಜನಿಕ ಆಯೋಜನೆ ಮತ್ತು ಪ್ರದರ್ಶನ. ಮೆರವಣಿಗೆ ಸಂದರ್ಭದಲ್ಲಿ ಯಾರೋ ಕಿಡಿಗೇಡಿಗಳ ಸಣ್ಣ ಕಲ್ಲು ತೂರಾಟವೂ ಎಂತಹ ಭಯಾನಕ ಕೋಮುಗಲಭೆಗಳಿಗೆ ಕಾರಣವಾಗುವುದಿದೆ. ಇದನ್ನೆಲ್ಲ ಗಮನಿಸುವಾಗ ಅಧಿಕಾಂಶ ಕೋಮುಗಲಭೆಗಳಿಗೆ ಅಲ್ಲಿನ ಆಡಳಿತದವರ ನಿರ್ಲಕ್ಷ್ಯ ಭಾವನೆಗಳಿಂದಲೇ ಸಣ್ಣ ಕಿಡಿಯೊಂದರಿಂದಲೂ ಭುಗಿಲೆದ್ದು ಉರಿಯುವ ಶಕ್ತಿ ಬಂದುಬಿಡುತ್ತದೆ.

ಕೋಮುಗಲಭೆಗಳು ಕಡಿಮೆಯಾಗಬೇಕಾದರೆ ಸ್ವಚ್ಛ ಆಡಳಿತ ಇರಬೇಕು. ಅದು ಬರುವಂತೆ ಮತದಾರ ಪ್ರಾಮಾಣಿಕ ಅಭ್ಯರ್ಥಿಯನ್ನೇ ಆರಿಸಬೇಕು. ರಾಜಕೀಯ ನೇತಾರರು ತಮ್ಮ ಸ್ವಾರ್ಥವನ್ನೇ ನೋಡುತ್ತಾರೆ. ರಾಜಕೀಯ ಪಕ್ಷಗಳೂ ತಮ್ಮ ತಮ್ಮ ಸ್ವಾರ್ಥದ ಅನುಸಾರವೇ ಮುಖವಾಡ ಹಾಕಿಕೊಳ್ಳುತ್ತಿವೆ. ಇಂತಹ ಸ್ಥಿತಿಯಲ್ಲಿ ಮತದಾರನೂ ತನ್ನದಾದ ಸ್ವಾರ್ಥ ಇರಿಸಬೇಕಾಗಿದೆ. ಆ ಸ್ವಾರ್ಥ ಏನೆಂದರೆ ಸ್ವಚ್ಛ ಆಡಳಿತ ಕಂಡುಬರುವಲ್ಲಿ ತನಗೆ ಅರ್ಹವೆಂದು ಕಂಡ ಅಭ್ಯರ್ಥಿಗೇ ಮತ ಹಾಕಬೇಕು.

'ಚುನಾವಣೆಯ ದಾರಿ ಕಳ್ಳರ ದಾರಿ' ಎನ್ನುತ್ತಾ ಬಂದವರು ನಕ್ಸಲೀಯರು. ಈ ಮಾತಿನಲ್ಲಿ ಸ್ವಲ್ಪ ನಿಜಾಂಶ ಕೂಡ ಇದೆ. ಇಂದು ಕಳ್ಳರೇ ಚುನಾವಣೆಯಲ್ಲಿ ಸ್ಪರ್ಧಿಸುವುದು ಹೆಚ್ಚು! ಓರ್ವ ರಾಜಕಾರಣಿ ತನಗೆ ಸ್ಪರ್ಧಿಸಲು ಟಿಕೇಟು ಸಿಗಬೇಕಾದರೆ ಲಕ್ಷಗಟ್ಟಲೆ ಹಣ ಸುರಿಯುತ್ತಾನೆ. ಓರ್ವ ಪೊಲೀಸ್, ಎಸ್.ಐ. ತನಗೆ ಉದ್ಯೋಗ ಸಿಗಬೇಕಾದರೆ ಕೆಲವು ಲಕ್ಷ ರೂಪಾಯಿ ಸುರಿಯಬೇಕಾಗಿದೆ. ಇಂತಹ ವ್ಯಕ್ತಿಗಳು 'ಹುದ್ದೆ' ಸಿಕ್ಕಿದ ನಂತರ, ಅದರ ಹತ್ತು ಪಟ್ಟು ವಸೂಲಿ ಮಾಡದೆ ಇರುತ್ತಾರೋ ? ಇಂತಹ ವ್ಯವಸ್ಥೆಯ ಎದುರು ನಾಗರಿಕರು ಈ ರಾಜಕಾರಣಿಗಳಿಂದ, ಪೊಲೀಸರಿಂದ ಯಾವ ರೀತಿಯ ಪ್ರಾಮಾಣಿಕ ಸೇವೆ ನಿರೀಕ್ಷಿಸಲು ಸಾಧ್ಯವಿದೆ ? ಇಂತಹ ನಾಯಕರೆಲ್ಲ ಕೋಮುಗಲಭೆಗಳಲ್ಲಿ 'ಲಾಭ' ಗಳಿಸದೆ ಬಿಟ್ಟಾರೆಯೇ ?



*ಗಲಭೆ ನಿಯಂತ್ರಿಸಲು ರ್‍ಯಾಪಿಡ್ ಆಕ್ಷನ್ ಫೋರ್ಸ್*

ಈ ದಿನಗಳಲ್ಲಿ ಜಾತಿಮುಕ್ತ ರಾಜಕೀಯ ಕಾಣುವುದಕ್ಕೆ ಶಕ್ಯವೇ ಇಲ್ಲ, ಉತ್ತರ ಭಾರತದಲ್ಲಂತೂ ಜಾತಿ ಆಧಾರಿತ ರಾಜಕೀಯವೇ ಕೆಲಸ ಮಾಡುತ್ತಿದೆ. ಆಡಳಿತದ ಕುರ್ಚಿ ದಕ್ಕಿಸಿಕೊಳ್ಳಲು 'ಜಾತಿ'ಯವರೆಲ್ಲರೂ ಒಟ್ಟಾಗುತ್ತಿದ್ದಾರೆ. ಹೀಗಿದ್ದರೂ ಚುನಾವಣೆಗೆ ಮೊದಲು ಜಾತಿ ರಾಜಕೀಯದ ವಿಶ್ಲೇಷಣೆ ಮಾಡಿದ ಹಾಗೆ (ಹೆಚ್ಚಿನ ಪಕ್ಷಗಳಲ್ಲಿ ಆಯಾಯ ಚುನಾವಣಾ ಕ್ಷೇತ್ರದಲ್ಲಿ ಯಾವ ಜಾತಿಯ ಪ್ರಾಬಲ್ಯ ಇದೆಯೋ ಆ ಜಾತಿಯ ಅಭ್ಯರ್ಥಿಗೇ ಹೆಚ್ಚಿನ ಸಂದರ್ಭಗಳಲ್ಲಿ ಟಿಕೇಟ್ ನೀಡಲಾಗುತ್ತದೆ). ಚುನಾವಣೆಯ ನಂತರ ಆ ಬಗ್ಗೆ ಗಮನ ನೀಡುವುದೇ ಕಡಿಮೆ !

ನೇತಾರರು ಭ್ರಷ್ಟ ಆಗಿದ್ದಾರೆ ಎಂದ ಮಾತ್ರಕ್ಕೆ ಪೂರ್ತಿ ರಾಜಕೀಯ ರಂಗವೇ ಭ್ರಷ್ಟ ಆಗಿದೆಯೆಂದೇನೂ ಭಾವಿಸಬೇಕಾಗಿಲ್ಲ, ಮತದಾರ ಸಶಕ್ತನಿದ್ದರೆ ಎಂತಹ ಭ್ರಷ್ಟರಿಗೂ ಬುದ್ಧಿ ಕಲಿಸಲು ಶಕ್ಯನಿದ್ದಾನೆ. ಯಾವ ಧರ್ಮದವನೇ ಇರಲಿ, ಭಾರತದ ಪ್ರತಿ ನಾಗರಿಕನಿಗೂ ಸಮಾನ ಅಧಿಕಾರ ಮತ್ತು ಸಮಾನ ಕರ್ತವ್ಯ ಇದ್ದೇ ಇರುವುದು. ಹಿಂದುತ್ವದ ಭಾರತೀಯತೆಯ ಪಾಠ ಜನಕ್ಕೆ ಈಗಲೂ ಸ್ಪಷ್ಟವಾಗಿಲ್ಲ. ಇಂತಹ ಯೋಚನೆಗಳೇ ಕೆಲವೊಮ್ಮೆ ರಾಷ್ಟ್ರ ಹಿತದ ವಿರುದ್ಧ ತಿರುಗಿ ಬೀಳುವುದಿದೆ. 'ಸಹನಶೀಲತೆ' ಎನ್ನುವವರು ಅದರ 'ಮಿತಿ'ಯ ಬಗ್ಗೆ ಸರಿಯಾದ ಚರ್ಚೆಗೆ ಅವಕಾಶ ಕೊಡುತ್ತಿಲ್ಲ. 'ಸಹನಶೀಲತೆ' ಮತ್ತು 'ಸ್ವೀಕಾರ' ಇವೆರಡರ ಅರ್ಥ ಜನಕ್ಕೆ ಸ್ಪಷ್ಟಪಡಿಸಬೇಕು. ಇಲ್ಲವಾದರೆ ಕೆಲವು ಜನರ ಅಪರಾಧಕ್ಕಾಗಿ ಎಲ್ಲರಿಗೂ ಶಿಕ್ಷೆ ಸಿಗುವ ಇಂದಿನ ಸಮಾಜವು ಎಚ್ಚೆತ್ತುಕೊಳ್ಳುವುದೇ ಇಲ್ಲವೇನೋ ?

ಕತ್ತಲೆ ನಗರದ ನ್ಯಾಯದಲ್ಲಿ ವಿಶ್ವಾಸ ಇರಿಸಿದ ಮತೀಯವಾದಿಗಳು ರಾಷ್ಟ್ರದ ಸುರಕ್ಷತೆಗೆ ಅಪಾಯ ತರುತ್ತಿದ್ದಾರೆ. ಆದ್ದರಿಂದ ಒಬ್ಬರು ಇನ್ನೊಬ್ಬರನ್ನು 'ಸ್ವೀಕಾರ' ಮಾಡುವುದೇ ಇಂದಿನ ಅಗತ್ಯ. ಮತೀಯವಾದಿಗಳು (ಕಟ್ಟರ್ ಪಂಥಿ) ಅಪರಾಧಿ ಶಕ್ತಿಗಳು ಸಮಾಜದಲ್ಲಿ ಗೋಡೆಗಳನ್ನು ಕಟ್ಟುತ್ತಾ ಹೋಗುತ್ತಾರೆ. ಆದ್ದರಿಂದ ಅವರನ್ನು ತ್ಯಜಿಸಿ ಚುನಾವಣೆಯ ಸಂದರ್ಭಗಳಲ್ಲಿ ಆರ್ಥಿಕ ಉನ್ನತಿಗಾಗಿ ಯೋಜನೆಗಳನ್ನು ಕಾಣಿಸಿದವರಿಗೆ, ಸಾಮಾಜಿಕ ವಿಕಾಸ ಮತ್ತು ರಾಷ್ಟ್ರೀಯತೆಯ ನಿಜವಾದ ಮಾರ್ಗಗಳನ್ನು ತೋರಿಸುವವರಿಗೆ ಬೆಂಬಲಿಸುವ ಮನಸ್ಸು ಮಾಡಬೇಕು.

ಸ್ವಾತಂತ್ರ್ಯಾನಂತರ ನಮ್ಮ ಸರಕಾರದ ಜವಾಬ್ದಾರಿ ಶಿಕ್ಷಣ, ಆರೋಗ್ಯ ಮತ್ತು ಉದ್ಯೋಗ ಲಭ್ಯಗೊಳಿಸುವುದೇ ಎಂದು ಹೇಳಲಾಗಿತ್ತು. ಆದರೆ ಕಳೆದ ಐದೂವರೆ ದಶಕಗಳಿಂದಲೂ ನಾವು ಒದ್ದಾಟ ನಡೆಸಿದ್ದೇ ಬಂತು ಹೊರತು ಆ ಕ್ಷೇತ್ರದಲ್ಲಿ ಹೆಚ್ಚಿನ ಪ್ರಗತಿ ಕಾಣುವುದಕ್ಕೆ ಸಾಧ್ಯವಾಗುತ್ತಾ ಇಲ್ಲ.

ಇಂದು ದೇಶದಲ್ಲಿ ಹೆಚ್ಚಿನ ಪಕ್ಷಗಳು ಕೋಮು ಏಕತೆಯ ಹೊಸ ಚುನಾವಣಾ ಘೋಷಣೆಗಳನ್ನು ತಮ್ಮ ಪ್ರಣಾಲಿಕೆಯಲ್ಲಿ ಸೇರಿಸಿಕೊಳ್ಳಬೇಕು. ರೊಟ್ಟಿ, ಉದ್ಯೋಗ, ಬಡತನ ನಿರ್ಮೂಲನ, ವಸತಿ ಸೌಲಭ್ಯ.... ಇಂತಹ ಅಗತ್ಯಗಳ ಬದಲು ಅನಗತ್ಯ ವಿಷಯ ಗಳಲ್ಲಿ ದೇಶ ಇಕ್ಕಟ್ಟಿಗೆ ಸಿಲುಕುತ್ತಿದೆ. ರಾಜಕೀಯ ಪಕ್ಷಗಳ ಗುರಿ ಸಂಪೂರ್ಣ ಆಡಳಿತ ವಶಪಡಿಸಿಕೊಳ್ಳುವತ್ತವೇ ಮುಖ ಮಾಡಿದೆ. ಹೀಗಾಗಿ ತಮ್ಮಲ್ಲಿರುವ ಕೊರತೆಗಳನ್ನು ಮುಚ್ಚಿ ಹಾಕಲು ಅನಗತ್ಯ ವಿವಾದಗಳನ್ನು ಪ್ರೋತ್ಸಾಹಿಸುತ್ತಿವೆ. ಬಡತನ, ನಿರುದ್ಯೋಗ, ಶೈಕ್ಷಣಿಕ ಸಮಸ್ಯೆ ಇತ್ಯಾದಿಗಳ ಬಗೆಗೆ ಚಿಂತಿಸುವ ಬದಲು ಅಣುಬಾಂಬ್, ಅಯೋಧ್ಯೆ ವಿವಾದಗಳಂತಹ ಸಮಸ್ಯೆಗಳನ್ನು ಇತ್ಯರ್ಥಗೊಳಿಸುವತ್ತ ನಮ್ಮ ಪೂರಾ 'ಶಕ್ತಿ'ಯನ್ನು ವಿನಿಯೋಗಿಸುತ್ತಿದ್ದೇವೆ.

ನಾಲ್ಕನೇ ಮೂರು ಪಾಲು ಕೃಷಿ ಆಧಾರಿತ ಜನಸಂಖ್ಯೆ ಮತ್ತು ಅದ್ಭುತ ಸಂಸ್ಕೃತಿಯನ್ನೊಳಗೊಂಡ ವಿಶಾಲ ಭಾರತದಲ್ಲಿ ಕೋಮುಗಲಭೆ ಘಟನೆಗಳು ಆಗಾಗ, ವರದಿಯಾಗುತ್ತಿರುವುದಕ್ಕೆ ಪ್ರಮುಖ ಕಾರಣಗಳೇನು ? ನಮ್ಮಲ್ಲಿ ವ್ಯಾಪಕ ದೃಷ್ಟಿಕೋನದ ಅಭಾವವಿದೆ. ಇತ್ತೀಚಿನ ಅನೇಕ ಚುನಾವಣೆಗಳಲ್ಲಿ ರಾಜನೀತಿಯು 'ಧರ್ಮ' ಮತ್ತು 'ಜಾತಿ'ಯ ಆಧಾರದ ಮೇಲೆ ಸಮಾಜವನ್ನು ಬಹುಮಟ್ಟಿಗೆ ವಿಭಜಿಸುತ್ತಿದೆ. ರಾಜಕಾರಣಿಗಳ ಷಡ್ಯಂತ್ರದಿಂದಾಗಿ ಸಮಾಜದ ನಡುವೆ ಏಕತೆ ಮತ್ತು ಸೌಹಾರ್ದದ ಕೊರತೆ ಉಂಟಾಗುತ್ತಿದೆ. ನಮ್ಮ ಪ್ರಕೃತಿ, ಭೌಗೋಳಿಕ ಸ್ಥಿತಿ, ಇತಿಹಾಸ, ಧಾರ್ಮಿಕ ಸಹಿಷ್ಣುತೆ.... ಇತ್ಯಾದಿಗಳು ಈ ದೇಶವನ್ನು 'ಮಿಶ್ರಿತ ಸಂಸ್ಕೃತಿ' ಎಂದು ಕರೆಸಿಕೊಳ್ಳುವಂತೆ ಮಾಡಿದೆ. ಇಂದಿಗೂ ಸೂಫಿ ಸಂತರು, ಮೌಲವಿಗಳು ನೀಡುವ 'ತಾಯಿತ'ಗಳನ್ನು ಹಿಂದೂ ಜನರು ಗೌರವದಿಂದ ಧರಿಸುತ್ತಾರೆ. ತಮ್ಮ ಕೆಲಸ ವಾಗಬೇಕಾದರೆ ಹಿಂದೂಗಳು ಒಂಭತ್ತು ಬುಧವಾರ ಚರ್ಚ್‌ಗೂ (ಮುಂಬಯಿಯಲ್ಲಿ) ಬೇಕಿದ್ದರೆ ಹೋಗುತ್ತಾರೆ. ಹಾಜಿಅಲೀ ದರ್ಗಾಕ್ಕೂ ಕೈಮುಗಿದು ಬರುತ್ತಾರೆ. ಆನಂತರ ಯಥಾಸ್ಥಿತಿ ಕೋಮುವಾದಕ್ಕೆ ಬೆಂಬಲ ! ಪ್ರತೀ ಧರ್ಮದ ತತ್ವ ಒಂದೇ – ಪ್ರೇಮ, ಕರುಣೆ ಮತ್ತು ಭ್ರಾತೃತ್ವವನ್ನು ಸಾರುವುದು. ಯಾವುದೇ ಧರ್ಮ ಮನುಷ್ಯನನ್ನು ಕ್ರೂರಿಯನ್ನಾಗಿ ಮಾಡಲು ಹುಟ್ಟಿದ್ದಲ್ಲ, ಆದರೆ ಇಂದು ಧರ್ಮದ ಹೆಸರೆತ್ತಿ ಮಾನವನ ಕೊಲೆಯಾಗುತ್ತಿದೆ, ಮಾನವೀಯ ಸಂಬಂಧಗಳನ್ನು ನಾಶಪಡಿಸಲಾಗುತ್ತಿದೆ. ಮಹಾತ್ಮಾ ಗಾಂಧಿಯವರು ಜನಿಸಿದ ನಾಡಿನಲ್ಲಿ ಹಿಂದಿನ ಎಲ್ಲಾ ಹಿಂಸೆಯ ದಾಖಲೆಗಳನ್ನು ಈ ಸಲದ ಗುಜರಾತ್ ಗಲಭೆ ಮುರಿದಿದೆ. ನಮ್ಮ ಕೇಂದ್ರ ಸರ್ಕಾರ ಎಷ್ಟು ಡೋಲಾಯಮಾನ ಸ್ಥಿತಿ ಅನುಭವಿಸಿತು ಎಂದರೆ ಒಮ್ಮೆ ಪ್ರಧಾನಿ ತಮ್ಮ ಕಾರ್ಯಾಲಯದಲ್ಲಿ ಮುಸ್ಲಿಂ ಪರ್ಸನಲ್ ಲಾ ಬೋರ್ಡ್‌ನ ನೇತಾರರ ಮುಂದೆ ಕೈಜೋಡಿಸಿದರೆ, ಮತ್ತೊಮ್ಮೆ ವಿಹಿಂಪದ ಸಾಧುಗಳ ಮುಂದೆ ಕೈಜೋಡಿಸಿದ ದೃಶ್ಯ ಕಂಡುಬಂದಿತು.

ರಾಜಕಾರಣಿಗಳಿಗೆ ಚುನಾವಣಾ ಫಂಡ್‌ಗೆ ಹಣ ಬೇಕು. ಹಣ ಜನಸಾಮಾನ್ಯನಿಂದ ಪಡೆಯಲು ಸಾಧ್ಯವೇ ? ಅವರಿಗೆ ಅಪರಾಧಿಗಳಿಂದಲೇ ಹೆಚ್ಚು ಸಿಗುತ್ತದೆ. ಸಂಘಟಿತ ಗಲಭೆಕೋರರು ಒಂದು ಯೋಜನೆಯಂತೆ ಹತ್ಯೆಗಳನ್ನು ನಡೆಸುತ್ತಾರೆ. ಅಪರಾಧಿಗಳು ಈ ರೀತಿಯ ಗಲಭೆಗಳ ಪೂರ್ತಿ 'ಲಾಭ'ವನ್ನು ದಕ್ಕಿಸಿಕೊಳ್ಳುತ್ತಾರೆ. ಮುಂಬಯಿಯಲ್ಲಿ ೧೯೯೨-೯೩ರ ಕೋಮುಗಲಭೆಯಲ್ಲಿ ಬಿಲ್ಡರ್ ಲಾಬಿ ಸಾಕಷ್ಟು ಕೆಲಸ ಮಾಡಿದೆ. ಕಟ್ಟಡ ಕಟ್ಟಲು ಬೇಕಾದ ಜಾಗಗಳಿಂದ ಜೋಪಡಿಗಳನ್ನು ಎಬ್ಬಿಸಲು ರಾತ್ರಿ ಕಾಲದಲ್ಲಿ ಬೆಂಕಿ

೬೭ ನೇ ಪುಟಕ್ಕೆ

# ಮಕ್ಕಳ ಕಡ್ಡಾಯ ಶಿಕ್ಷಣ ಪಾಲಕರು, ಶಿಕ್ಷಕರು, ಸರಕಾರಗಳು ಮಾಡಬೇಕಾಗಿರುವುದೇನು?

ಇಂದಿನ ಬಾಲಕರೇ ನಾಳಿನ ಜವಾಬ್ದಾರಿ ನಾಗರಿಕರು ಎಂದಮೇಲೆ, ಅವರ ವ್ಯಕ್ತಿತ್ವ ವಿಕಸನಗೊಳ್ಳಲು ಶಿಕ್ಷಣದ ಆವಶ್ಯಕತೆ ಬದುಕಿನ ಆವಶ್ಯಕತೆಯಷ್ಟೇ ಮುಖ್ಯವಾಗಿರುವಂತಹದ್ದು. ಈ ನಿಟ್ಟಿನಲ್ಲಿ ಈಗಾಗಲೇ ೬ ವರ್ಷದವರಿಂದ ೧೪ ವರ್ಷದ ಮಕ್ಕಳಿಗೆ ಕಡ್ಡಾಯ ಶಿಕ್ಷಣ ನೀಡಬೇಕೆಂಬ ಕಾನೂನು ಬಂದಾಗಿದೆ. ಈ ಕಾನೂನಿನಡಿಯಲ್ಲಿ ಬರುವ ಶಿಕ್ಷಕರು ಮತ್ತು ಪಾಲಕರ ಹೊಣೆಗಾರಿಕೆ ಏನೆಂಬುದರ ಬಗ್ಗೆ ಗಮನ ಹರಿಸುವುದು ಒಂದು ಕಡೆಯಾದರೆ ಇನ್ನೂ ೬ ವರ್ಷಕ್ಕಿಂತ ಕಡಿಮೆಯಿರುವ ಮಕ್ಕಳ ಸ್ಥಿತಿ ಏನೆಂಬುದರ ಬಗ್ಗೆ ಚಿಂತನೆ ಮತ್ತೊಂದೆಡೆ. ಅಂದರೆ ೩ ವರ್ಷದಿಂದ ೧೮ ವರ್ಷದವರೆಗೆ (ಎಲ್.ಕೆ.ಜಿ.ಯಿಂದ ಎಸ್.ಎಸ್.ಎಲ್.ಸಿ. ವರೆಗೆ) ಶಿಕ್ಷಣ ನೀಡಬೇಕೆನ್ನುವ ನಿಟ್ಟಿನಲ್ಲಿ ನಾವು ಈಗ ಆಲೋಚಿಸಬೇಕಾಗಿದೆ.

ಮಧ್ಯಾಹ್ನದ ಉಪಹಾರ, ಮೊಟ್ಟೆ, ಅಕ್ಕಿ, ಗೋಧಿ, ಶಾಲೆಗೆ ಬರುವ ಮಗುವಿಗೆ ಒಂದು ರೂಪಾಯಿ – ಇಂತಹ ಯೋಜನೆಗಳನ್ನು ರೂಪಿಸುವ ಸರಕಾರ ಈ ಕಡ್ಡಾಯ ಶಿಕ್ಷಣದ ಬಗೆಗಿರುವ ಕಾನೂನನ್ನು ಕಡ್ಡಾಯಗೊಳಿಸುವ ನಿಟ್ಟಿನಲ್ಲಿ ಕ್ರಮ ಕೈಗೊಂಡು ಈ ನಿಟ್ಟಿನಲ್ಲಿ ಯಾರು ಯಾವ ಹೊಣೆಯನ್ನು ನಿರ್ವಹಿಸಬೇಕು, ನಿರ್ವಹಿಸದಿದ್ದರೆ ಯಾವ ರೀತಿಯ ಕ್ರಮ ಜರುಗಿಸಬೇಕೆಂಬುದರ ಬಗ್ಗೆ ಸಮಗ್ರ ಚಿಂತನೆ ಮಾಡಬೇಕಾಗಿದೆ.

ಈಗಾಗಲೇ ರಚಿಸಿರುವ ಶಾಲಾ ಸುಧಾರಣಾ ಸಮಿತಿಗಳ ಮುಖಾಂತರವಾಗಲಿ, ಪಾಲಕರು ತಮ್ಮ ಮಕ್ಕಳನ್ನು ಶಾಲೆಗೆ ಕಳಿಸದಿದ್ದರೆ ಸರಕಾರದಿಂದ ಸಿಗುವ ಸೌಲಭ್ಯಗಳನ್ನು ನಿಲ್ಲಿಸುವ ನಿಟ್ಟಿನಲ್ಲಿ ಸರಕಾರವು ದಿಟ್ಟ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಇಲ್ಲದಿದ್ದರೆ ಸರಕಾರ ಮಕ್ಕಳಿಗೆ ಕೊಡಬೇಕಾದ ಶಿಕ್ಷಣದಲ್ಲಿ ಸುಧಾರಣೆಗಳನ್ನು ತರಲಿಕ್ಕಾಗದು. ಈವರೆಗೆ ಈ ಶಿಕ್ಷಣದ ಬಗೆಗೆ ನಡೆದಿರುವ ಚರ್ಚೆಗಳು, ವರದಿಗಳು ಇದಕ್ಕೆ ಸಾಕ್ಷಿಯಾಗಿವೆ.

**ಕಡ್ಡಾಯ ಶಿಕ್ಷಣದ ಕುರಿತು ನಡೆದಿರುವ ಚರ್ಚೆ, ವರದಿ ಆಂದೋಲನಗಳು**

ಶಿಕ್ಷಣವನ್ನು ಕಡ್ಡಾಯಗೊಳಿಸಲು ೧೮೦೦ರಲ್ಲಿಯೇ ಬರೋಡ ಮತ್ತು ಮೈಸೂರು ಸಂಸ್ಥಾನಗಳಲ್ಲಿ ಚರ್ಚೆಯಾಗಿತ್ತು.

೧೯೦೬ರಲ್ಲಿ ಗೋಪಾಲಕೃಷ್ಣ ಗೋಖಲೆಯವರು ಕಡ್ಡಾಯ ಶಿಕ್ಷಣದ ಅಗತ್ಯತೆಯ ಬಗ್ಗೆ ಒತ್ತಿ ಹೇಳಿದ್ದರು. ಅನಂತರ ೧೯೧೭ರಲ್ಲಿ ಈ ಬಗ್ಗೆ ಕಾನೂನು ತರುವ ಚರ್ಚೆಯಾಯಿತು. ೧೯೪೭ರಲ್ಲಿ ಸಂವಿಧಾನವು ರಚನೆಗೊಂಡಾಗ ಶಿಕ್ಷಣವನ್ನು ರಾಜ್ಯ ನಿರ್ದೇಶಕ ತತ್ವಗಳ ಪರಿಧಿಯಲ್ಲಿ ಸೇರಿಸಲಾಯಿತು.

೧೯೫೦ರಲ್ಲಿ ಸರಕಾರವು ಹತ್ತು ವರ್ಷದೊಳಗಾಗಿ ೧೪ ವರ್ಷದ ಮಕ್ಕಳಿಗೆ ಉಚಿತ ಶಿಕ್ಷಣ ನೀಡುತ್ತದೆಂದು ಘೋಷಿಸಿತು. ಕಾರ್ಯರೂಪಕ್ಕೆ ಬರದಿದ್ದದ್ದು ಬೇರೆ ವಿಷಯ.

**ಸಮಿತಿಗಳು**

ಈ ಕಡ್ಡಾಯ ಮತ್ತು ಉಚಿತ ಶಿಕ್ಷಣ ಕುರಿತಂತೆ ೧೯೪೮-೪೯ರಲ್ಲಿ ವಿಶ್ವವಿದ್ಯಾಲಯ ಶಿಕ್ಷಣ ಆಯೋಗ, ೧೯೫೨-೫೩ರಲ್ಲಿ ಸೆಕಂಡರಿ ಶಿಕ್ಷಣ ಆಯೋಗ, ನಂತರ ೧೯೬೪-೬೬ರಲ್ಲಿ ಶಿಕ್ಷಣ ಆಯೋಗ ಇವುಗಳು ಎಂತಹ ಶಿಕ್ಷಣ ನೀಡಬೇಕೆಂಬುದರ ಬಗ್ಗೆ ಚರ್ಚೆಯನ್ನು ಮುಂದಿಟ್ಟವು. ನಂತರ ೧೯೬೮ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ ತರಲಾಯಿತು. (ಈ ನೀತಿಯಲ್ಲಿ ೧೯೯೨ರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಲಾಗಿದೆ.)

೧೯೭೬ರಲ್ಲಿ ಶಿಕ್ಷಣವನ್ನು concurrent listಗೆ ಸೇರ್ಪಡೆ ಮಾಡುವುದರೊಂದಿಗೆ ೧೯ ರಾಜ್ಯಗಳಲ್ಲಿ ಕಡ್ಡಾಯ ಶಿಕ್ಷಣ ಕುರಿತು ಕಾಯಿದೆ ತರಲಾಯಿತು. ೧೯೮೬ ರಲ್ಲಿ ಕೋಠಾರಿ ಆಯೋಗವು ಶಿಕ್ಷಣದಲ್ಲಿ ಗುಣಮಟ್ಟವನ್ನು ಉತ್ತಮಪಡಿಸಲು ಕ್ರಮ ತೆಗೆದುಕೊಂಡಿತು. ನಂತರ ೧೯೯೦ರಲ್ಲಿ ಥಾಪರ್-ಮಜುಮದಾರ್ ಸಮಿತಿ ರಚನೆಯಾದ ನಂತರ ಸರಕಾರೇತರ ಸಂಘ ಸಂಸ್ಥೆ ಗಳು ಈ ಬಗ್ಗೆ ತಂತಮ್ಮ ಕಾಳಜಿಗಳನ್ನು ವ್ಯಕ್ತಪಡಿಸಿದವು.

ಇದಕ್ಕೆ ಮುಂಚೆ ಸರಕಾರೇತರ ಸಂಘಟನೆಗಳು ಈ ಕಡ್ಡಾಯ ಶಿಕ್ಷಣದ ಬಗ್ಗೆ ಚಿಂತನೆ ಮಾಡುವುದಾಗಲಿ, ಮಾಡಿದ ಕೆಲಸಗಳಾಗಲಿ ಬೆಳಕಿಗೆ ಬಂದಿರಲಿಲ್ಲ. ತದನಂತರ ಜೆ. ಪಿ. ಉನ್ನಿಕೃಷ್ಣನ್ ಅವರು ಆಂಧ್ರಪ್ರದೇಶ ಸರಕಾರದ ವಿರುದ್ಧ ಶಿಕ್ಷಣದ ಕುರಿತು ಮೊಕದ್ದಮೆಯೊಂದನ್ನು ಹೂಡಿದಾಗ ಸುಪ್ರೀಂ ಕೋರ್ಟಿನ ನ್ಯಾಯಮೂರ್ತಿ ಜೀವನರೆಡ್ಡಿಯವರು ತೀರ್ಪು ನೀಡಿ, ಸಂವಿಧಾನದ ೨೧ನೇ ವಿಧಿ ಜೀವಿಸುವ ಹಕ್ಕಾಗಿದ್ದು ಶಿಕ್ಷಣದ ಹಕ್ಕನ್ನು ೨೧'ಎ' ವಿಧಿಯನ್ನಾಗಿ ತಿದ್ದುಪಡಿ ತರುವಂತೆ ಆದೇಶಿಸಿದರು. ಈ ತಿದ್ದುಪಡಿಯ ಪರಿಣಾಮವಾಗಿ ಅಂದಿನಿಂದ ಶಿಕ್ಷಣವು ಮೂಲಭೂತ ಹಕ್ಕಾಗಿ ಸಂವಿಧಾನದಲ್ಲಿ ಸೇರ್ಪಡೆಯಾಯಿತು. ಈ ಹಿನ್ನೆಲೆಯಲ್ಲಿ ೧೯೯೫ರಲ್ಲಿ ರಾಜಕೀಯ ಪಕ್ಷಗಳು ತಮ್ಮ ಚುನಾವಣಾ ಪ್ರಣಾಳಿಕೆಗಳಲ್ಲಿ ಶಿಕ್ಷಣ ಮತ್ತು ಬಾಲ ಕಾರ್ಮಿಕರ ಸಮಸ್ಯೆಗಳಿಗೆ ಪ್ರಾಮುಖ್ಯತೆ ಇತ್ತವು.

೧೯೯೭ ಜುಲೈ ೨೮ರಲ್ಲಿ ಶ್ರೀ ದೇವೆಗೌಡರು ಪ್ರಧಾನಿಯಾಗಿದ್ದಾಗ ಮಾನವ ಸಂಪನ್ಮೂಲ ಇಲಾಖೆಯ ಸಚಿವ ಎಸ್. ಆರ್. ಬೊಮ್ಮಾಯಿಯವರ ಪ್ರಯತ್ನದಿಂದಾಗಿ ಸಂವಿಧಾನದ ೮೩ನೇ ತಿದ್ದುಪಡಿ ಮಸೂದೆಯನ್ನು ಚರ್ಚೆಗೆ ತರುವಷ್ಟರಲ್ಲಿ ಸರ್ಕಾರ ಬಿದ್ದುಹೋಗಿ

**ಎಂ. ಮಂಜುನಾಥ ಬಮ್ಮನಕಟ್ಟೆ**

ಚರ್ಚೆಯಾಗಬೇಕಿದ್ದ ಈ ಮಸೂದೆ ಹಾಗೇ ಉಳಿಯಿತು.

ಬೊಮ್ಮಾಯಿಯವರು ಮತ್ತು ಪ್ರಧಾನಿ ದೇವೆಗೌಡರು ಅಂದು ಮಾಡಿದ ಹೊಸ ಶಿಕ್ಷಣ ಯೋಜನೆ ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ (ಡಿಪಿಇಪಿ) ಶಿಕ್ಷಣದ ಬಗ್ಗೆ ಹೊಸ ಆಸಕ್ತಿ ಮೂಡಿಸುವತ್ತ, ಮಕ್ಕಳನ್ನು ಆಕರ್ಷಿಸುವತ್ತ ಸಹಕಾರಿಯಾಗುವ ಅಂಶಗಳನ್ನು ಹೊಂದಿತ್ತು. ಈ ನಿಟ್ಟಿನಲ್ಲಿ ರಾಜ್ಯದ ಗದಗ ಜಿಲ್ಲೆಯಲ್ಲಿ, ಅದರಲ್ಲಿಯೂ ಶಿರಹಟ್ಟಿ ತಾಲೂಕಿನ ದೊಡ್ಡುರ ಕ್ಲಸ್ಟರ್ ಕೇಂದ್ರ ಹಾಗೂ ಸೂರಣಗಿ ಕ್ಲಸ್ಟರ್ ಕೇಂದ್ರಗಳ ಶಾಲೆಗಳು ಹೆಚ್ಚು ಪ್ರಭಾವಯುತ ಶಿಕ್ಷಣ ನೀಡುತ್ತಿದ್ದು ಇದರಲ್ಲಿ ಅತ್ಯಂತ ಸಣ್ಣ ಗ್ರಾಮವಾದ ಶ್ಯಾಬಳ ಶಾಲೆಯ ಡಿ.ಪಿ.ಇ.ಪಿ ಶಿಕ್ಷಣವನ್ನು ಖುದ್ದಾಗಿ ನೋಡಲು ಇದುವರೆವಿಗೂ ೧೪ ಸಾವಿರದಷ್ಟು ಜನ ಭೇಟಿ ನೀಡಿರುವುದು ಒಂದು ವಿಶೇಷವೇ ಹೌದು. ಅದೇ ರೀತಿ ಎಲ್ಲ ಶಾಲೆಗಳೂ ರೂಪುಗೊಂಡಲ್ಲಿ ಡಿಪಿಇಪಿ ಯೋಜನೆಯು ಮಕ್ಕಳಲ್ಲಿ ಶಿಕ್ಷಣದ ಬಗ್ಗೆ ಆಸಕ್ತಿಯನ್ನು ಮೂಡಿಸುವುದು ಸಾಧ್ಯವಿದೆ.

೧೯೯೭ ಸೆಪ್ಟಂಬರ್‌ನಲ್ಲಿ ಗುಜ್ರಾಲ್ ಅವರು ಪ್ರಧಾನಮಂತ್ರಿಯಾಗಿದ್ದಾಗ ರಾಜ್ಯ ಶಿಕ್ಷಣ ಸಚಿವರ ಸಮಿತಿಯನ್ನು ರಚಿಸಲಾಯಿತು. ಅನಂತರ ೧೯೯೯ ಜುಲೈನಲ್ಲಿ ವಾಜಪೇಯಿಯವರು ಪ್ರಧಾನಿಯಾದಾಗ ಮತ್ತೆ ರಾಜ್ಯ ಶಿಕ್ಷಣ ಸಚಿವರ ಸಮಿತಿಯೊಂದು ರಚನೆಯಾಯಿತು. ೨೦೦೦ ನವೆಂಬರದಲ್ಲಿ ಎನ್.ಎ.ಎಫ್.ಆರ್.ಇ. ರಾಷ್ಟ್ರೀಯ ಮೇಳ ನಡೆಯಿತು. ಡಿಸೆಂಬರ್ ೭ರಲ್ಲಿ ಮಂತ್ರಿಗಳ ಸಭೆ ನಡೆಯಿತು. ನಂತರ ಏಪ್ರಿಲ್ ೨೦೦೧ರಲ್ಲಿ ಸಂಸದೀಯ ಸಲಹಾ ಸಮಿತಿ ಸಭೆ, ನಂತರ ಅಕ್ಟೋಬರ್‌ನಲ್ಲಿ ಅದೇ ಮಂತ್ರಿಗಳ ಎರಡನೆಯ ಸಭೆ ನಡೆದು ಮತ್ತೆ ಚರ್ಚಿಸಲಾಯಿತು. ನವಂಬರ್ ೨೦೦೧ರ ಚಳಿಗಾಲದ ಅಧಿವೇಶನದಲ್ಲಿ ೯೩ನೇ ತಿದ್ದುಪಡಿಯಾಗಿ ಶಿಕ್ಷಣ ಮಸೂದೆಯನ್ನು ಪಾಸು ಮಾಡಲಾಗಿರುವುದು ಒಂದು ವಿಶೇಷ.

**ಕಡ್ಡಾಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ತಂದ ತಿದ್ದುಪಡಿಯಲ್ಲಿನ ಲೋಪದೋಷಗಳು**

ಸಂವಿಧಾನದ ೯೩ನೇ ಅಧಿನಿಯಮ ತಿದ್ದುಪಡಿಯಲ್ಲಿ ೨೧ಎ ಹೊಸ ಪರಿಚ್ಛೇದ ಸೇರ್ಪಡೆ ಮಾಡಲಾಗಿದ್ದು ೬ ರಿಂದ ೧೪ ವರ್ಷದ ಮಕ್ಕಳಿಗೆ ಶಿಕ್ಷಣವನ್ನು ಉಚಿತ ಹಾಗೂ ಕಡ್ಡಾಯ ಮಾಡಲಾಯಿತು. ಸರಕಾರದ ಧನಸಹಾಯ ಪಡೆಯದ ಶಿಕ್ಷಣ ಸಂಸ್ಥೆಗಳನ್ನು ಕುರಿತಂತೆ ಉಚಿತ ಶಿಕ್ಷಣದ ಬಗ್ಗೆ ಯಾವುದೇ ಕಾನೂನನ್ನು ಮಾಡಬಾರದು ಎಂದು ತಿದ್ದುಪಡಿಯಲ್ಲಿ ಹೇಳಲಾಗಿದೆ.

ಅಲ್ಲದೆ ರಾಜ್ಯದಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾನೂನು ಇದ್ದಲ್ಲಿ ಅದನ್ನು ಉಳಿಸಿಕೊಳ್ಳುವ ಹಾಗೂ ತೆಗೆದುಹಾಕುವ ಜವಾಬ್ದಾರಿ ಆಯಾ ರಾಜ್ಯಗಳ ಶಾಸನಸಭೆಗೆ ಸೇರಿದ್ದು ಎಂದು ನಮೂದಿಸಲಾಗಿದೆ. ರಾಜ್ಯ

ನಿರ್ದೇಶಕ ತತ್ವಗಳಿಂದ ಪರಿಚ್ಛೇದ ೪೫ನ್ನು ತೆಗೆಯುವುದು ಎಂದು ಹೇಳುವುದರ ಮೂಲಕ ಮೂಲಭೂತ ಕರ್ತವ್ಯಗಳಡಿ ೫೧ಎ ಜೋಡಣೆ "೬ ರಿಂದ ೧೪ ವರ್ಷದ ಮಕ್ಕಳನ್ನು ಶಾಲೆಗೆ ಕಳುಹಿಸುವುದು ಪೋಷಕರ ಜವಾಬ್ದಾರಿಯೆಂದು" ಹಗುರವಾಗಿ ಹೇಳಿದ್ದರಿಂದ ಈವರೆಗೂ ಕಡ್ಡಾಯ ಶಿಕ್ಷಣದ ಪರಿಣಾಮ ಸಫಲವಾಗಿಲ್ಲವೆನ್ನಬಹುದು. ಇದಕ್ಕೆ ಸರಕಾರ, ಪಾಲಕರ ಸಮೂಹ, ಸಂಘ-ಸಂಸ್ಥೆಗಳು ಕೂಡಾ ಹೊಣೆಗಾರರು ಎಂಬುದು ಇಲ್ಲಿ ಚಿಂತನೆಗೆ ಅರ್ಹವಾದ ವಿಷಯ.

**ತಿದ್ದುಪಡಿಯ ದೋಷಗಳು**

ಇತ್ತೀಚಿನ ಕೆಲವು ಸಂಘಟನೆಗಳು ತಿದ್ದುಪಡಿಯಲ್ಲಿರುವ ಕೆಲವು ಲೋಪದೋಷಗಳನ್ನು ಬೆಳಕಿಗೆ ತಂದಿವೆ.

ಶಿಕ್ಷಣ ಎಂದರೆ ೬ ರಿಂದ ೧೪ ವರ್ಷದವರೆಗೆ ಮಾತ್ರ ಎಂದು ಹೇಳಲಾಗಿದೆ. ೬ ವರ್ಷಕ್ಕೂ ಕಿರಿಯರಾದ ಮಕ್ಕಳಿಗೆ ಯಾರು ಶಿಕ್ಷಣ ನೀಡಬೇಕೆಂಬುದು ಪ್ರಶ್ನೆಯಾಗಿಯೇ ಉಳಿಯಿತಲ್ಲದೆ ೭ನೇ ತರಗತಿ ಮಟ್ಟವನ್ನು ೮ನೇ ತರಗತಿಯ ಮಟ್ಟಕ್ಕೆ ಏರಿಸುವುದು ಅಥವಾ ೧೦ನೇ ತರಗತಿ ಮಟ್ಟವನ್ನು ೮ನೇ ತರಗತಿಯ ಮಟ್ಟಕ್ಕೆ ಇಳಿಸುವುದು, ಜೊತೆಗೆ ಶಿಕ್ಷಣವನ್ನು ಒದಗಿಸುವುದು ಪೋಷಕರ ಜವಾಬ್ದಾರಿ ಎಂಬುದೂ ಅಷ್ಟು ಸರಿಯಲ್ಲ.

■ ಸರಕಾರಿ ಅನುದಾನ ಪಡೆಯದ ಶಿಕ್ಷಣ ಸಂಸ್ಥೆಗಳು ಉಚಿತ ಶಿಕ್ಷಣದ ಪರಿಧಿಯಲ್ಲಿ ಇಲ್ಲ ಎಂಬುದನ್ನು ಹೇಳುವುದರಿಂದ ಸಮತೆ ಸಮಾನತೆಗಳು ಅರ್ಥ ಕಳೆದುಕೊಳ್ಳುತ್ತವೆ. ಹೀಗಾಗಿ ಅನುದಾನ ಪಡೆಯದ ಶಿಕ್ಷಣ ಸಂಸ್ಥೆಗಳು ಉಚಿತ ಶಿಕ್ಷಣ ನೀಡಬೇಕೆನ್ನುವಾಗ ಸರಕಾರವೇ ಪರ್ಯಾಯ ವ್ಯವಸ್ಥೆ ಮಾಡಬೇಕಾಗುತ್ತದೆ.

■ ಈ ಮೇಲಿನ ಎಲ್ಲ ಕಾರಣಗಳಿಗಿಂತಲೂ ಮುಖ್ಯವಾದದ್ದು ಅವಶ್ಯಕವಾದದ್ದೂ ಹಣಕಾಸಿನದು. ಹಿಂದೆ ೧೯೬೬ರಲ್ಲಿ ಕೋಠಾರಿ ಆಯೋಗ ನೀಡಿದ ವರದಿಯಲ್ಲಿ, ಶಿಕ್ಷಣದಲ್ಲಿ ಗುಣಮಟ್ಟ ಹೆಚ್ಚಿಸಬೇಕು, ಇದಕ್ಕಾಗಿ ರಾಷ್ಟ್ರದ ಒಟ್ಟು ಆದಾಯದ ಶೇಕಡಾ ೬ ರಷ್ಟನ್ನು ಕಾದಿರಿಸಬೇಕೆಂದು ಹೇಳಲಾಗಿತ್ತು. ಆದರೆ, ಈಗ ಕಾದಿರಿಸಲಾಗಿರುವುದು ಕೇವಲ ಶೇ. ೨.೭ರಷ್ಟು ಮಾತ್ರ.

ಪಂಚವಾರ್ಷಿಕ ಯೋಜನೆಗಳ ಪ್ರಾರಂಭದಲ್ಲಿ ರಾಷ್ಟ್ರೀಯ ಆದಾಯದ ಶೇ. ೭ರಷ್ಟನ್ನು ಶಿಕ್ಷಣಕ್ಕೆ ಕಾದಿರಿಸ




ಲಾಗುತ್ತಿತ್ತು. ಆದರೆ ಈಗಿನ ಪಂಚವಾರ್ಷಿಕ ಯೋಜನೆಗಳಲ್ಲಿ ಶೇ. ೩ರಷ್ಟು ಮಾತ್ರ ಆಗುತ್ತದೆ. ಹೆಚ್ಚಿನ ಅನುದಾನವನ್ನು ಕೊಟ್ಟರೆ ಮಾತ್ರ ಪ್ರಾಥಮಿಕ ಹಂತದ ಶಿಕ್ಷಣದ ವ್ಯವಸ್ಥೆಗಳನ್ನು ಸುಧಾರಿಸುವುದರೊಂದಿಗೆ ಕೆಳಹಂತದಿಂದಲೇ ಶಿಕ್ಷಣದ ಮಟ್ಟ ಉತ್ತಮವಾಗಲು ಸರಕಾರವು ತನ್ನ ಕೊಡುಗೆ ನೀಡಿದಂತಾಗುತ್ತದೆ.

**ಬಿಸಿ ಊಟದ ವ್ಯವಸ್ಥೆ**

ಕಳೆದ ಮೇ ೨೦೦೨ರಲ್ಲಿ ಸುಪ್ರೀಂಕೋರ್ಟು ಪ್ರಾಥಮಿಕ ಶಾಲೆಗಳಲ್ಲಿ ಮಧ್ಯಾಹ್ನದ ಬಿಸಿ ಊಟ ನೀಡಬೇಕೆಂದು ಆದೇಶಿಸಿದೆ.

ಈ ಯೋಜನೆಯನ್ನು ರಾಜ್ಯದೆಲ್ಲೆಡೆ ಕಾರ್ಯಗತಗೊಳಿಸುವುದರ ಮೂಲಕ ಕಲಿಯುವ ಮಕ್ಕಳು ದಿನವಿಡೀ ಶಾಲೆಯಲ್ಲಿಯೇ ಉಳಿಯುವಂತಾಗುತ್ತದೆ. ಜೊತೆಗೆ ಅವರ ಶಿಕ್ಷಣದ ಗುಣಮಟ್ಟದ ಬಗ್ಗೆಯೂ ಶಿಕ್ಷಕ ಸಮುದಾಯವು ಶ್ರಮಿಸಬೇಕಾಗಿರುವುದು ಅಗತ್ಯ.

**ಸರ್ವ ಶಿಕ್ಷಾ ಅಭಿಯಾನ**

ಭಾರತ ಸರಕಾರವು ಈ ವರ್ಷ ಸರ್ವ ಶಿಕ್ಷಾ ಅಭಿಯಾನದ ಮೂಲಕ ಶಾಲೆ ತೊರೆದ ಮಕ್ಕಳನ್ನು ಶಾಲೆಗೆ ಮತ್ತೆ ಸೇರಿಸುವ, ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡುವ, ಪ್ರಾಥಮಿಕ ಪೂರ್ವ ಶಿಕ್ಷಣಕ್ಕೆ ಒತ್ತು ಕೊಡುವುದರೊಂದಿಗೆ, ಅಂಗವಿಕಲರಿಗೆ, ಹಿಂದುಳಿದ ವರ್ಗದ ಮಕ್ಕಳಿಗೆ ಶಿಕ್ಷಣ ನೀಡುವ ತೀರ್ಮಾನವನ್ನು ತೆಗೆದುಕೊಂಡಿದೆ. ರಾಜ್ಯ ಸರಕಾರಗಳು ಈ ಅಂಶಗಳಿಗೆ ಒತ್ತುಕೊಡುವುದರೊಂದಿಗೆ ರಾಜ್ಯದ ಬಜೆಟ್‌ನಲ್ಲಿ ಇದಕ್ಕೆ ಪ್ರತ್ಯೇಕ ಅನುದಾನವನ್ನು ತೆಗೆದಿರಿಸಬೇಕಾದದ್ದು ಅವಶ್ಯಕ.

**ಬಾಲಕಾರ್ಮಿಕ ಮಕ್ಕಳ ಶಿಕ್ಷಣ**

ಕರ್ನಾಟಕದಲ್ಲಿ ಸಿ.ಎ.ಸಿ.ಎಲ್.ಕೆ. ಎನ್ನುವ ನೆಟ್‌ವರ್ಕ್ ನಡೆಸಿರುವ ಸಮೀಕ್ಷೆಯ ಪ್ರಕಾರ ೩೫ ಲಕ್ಷ ಬಾಲಕಾರ್ಮಿಕ ಮಕ್ಕಳಿದ್ದಾರೆ. ಈ ಮಕ್ಕಳಿಗೆ ಈಗಾಗಲೇ ಸರಕಾರ ಹಲವಾರು ಪ್ರತ್ಯೇಕ ಶಾಲೆಗಳನ್ನು ಪ್ರಾರಂಭಿಸಿರುವುದು ಸ್ವಾಗತಾರ್ಹ.

ಅಲ್ಲದೇ ಈಗಿನ ಕಾಂಗ್ರೆಸ್ ಸರಕಾರವು ೨೦೦೭ರ ಹೊತ್ತಿಗೆ ರಾಜ್ಯದ ಎಲ್ಲ ಬಾಲಕಾರ್ಮಿಕ ಮಕ್ಕಳಿಗೂ ಶಿಕ್ಷಣ ನೀಡುವ ಯೋಜನೆ ಹಾಕಿಕೊಂಡಿದೆ. ಆದರೆ ಸರಕಾರ ಈ ಯೋಜನೆಯನ್ನು ಎಷ್ಟರಮಟ್ಟಿಗೆ ಕಾರ್ಯರೂಪಕ್ಕೆ ತರುವ ರಾಜಕೀಯ ಇಚ್ಛೆಯನ್ನು ಹೊಂದಿದೆಯೆಂಬುದನ್ನು ಕಾದು ನೋಡಬೇಕಷ್ಟೆ.

ಆದ್ದರಿಂದ, ಈ ಯೋಜನೆಯಲ್ಲಿ ಶಿಕ್ಷಕರು, ಸರಕಾರಿ ಅಧಿಕಾರಿಗಳು, ಜನಪ್ರತಿನಿಧಿಗಳು ಜನಸಾಮಾನ್ಯರನ್ನು ಜಾಗೃತಿಗೊಳಿಸುವ ನಿಟ್ಟಿನಲ್ಲಿ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರೊಂದಿಗೆ ಬಾಲಕಾರ್ಮಿಕ ಮಕ್ಕಳನ್ನು ಶಿಕ್ಷಣಕ್ಕೆ ಒಳಪಡಿಸುವಲ್ಲಿ ಕಾರ್ಯಪ್ರವೃತ್ತರಾದರೆ ೨೦೦೭ರ ಹೊತ್ತಿಗೆ ಸರಕಾರವು ತನ್ನ ಗುರಿಯತ್ತ ಸಾಗಬಹುದಾಗಿದೆ.

ಒಟ್ಟಿನಲ್ಲಿ, ಈಗ ವಯಸ್ಕರ ಶಿಕ್ಷಣಕ್ಕಾಗಿ ನೂರಾರು ಕೋಟಿ ರೂಪಾಯಿ ಖರ್ಚು ಮಾಡುವುದರ ಬದಲು ನಮ್ಮ ನಾಳಿನ ಪ್ರಜೆಗಳಾಗುವ ಮಕ್ಕಳಿಗೆ ಬಾಲ್ಯದಿಂದಲೇ ಶಿಕ್ಷಣ ಒದಗಿಸುವ ನಿಟ್ಟಿನಲ್ಲಿ ಅಗತ್ಯವಾದ ಯೋಜನೆಗಳನ್ನು ರೂಪಿಸಿ ಸೂಕ್ತವಾದ ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರಬೇಕಾದುದು ಸರಕಾರದ ಜವಾಬ್ದಾರಿಯಾಗಿದೆ.

**ಎಂ. ಮಂಜುನಾಥ ಬಮ್ಮನಕಟ್ಟಿ**
ಪತ್ರಕರ್ತರು, ಲಕ್ಷ್ಮೇಶ್ವರ - ೫೮೨೧೧೬

ಸಹಕಾರ : **ಯಲ್ಲಪ್ಪ ಇರಕಲ್ಲ, ಲಕ್ಷ್ಮೇಶ್ವರ**

---

*೪೪ನೇ ಪುಟದಿಂದ*

ಹಚ್ಚಿ ಅದಕ್ಕೆ ಕೋಮುಗಲಭೆಯ ಬಣ್ಣ ನೀಡಿದ್ದಿದೆ. ಅಪರಾಧಿಗಳು ಚುನಾವಣಾ ಫಂಡ್‌ಗೆ ನೀಡಿದ ಹಣವನ್ನು ಯಾವ ಪಕ್ಷವಾದರೂ ತಿರಸ್ಕರಿಸಿದ್ದು ಇದೆಯಾ ?

ಈ ದಿನಗಳಲ್ಲಿ ಜನರನ್ನು ತನ್ನತ್ತ ಸೆಳೆದುಕೊಳ್ಳಲು ಹೆಚ್ಚಿನ ರಾಜಕೀಯ ಪಕ್ಷಗಳು 'ಭಾವನಾತ್ಮಕ' ವಿಷಯ ಗಳಿಗೆ ಲೆಕ್ಕಕ್ಕಿಂತ ಜಾಸ್ತಿ ಆದ್ಯತೆ ನೀಡುತ್ತಿವೆ. ಈ ರೀತಿಯ ಭಾವನಾತ್ಮಕ ವಿಚಾರಗಳಿಗೆ ರೆಕ್ಕೆ ಪುಕ್ಕಗಳನ್ನು 'ಲೈವ್ ಮೀಡಿಯಾ'ಗಳು ಅಂಟಿಸಿ ಜನರ ತನಕ ತಲುಪಿಸುತ್ತಿವೆ. ನಿಜ ಘಟನೆಗೆ ಹಲವು ಪಟ್ಟು ಕಲ್ಪನೆಗಳನ್ನು ತುರುಕಿಸಿ ಜನರ ಭಾವನೆಗಳನ್ನು ಕೆರಳಿಸಲು ಸುದ್ದಿ ಮಾಧ್ಯಮಗಳು ಸಾಕಷ್ಟು ನೆರವನ್ನು ನೀಡಲಾರಂಭಿಸಿವೆ. ದೃಶ್ಯ ಮಾಧ್ಯಮಗಳು ಮನೆಬಾಗಿಲಿಗೇ ಘಟನೆಗಳನ್ನು ರಂಗು ರಂಗಾಗಿ ರಾಶಿ ಹಾಕುತ್ತಿವೆ. ಗಲಭೆಗೆ ಇನ್ನಷ್ಟು ತುಪ್ಪ ಸುರಿಯುತ್ತಿವೆ. ಎಷ್ಟೆಂದರೆ ಬಿ.ಬಿ.ಸಿ.ಯಂತಹ ವಿದೇಶಿ ಚ್ಯಾನೆಲ್ ಹೇಳಿದ್ದೆಲ್ಲವೂ ನಮಗೆ ವೇದ ವಾಕ್ಯ ! ಎಲ್ಲವೂ ಸತ್ಯ ! (ಅವರಿಗೆ ಭಾರತದ ಕುರಿತು ಕಾಳಜಿ ಇದ್ದರೆ ತಾನೆ ? ಯಾವ ರೀತಿಯೂ ಅವರು ತೋರಿಸಬಹುದು.)

ಇಂದು ಕುತ್ಸಿತ ಬುದ್ಧಿಯ ರಾಜಕಾರಣವೇ ಗೆದ್ದು ಪ್ರಾಮಾಣಿಕ ಮತದಾರನು ನಿರಾಶನಾಗುತ್ತಾ ಬಂದಿದ್ದಾನೆ. ಆದ್ದರಿಂದಲೇ ಕೆಲವು ಮತದಾರರು ಮತಹಾಕಲು ಹೋಗುತ್ತಿಲ್ಲ. ಯೋಗ್ಯ ಅಭ್ಯರ್ಥಿಯ ಹುಡುಕಾಟದಲ್ಲಿ ಅತ್ತ ಚುನಾವಣೆ ಮುಗಿದು ಸರಕಾರ ರಚನೆಯೂ ಆಗಿಬಿಟ್ಟಿರುತ್ತದೆ !

ರಾಜಕೀಯ ಪಕ್ಷಗಳಲ್ಲಿ ಹೆಚ್ಚಿನವು ಕೋಮುಗಲಭೆಗಳಲ್ಲಿ ತಮ್ಮ ಲಾಭವನ್ನು ನಿರೀಕ್ಷಿಸಿ ಲೆಕ್ಕಾಚಾರದ ಹೆಜ್ಜೆ ಇಡುತ್ತಿವೆ. ರಾಜಕೀಯರಂಗ ಶುದ್ಧ ಇರಬೇಕಾದರೆ ರಾಜಕಾರಣಿಗಳು ಸ್ವಚ್ಛ ಮನಸ್ಸಿನವರಾಗಿರಬೇಕು. ಮಹಾತ್ಮಾ ಗಾಂಧಿ ಹೇಳಿದ್ದರು – ಒಂದು ವೇಳೆ ಒಂದು ಕಣ್ಣಿನ ಬದಲು ಇನ್ನೊಬ್ಬರ ಎರಡೂ ಕಣ್ಣನ್ನು ಕೀಳುತ್ತಾ ಹೋದರೆ ಮುಂದೊಂದು ದಿನ ಈ ದೇಶದಲ್ಲಿ 'ಅಂಧರೇ' ತುಂಬಿಹೋಗಲಿದ್ದಾರೆ.

ವರ್ತಮಾನ ಭಾರತದಲ್ಲಿ ಇದನ್ನೇ ನಾವು ಕಾಣುತ್ತಿದ್ದೇವೆಯೋ ? ಅಪ್ರಾಮಾಣಿಕತೆ ಮತ್ತು ಹಗರಣಗಳ ದುರ್ಗಂಧದಿಂದ ನಮ್ಮ ರಾಜಕೀಯ ಪಕ್ಷಗಳು ಈಚೆಗೆ ಬಂದು ಹೊಸದಾಗಿ ಚಿಂತಿಸಬೇಕು. ಮತದಾರನೂ ಪ್ರಾಮಾಣಿಕ ಆಗಬೇಕು.

**ಶ್ರೀನಿವಾಸ ಜೋಕಟ್ಟೆ**
ಜೋಕಟ್ಟೆ ಅಂಚೆ, ವಯಾ ಬಜ್ಪೆ, ಮಂಗಳೂರು ತಾಲ್ಲೂಕು
ದಕ್ಷಿಣ ಕನ್ನಡ ಜಿಲ್ಲೆ - ೫೭೪ ೧೪೩

# ಕರ್ನಾಟಕದ ಪ್ರಮುಖ ದಲಿತ ಚಿಂತಕರು ಮತ್ತು ನಾಯಕರು

ಪ್ರೊ॥ ಕೆ. ಆರ್. ದುರ್ಗಾದಾಸ್

'ಭಾರತದ ಚರಿತ್ರೆಯ ಪುನಾರಚನೆ ಮತ್ತು ದಲಿತರ ದೃಷ್ಟಿಕೋನ' – ಎಂಬ ವಿಷಯ ಕುರಿತ ಚರ್ಚೆ ಹಲವಾರು ಆಯಾಮಗಳನ್ನು ಹೊಂದಿದೆ. ಇದು ಚರಿತ್ರೆಯನ್ನು ಹೊಸ ನಿಟ್ಟುಗಳಿಂದ ಅರ್ಥೈಸಲು ಹಾದಿಮಾಡಿಕೊಟ್ಟಿದೆ. ಚರಿತ್ರೆಯೆಂಬುದು ಮುಗಿದು ಹೋದ ಕಥೆ ಮಾತ್ರವಲ್ಲ, ಅದು ವರ್ತಮಾನದ ಮೇಲೆ ಬೀರುವ ಪ್ರಭಾವ ತುಂಬಾ ಮಹತ್ವದ್ದು. ಹಾಗೆಯೇ, ಅಂಬೇಡ್ಕರ್ ಹೇಳುವ ಹಾಗೆ 'ಚರಿತ್ರೆಯನ್ನು ಅರಿಯಲಾರದವರು ಚರಿತ್ರೆಯನ್ನು ಸೃಷ್ಟಿಸಲಾರರು'. ಈ ಸಂದರ್ಭದಲ್ಲಿ 'ಕರ್ನಾಟಕದ ಪ್ರಮುಖ ದಲಿತ ಚಿಂತಕರು ಮತ್ತು ನಾಯಕರು' – ಎಂಬ ವಿಷಯ ಕುರಿತು ನನಗೆ ಮುಖ್ಯವೆಂದು ತೋರಿದ ಕೆಲವು ವಿಚಾರಗಳನ್ನು ಇಲ್ಲಿ ಚರ್ಚಿಸಲಾಗಿದೆ. ಕರ್ನಾಟಕದ ಸಂದರ್ಭದಲ್ಲಿ 'ದಲಿತ' ಪದದ ಕುರಿತು ಸಾಕಷ್ಟು ಚರ್ಚೆಗಳಾಗಿವೆ. 'ದಲಿತ' ಎಂಬುದಕ್ಕೆ ದಮನಕ್ಕೆ ಒಳಗಾದ, ಛಿದ್ರ ಛಿದ್ರವಾದ, ಎಂಬ ಅರ್ಥಗಳಿವೆ. ಬಲಿಷ್ಠರಿಂದ ತುಳಿಯಲ್ಪಟ್ಟವರು, ಹತ್ತಿಕ್ಕಲ್ಪಟ್ಟವರು ಮತ್ತು ಶೋಷಣೆಗೆ ಒಳಗಾದವರು – ದಲಿತರು ಎಂಬುದನ್ನು ಸಾಮಾನ್ಯ ನೆಲೆಯಲ್ಲಿ ಒಪ್ಪಿಕೊಳ್ಳಲಾಗಿದೆ. ದಲಿತ ಸಾಹಿತ್ಯ ಸಂದರ್ಭದಲ್ಲಿ ಈ ಬಗೆಯ ಶೋಷಣೆಯನ್ನು ಪ್ರಮುಖವಾಗಿ ಎರಡು ವಿಭಾಗಗಳಲ್ಲಿ ಗುರುತಿಸಲಾಗಿದೆ:

೧. ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಶೋಷಣೆಗೆ ಒಳಗಾದ ಎಲ್ಲಾ ಜಾತಿಯ ಬಡವರು.

೨. ಸಾವಿರಾರು ವರ್ಷಗಳಿಂದ ಎಲ್ಲಾ ಬಗೆಯ ಶೋಷಣೆಗೆ ಒಳಗಾಗಿ ಮುಟ್ಟಿಸಿಕೊಳ್ಳಲು ಅನರ್ಹರೆಂದು ಪರಿಗಣಿತರಾದ ಅಸ್ಪೃಶ್ಯರು.

**ದಲಿತ ಪದದ ಅರ್ಥವ್ಯಾಪ್ತಿ**

ಯಾವ ಬಗೆಯ ಸಾರ್ವಜನಿಕ ಸೌಲಭ್ಯಗಳಿಲ್ಲದೇ, ಹಲವಾರು ಕಟ್ಟುಪಾಡುಗಳಿಗೆ ಒಳಗಾಗಿ, ಊರಹೊರಗೆ ದೂಡಲ್ಪಟ್ಟು, ಅಸ್ಪೃಶ್ಯರೆಂಬ ನಿಂದನೆಗೆ ಒಳಗಾದವರನ್ನು ದಲಿತರೆಂದು ಗುರುತಿಸಲಾಗಿದೆ. ಸ್ವಾತಂತ್ರ್ಯಾನಂತರ ನಮ್ಮ ಸರಕಾರವು ಹೀಗೆ ಅನಾದಿ ಕಾಲದಿಂದ ಶೋಷಿತರಾದವರನ್ನು ಗುರುತಿಸಿ ಒಂದು ಪಟ್ಟಿಯನ್ನು ತಯಾರಿಸಿದೆ. ಇಂಥವರನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಜನರೆಂದು ಕರೆಯಲಾಗಿದೆ. ಈ ಪಟ್ಟಿಯಲ್ಲಿ ನೂರಕ್ಕೂ ಹೆಚ್ಚಿನ ಸಂಖ್ಯೆಯ ಜಾತಿಗಳಿವೆ. ಆಶ್ಚರ್ಯವೆಂದರೆ ಈ ಪಟ್ಟಿಯಲ್ಲಿರುವವರೆಲ್ಲರೂ ಅಸ್ಪೃಶ್ಯರಲ್ಲ, ಜೊತೆಗೆ ಸ್ಪೃಶ್ಯ ಜಾತಿಯ ಬಡವರನ್ನೂ ಇದರಲ್ಲಿ ಸೇರಿಸಲಾಗಿದೆ.

ಸ್ವಾತಂತ್ರ್ಯ ಹೋರಾಟಗಾರರ ಅವಿರತ ಪ್ರಯತ್ನದ ಫಲವಾಗಿ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ, ದೇಶದ ಎಲ್ಲಾ ಜನಗಳಿಗೂ ಸಮಾನವಾದ ಸ್ಥಾನ, ಮಾನ, ಹಕ್ಕು ಬಾಧ್ಯತೆಗಳನ್ನು ಕಲ್ಪಿಸಿಕೊಡಲು ಲಿಖಿತ ಸಂವಿಧಾನ ಅಸ್ತಿತ್ವಕ್ಕೆ ಬಂದಮೇಲೆ (೧೯೫೦) ಡಾ॥ ಅಂಬೇಡ್ಕರ ಅವರ ಒತ್ತಾಸೆಯ ಫಲವಾಗಿ ದಲಿತರಿಗೆ ಹಾಗೂ ಹಿಂದುಳಿದ ವರ್ಗಗಳ ಜನರಿಗೆ ಪರಿಹಾರ ರೂಪದ ಸೌಲಭ್ಯವಾಗಿ ಮೀಸಲಾತಿ ಜಾರಿಗೆ ಬಂತು. ಪ.ಜಾತಿ/ಪಂಗಡಗಳ ಪಟ್ಟಿಯಲ್ಲಿ ಅಸ್ಪೃಶ್ಯ ಜಾತಿಗಳನ್ನು ಮುಖ್ಯವಾಗಿ ಲಕ್ಷಿಸಲಾಗಿತ್ತು. ಬಡತನದ ಪ್ರಶ್ನೆ ಎಲ್ಲಾ ಜಾತಿಗಳಲ್ಲಿದ್ದರೂ ಅಸ್ಪೃಶ್ಯತೆಯೆಂಬುದು ಒಂದು ಅಮಾನುಷ ಪದ್ಧತಿಯಾಗಿದ್ದರಿಂದ, ಈ ಅನಿಷ್ಟ ಪದ್ಧತಿಯಿಂದ ಅಸ್ಪೃಶ್ಯರನ್ನು ಬಿಡುಗಡೆಗೊಳಿಸಲು 'ಮೀಸಲಾತಿ' ಸೌಲಭ್ಯದಿಂದ ಸಾಧ್ಯವೆಂದು ಭಾವಿಸಲಾಗಿತ್ತು. ಮೀಸಲಾತಿ ಸೌಲಭ್ಯದ ಮಹತ್ವವನ್ನು ಅರಿತ ಇತರ ಸ್ಪೃಶ್ಯ ಜಾತಿಗಳ ಜನ ತಮ್ಮನ್ನು ಪರಿಶಿಷ್ಟರ ಪಟ್ಟಿಯಲ್ಲಿ ಸೇರಿಸುವಂತೆ ರಾಜಕೀಯ ಒತ್ತಡ ತಂದರು. ಕರ್ನಾಟಕದ ಸಂದರ್ಭದಲ್ಲಿ ಲಂಬಾಣಿಗರು, ಕೊರವರು (ಬಜಂತ್ರಿ), ಬೋಯಿ ಮುಂತಾದ ಜಾತಿಗಳ ಜನ ಆರ್ಥಿಕವಾಗಿ ತುಂಬಾ ದುಃಸ್ಥಿತಿಯಲ್ಲಿರುವುದು ನಿಜವಾದರೂ, ಸಮಾಜದಲ್ಲಿ ಇವರನ್ನು ಸ್ಪೃಶ್ಯರೆಂದು ಪರಿಗಣಿಸಲಾಗಿದೆ. ಇವರನ್ನು ಪರಿಶಿಷ್ಟರೆಂದು ಪರಿಗಣಿಸಿರುವುದಕ್ಕೆ ಅಸ್ಪೃಶ್ಯರಲ್ಲಿಯೂ ಅಸಮಾಧಾನವಿದೆ. ಸಾಮಾಜಿಕವಾಗಿ ಬಲಿಷ್ಠರೆಂದು ಪರಿಗಣಿತರಾಗಿರುವ ಲಿಂಗಾಯತ ಮತದ ಜಂಗಮರು 'ಬೇಡಜಂಗಮ'ರೆಂದು ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಸೇರಿದ್ದಾರೆ. ಸಮಾಜದಲ್ಲಿ ನಾವು ಮೇಲಿನವರು ಎಂದು ಜಾತಿ ಪ್ರತಿಷ್ಠೆಯಿಂದ ನಡೆದುಕೊಳ್ಳುವ ಜನಗಳೇ ಮೀಸಲಾತಿಯಂತಹ ಸೌಲಭ್ಯ ಪಡೆಯುವಲ್ಲಿ ನಾವು ಹಿಂದುಳಿದವರೆಂದು ವಾದಿಸುತ್ತಿದ್ದಾರೆ. ಅಷ್ಟೇ ಅಲ್ಲ ಕೆಳಜಾತಿ ಜನಗಳ ಮೇಲೆ ಇಂಥವರು ಹಲ್ಲೆ, ಅತ್ಯಾಚಾರ ನಡೆಸಿದ ನಿದರ್ಶನಗಳಿವೆ. ಇಂತಹ ಸಂಕೀರ್ಣ ಸಾಮಾಜಿಕ ವ್ಯವಸ್ಥೆಯಲ್ಲಿ ಯಾರನ್ನು ದಲಿತರೆಂದು ಗುರುತಿಸುವುದೆಂಬ ಸಮಸ್ಯೆ ಎದುರಾಗುತ್ತದೆ. ನಮ್ಮ ಸಾಮಾಜಿಕ ವ್ಯವಸ್ಥೆಯ ಒಳಸ್ವರೂಪವನ್ನು ಅಗೆಯುತ್ತಾ ಹೋದರೆ ಹಲವಾರು ವಿಲಕ್ಷಣ ಸಂಗತಿಗಳು ಗೋಚರವಾಗುತ್ತವೆ.




ನಮ್ಮ ಸಾಮಾಜಿಕ ವ್ಯವಸ್ಥೆ ಶ್ರೇಣೀಕೃತವಾಗಿದೆ. ತೀರಾ ಕೆಳಗಿನ ಸ್ತರದಲ್ಲಿ ಅಸ್ಪೃಶ್ಯರಿದ್ದಾರೆಂಬುದು ನಿಜ.ಅಸ್ಪೃಶ್ಯರ ನಡುವೆ ಒಳ ಭೇದಗಳಿವೆ. ಹೊಲೆಯರು ಮತ್ತು ಮಾದಿಗರಿಗಿಂತ ಸಮಗಾರರು ತಮ್ಮನ್ನು ಮೇಲೆಂದು ಭಾವಿಸುತ್ತಾರೆ. ಹೊಲೆಯರು ಮತ್ತು ಮಾದಿಗರ ನಡುವೆ ನಾನೆಚ್ಚೋ – ನೀನೆಚ್ಚೋ ಎಂಬ ತಾರತಮ್ಯ ಭಾವನೆಗಳಿವೆ. ಮಾದಿಗರನ್ನು ಗೌಡರೆಂದು ತಿಳಿಯುವ ಡಕ್ಕಲಿಗರಂತಹ ಜಾತಿಗಳಿವೆ. ಇವರ ಮೇಲೆ ಅದೇ ಪರಿಶಿಷ್ಟ ಪಟ್ಟಿಯ ಲಂಬಾಣಿ, ಬೋಯಿ, ಕೊರವರಂತಹ ಸ್ಪೃಶ್ಯ ಜಾತಿಗಳಿವೆ. ಇವರ ಮೇಲೆ ಕುರುಬರಿದ್ದಾರೆ, ಕುರುಬರ ಮೇಲೆ ಒಕ್ಕಲಿಗ, ಲಿಂಗಾಯತರಂತಹ ಬಲಿಷ್ಠ ಜಾತಿ ಜನರಿದ್ದಾರೆ. ಇವರೆಲ್ಲರ ಮೇಲೆ ಬ್ರಾಹ್ಮಣರಿದ್ದಾರೆ. ಜಾತಿಗಳಲ್ಲಿ ಮೇಲು, ಕೀಳೆಂಬುದು ಹೀಗೆ ಎಲ್ಲಾ ಜನಗಳನ್ನು ಸುತ್ತುವರಿದಿದೆ. ಡಾ॥ ಅಂಬೇಡ್ಕರ್ ಅವರು ಈ ಕುರಿತು ಹೇಳಿದ ಮಾತು ಇಲ್ಲಿ ಉಲ್ಲೇಖನೀಯ. 'ಜಾತಿ ವ್ಯವಸ್ಥೆಯು ಕೇವಲ ದಲಿತರನ್ನು ಮಾತ್ರ ಗುಲಾಮವಾಗಿಸಿಲ್ಲ; ಅದು ಪ್ರತಿಯೊಂದು ಜಾತಿಯಲ್ಲೂ ಪಂಗಡ, ಉಪಪಂಗಡಗಳನ್ನು ನಿರ್ಮಿಸಿರುವುದರಿಂದ, ಇಡೀ ಭಾರತೀಯರೆಲ್ಲರ ಮನಸ್ಸನ್ನು ಗುಲಾಮವಾಗಿಸಿದೆ'. ಈ ವಿಚಾರದ ಸುಳಿವಿಡಿದು ಹೊರಟರೆ ಅಮೆರಿಕಾದಂತಹ ಬಲಿಷ್ಠ ರಾಷ್ಟ್ರಗಳ ಎದುರಿನಲ್ಲಿ ಇಡೀ ಇಂಡಿಯಾವೇ ಒಬ್ಬ ದಲಿತನಾಗಿಬಿಟ್ಟಿದೆ. ರೈಲಿನಲ್ಲಿ ಪ್ರಯಾಣಿಸುತ್ತಿದ್ದಾಗ ಗಾಂಧಿ, ಬಿಳಿಯನೊಬ್ಬನಿಂದ ಹೊರದೂಡಲ್ಪಟ್ಟುದಕ್ಕೆ ಕಾರಣಗಳನ್ನು ಈ ಮೇಲಿನ ವಿವರಣೆಯ ಮೂಲಕ ಅರಿಯಬಹುದಾಗಿದೆ.

**ದಲಿತ ಚಿಂತನೆ**

'ದಲಿತ ಚಿಂತನೆ' ಎಂಬ ಪರಿಕಲ್ಪನೆ ಇತ್ತೀಚಿನದು. ಆದರೆ ಚಿಂತನೆಗೆ ಸುದೀರ್ಘ ಇತಿಹಾಸವಿದೆ. ದಲಿತ ಚಿಂತನೆಯನ್ನು ನಾವು ಜಾತಿ ಆಧಾರದ ಹಿನ್ನೆಲೆಯಲ್ಲಿಯೇ ಅರ್ಥೈಸ ಬೇಕಾಗಿಲ್ಲ. ದಲಿತ ಸಮಸ್ಯೆಯೆಂಬುದು ಹೇಗೆ ಮಾನವ ಸಮಸ್ಯೆಯಾಗಿ, ಒಟ್ಟಾರೆ ಬದುಕಿನ ಮೇಲೆ ದುಷ್ಪರಿಣಾಮಗಳನ್ನು ಬೀರಿದೆಯೊ, ಹಾಗೆಯೇ ಆ ಸಮಸ್ಯೆಯನ್ನು ನಿವಾರಿಸಿಕೊಳ್ಳದೆಯೇ ಸಮಾಜದಲ್ಲಿ ಸಮಾನತೆ ಮತ್ತು ಭ್ರಾತೃತ್ವಗಳನ್ನು ಸ್ಥಾಪಿಸಲಾಗುವುದಿಲ್ಲ, ಈ ಹಿನ್ನೆಲೆಯಲ್ಲಿ ಇತಿಹಾಸದುದ್ದಕ್ಕೂ ವ್ಯವಸ್ಥೆಯ ವಿರುದ್ಧ ಹೋರಾಡಿ ಮಾನವ ಸಮಸ್ಯೆಗಳಿಗೆ ತಮ್ಮ ಚಿಂತನೆಗಳ ಮೂಲಕ ಪರಿಹಾರ ಸೂಚಿಸಿದ ಎಲ್ಲಾ ಕ್ಷೇತ್ರಗಳ ಚಿಂತಕರೂ ಒಂದು ಅರ್ಥದಲ್ಲಿ ದಲಿತ ಚಿಂತಕರೇ. ವರ್ಣ ಅಥವಾ ಜಾತಿ ವ್ಯವಸ್ಥೆ, ಕರ್ಮ ಸಿದ್ಧಾಂತ ಮತ್ತು ಯಜ್ಞಯಾಗಾದಿಗಳನ್ನು ಆಚರಿಸುವುದರ ವಿರುದ್ಧ ಸೊಲ್ಲೆತ್ತಿದ ಬುದ್ಧ, ಬಸವ, ಅಲ್ಲಮ, ಕನಕದಾಸರಿಂದ ಹಿಡಿದು, ಆಧುನಿಕ ಪುರೋಹಿತಶಾಹಿಯ ವಿರುದ್ಧ ಸಮರ ಸಾರಿದ ಕುವೆಂಪು ಮುಂತಾದವರೆಲ್ಲ ದಲಿತ ಚಿಂತಕರೇ ಆಗಿದ್ದಾರೆ.

# ಹುಡುಗ ಕಟ್ಟಿದ ಕನಸು

ಹಡಗು ಹತ್ತಿ ಕಡಲು ದಾಟಿ
ಒಡಲ ತಳಮಳದ ಹಾಡು
ನಾಡಾಚೆ ಹಾಡಬೇಕೆಂದುಕೊಂಡೆದ್ದ ಮನೆ ಬಿಟ್ಟು!

ನಿಷಿದ್ಧ ಸಂಕೋಲೆಗಳ ಗಡಿ ದಾಟಿ
ಗವಿಯ ಕತ್ತಲೆಯ ಗರ್ಭ ಸೀಳಿ
ಭೂಗರ್ಭ ಸುರಂಗದಿಂದುದ್ಭವಿಸಿದ
ಪ್ರಳಯ ಕಂಪನ ಧ್ವನಿಗೂ ನಡುಗದೇ
ಉಡುಗದೇ ನಡದೇಬಿಟ್ಟ!
ಮುಂದಿಟ್ಟ ಹೆಜ್ಜೆ ಹಿಂದಿಡಲಿಲ್ಲ
ಗುರಿಮಾತ್ರ ಎಂದೂ ಮರೆಯಲಿಲ್ಲ!

ತನ್ನ ಇಟ್ಟ ಪುಟ್ಟ ಹೆಜ್ಜೆಗಳಲ್ಲೇ
ದಿಟ್ಟತನದಲಿ ಬ್ರಹ್ಮಾಂಡ ಕಾಣುವ ಬಯಕೆ
ಅಚ್ಚರಿ ಹುಟ್ಟಿಸುವ ಇರೇಳು ಲೋಕದ
ರೀಲು ಬಿಡಬೇಕೆಂದು ನಮ್ಮೆಲ್ಲರ ಎದೆಯ ಪರದೆಯ ಮೇಲೆ !

ಮೂಡಬೇಕಲ್ಲ ಅವನು ಚಿತ್ರಿಸಿದ ರೀಲು ?
ನಮ್ಮೆದೆಯ ಕಪ್ಪು ಪರದೆಯ ಮೇಲೆ



ಓಡಬೇಕಲ್ಲ ಅವನು ಸೃಷ್ಟಿಸಿದ ರೈಲು
ನಮ್ಮ ಮೂರು ಗೇಣಿನ ಸ್ವರ್ಗ ಕಾಣದ
ನ್ಯಾರೋಗೇಜಿನ ಮೇಲೆ !

ಆದರೂ ಹುಡುಗ ಧೃತಿಗೆಡಲಿಲ್ಲ
ಚಕ್ರದೀಕ್ಷೆಯ ತೊಟ್ಟು ಚಾರನ ವೇಷ ಉಟ್ಟು
ಗಿರಿಶಿಖರ ಬೆಟ್ಟ ಗುಡ್ಡಗಳಿಗೆಲ್ಲ ಭೆಟ್ಟಿ ಕೊಟ್ಟು
ನದಿ ಹಳ್ಳಕೊಳ್ಳಗಳ ಬಳಸಿ ಈಸಿ ಗೆದ್ದ.
ಹಾರುವ ಬಣ್ಣ ಬಣ್ಣದ ಪಕ್ಷಿ-ಲೋಕ ಸಂಚರಿಸಿ
ಹಾರುವ ಹಕ್ಕಿಯಾದ, ಓಡುವ ಕುದುರೆಯಾದ
ಕಲ್ಲಾದ ಮನದಲ್ಲಿ ಉಳಿ ಚಾಣ ಹಿಡಿದು
ಕೆತ್ತ ಬಯಸಿತು ಅವನ ಶಿಲ್ಪಿ ಮನಸು
ಒಡಮೂಡಿ ಬಂದರು ಅವನು ಬಳಸಿದ ಕಲ್ಲಲ್ಲಿ
ಸಿದ್ಧ ಪ್ರಬುದ್ಧರು.

ಹಡಗು ಹತ್ತಿ ಕಡಲು ದಾಟಿ
ಒಡಲ ತಳಮಳದ ಹಾಡು
ನಾಡಾಚೆ ಹಾಡಬೇಕೆಂದುಕೊಂಡೆದ್ದ ಮನೆ ಬಿಟ್ಟು !

ಗವಿಸಿದ್ಧ ಎನ್. ಬಳ್ಳಾರಿ
ಜವಾಹರ್ ಬೀದಿ, ಕೊಪ್ಪಳ- ೫೮೩ ೨೩೧

### ದಲಿತರು: ಮುಂದೇನು ?

ದಲಿತಪರ ಚಿಂತನೆ ಮೇಲ್ನೋಟಕ್ಕೆ ದಲಿತರನ್ನು ಮಾತ್ರ ಲಕ್ಷಿಸಿರುವಂತೆ ಕಂಡುಬಂದರೂ, ಅದು ಶೋಷಿತ ನೆಲೆಯಿಂದ ಹೊರಟು ಶೋಷಣಾರಹಿತ ಸಮಾಜ ನಿರ್ಮಾಣದ ಕಡೆಗೆ ಮುಖಮಾಡಿತ್ತು. ಹನ್ನೆರಡನೇ ಶತಮಾನದ ವಚನಕಾರರ ಚಳುವಳಿ ಮತ್ತು ಸಾಹಿತ್ಯದ ಸಂದರ್ಭವನ್ನು ಬಹುಮಟ್ಟಿಗೆ ಹೋಲುವಂತಿದ್ದ ದಲಿತ ಚಳುವಳಿಗಳು ಇಂದು ತಮ್ಮ ಕಾವನ್ನು ಕಳೆದುಕೊಂಡು ತಣ್ಣಗಾಗಿವೆ. ಸಮರ್ಥ ನಾಯಕರೇ ಇಲ್ಲದ ಸಂದರ್ಭವನ್ನು ದಲಿತರು ಎದುರಿಸುತ್ತಿದ್ದಾರೆ. ಸಂವಿಧಾನ ನಿರ್ಮಾಪಕರು ಅಂದು ಜಾತಿ ನಿವಾರಣೆಗಾಗಿ ಒದಗಿಸಿದ ಮೀಸಲಾತಿ ಸೌಲಭ್ಯವು ಇಂದು ಕೆಲವೇ ಜನಗಳ ಗುತ್ತಿಗೆಯಾಗಿ, ಆ ಸೌಲಭ್ಯವು ನಿಜವಾದ ಸಂತ್ರಸ್ತರಿಗೆ ದಕ್ಕದಂಥ ಸ್ಥಿತಿ ನಿರ್ಮಾಣವಾಗಿದೆ. ಪ್ರಜಾಪ್ರಭುತ್ವದಲ್ಲಿ ಆನುವಂಶಿಕ ಆಡಳಿತವಿರಬಾರದೆಂದು ಡಾ॥ ಅಂಬೇಡ್ಕರ್ ಪ್ರತಿಪಾದಿಸಿದ್ದರೂ, ಮೀಸಲಾತಿ ಸೌಲಭ್ಯ ಕೆಲವೇ ಜನಗಳಲ್ಲಿ ಆನುವಂಶಿಕವಾಗಿ ಮುಂದುವರೆಯುತ್ತಿರುವ ವಿಚಿತ್ರ ಪರಿಸ್ಥಿತಿ ಉಂಟಾಗಿದೆ. ಇಂತಹ ಸಂದರ್ಭದಲ್ಲಿ ದಲಿತಪರ ಚಿಂತಕರು ಇತ್ತಕಡೆ ಗಮನ ಹರಿಸಬೇಕಾಗಿದೆ.

ಕರ್ನಾಟಕದಲ್ಲಿ ಮಾದಿಗರು ನಡೆಸುತ್ತಿರುವ 'ಮೀಸಲಾತಿ ವರ್ಗೀಕರಣ' ಹೋರಾಟವು 'ಆಯಾ ಜಾತಿಯ ಜನಸಂಖ್ಯೆಗನುಗುಣವಾಗಿ ಮೀಸಲಾತಿ ವರ್ಗೀಕರಣವಾಗಬೇಕು' ಎಂಬುದನ್ನು ಪ್ರತಿಪಾದಿಸುತ್ತಿದೆ. ಹಾಗೆ ನೋಡಿದರೆ ದಲಿತ ಸಮುದಾಯಗಳೆಲ್ಲ ಇದನ್ನು ಒಕ್ಕೊರಲಿನಿಂದ ಸ್ವಾಗತಿಸಬೇಕಿತ್ತು. ಆದರೆ ಇದು ದಲಿತರಲ್ಲಿ ಒಗ್ಗಟ್ಟನ್ನು ಇಲ್ಲವಾಗಿಸುತ್ತದೆ ಎಂಬ ಸಬೂಬಿನ ಮೂಲಕ ಈ ಹೋರಾಟಕ್ಕೆ ವಿರೋಧ ವ್ಯಕ್ತಪಡಿಸಲಾಗುತ್ತಿದೆ. ಅಂಬೇಡ್ಕರ್ ಬಲಿಷ್ಠ ಜಾತಿಗಳ ವಿರುದ್ಧ ದಲಿತರ ಪರವಾಗಿ ಮೀಸಲಾತಿ ಕೇಳಿದಾಗ ದೇಶದ ಒಗ್ಗಟ್ಟಿಗೆ ಧಕ್ಕೆಯುಂಟಾಗಲಿಲ್ಲ, ಬದಲಿಗೆ ಅದು ದಲಿತರ ಹಕ್ಕು ಪ್ರತಿಪಾದನೆಯಾಯಿತು ಎಂದು ಅರ್ಥೈಸುವ ನಮಗೆ, ಇಂದು ಪರಿಶಿಷ್ಟರಲ್ಲಿ ತಮಗೆ ಅನ್ಯಾಯವಾಗುತ್ತಿದೆಯೆಂಬ ಮಾದಿಗರ ಕೂಗು, ಒಗ್ಗಟ್ಟನ್ನು ಒಡೆಯುವ ತಂತ್ರವಾಗಿ ಕೆಲವರಿಗೆ ಕಾಣುತ್ತಿರುವುದು ವಿಚಿತ್ರವಾಗಿದೆ. ದೇಶದ ತುಂಬೆಲ್ಲಾ 'ಜಾತಿ' ದಿನದಿಂದ ದಿನಕ್ಕೆ ಗಟ್ಟಿಗೊಳ್ಳುತ್ತಾ ನಡೆದಿದ್ದು, ಬಲಿಷ್ಠ ಜನಗಳು ಎಲ್ಲ ಬಗೆಯ ಅಧಿಕಾರ, ಸಂಪತ್ತುಗಳನ್ನು ತಾವೇ ಕೊಳ್ಳೆ ಹೊಡೆಯುತ್ತಿದ್ದಾರೆ. ಅದೇ ಬಗೆಯ ಶೋಷಕವರ್ಗದ ಧೋರಣೆಗಳನ್ನು ದಲಿತ ನಾಯಕರೂ ಅನುಸರಿಸುತ್ತಿದ್ದಾರೆ. ಮೀಸಲಾತಿ ಸೌಲಭ್ಯ ಪಡೆದ ಜನ ಆನುವಂಶಿಕವಾಗಿ ಮಂತ್ರಿ, ಶಾಸಕ, ಅಧಿಕಾರಿ ಮತ್ತಿತರ ಹುದ್ದೆಗಳನ್ನು ತಮಗೆ, ತಮ್ಮ ಕುಟುಂಬದ ಸದಸ್ಯರಿಗೆ ಮೀಸಲಿರಿಸುತ್ತಾ ತಾವೇ ಬಲಿಷ್ಠರಾಗುತ್ತಾ ಉಳಿದ ಬಹುಪಾಲು ಜನರ್ರಿಗೆ ಅದು ಕೈಗೆಟುಕದಂತೆ ಮಾಡಿ, ಆಜನ್ಮ ಪರಾವಲಂಬಿಗಳನ್ನಾಗಿ ಮಾಡುವ ಧೋರಣೆಗಳನ್ನು ಅನುಸರಿಸುತ್ತಿದ್ದಾರೆ. ಆಗಿನ ಕಾಲದ ರಾಜರು, ಮಂತ್ರಿಗಳು ಮತ್ತು ಪುರೋಹಿತರು ತಮ್ಮ ಸಾಮ್ರಾಜ್ಯಗಳ ಉಳಿವಿಗಾಗಿ ಜನಗಳಿಗೆ ಯುದ್ಧದ ಮಂತ್ರಗಳನ್ನು ಬೋಧಿಸುತ್ತಾ ತಾವು ಭೋಗ ಜೀವನದಲ್ಲಿ ಕಾಲ ಕಳೆಯುತ್ತಿದ್ದಂತೆ, ಈ ಕಾಲದ ದಲಿತ ನಾಯಕರುಗಳು ಜಾತಿ ಕೋಟೆಗಳನ್ನು ಕಟ್ಟಿಕೊಂಡು ಅಲ್ಲಿ ಸಾಮಾನ್ಯ ದಲಿತರು ಪರಸ್ಪರ ಕಾದಾಡುವಂತಹ ವಾತಾವರಣ ಸೃಷ್ಟಿಸುತ್ತಿದ್ದಾರೆ. ಜಾತಿ ನಿವಾರಣೆಗಾಗಿ ಚಾಲ್ತಿಗೆ ಬಂದ ಮೀಸಲಾತಿ ಸೌಲಭ್ಯ 'ಜಾತಿ'ಗಳನ್ನು ಇನ್ನಷ್ಟು ಗಟ್ಟಿಗೊಳಿಸುತ್ತಿದೆ ಎಂದರೆ ಇದು ಎಂತಹ ವಿಪರ್ಯಾಸ! ಮೀಸಲಾತಿ ಸೌಲಭ್ಯವೇ ದಲಿತರನ್ನು ಪೂರ್ಣವಾಗಿ ಸುಧಾರಿಸುತ್ತದೆ ಎಂದೇನೂ ಇದರ ಅರ್ಥವಲ್ಲ, ಈಗಿನ ಕೇಂದ್ರ ಮತ್ತು ರಾಜ್ಯ ಸರಕಾರಗಳಂತೂ ಎಲ್ಲ ಕ್ಷೇತ್ರಗಳಲ್ಲೂ ಖಾಸಗೀಕರಣದ ಹಾದಿ ಹಿಡಿದಿವೆ. ಸಮಸ್ಯೆ ಇದಲ್ಲ – ಮೀಸಲಾತಿ ವರ್ಗೀಕರಣ ಜಾರಿಗೆ ಬಂದರೆ, ರಾಜಕಾರಣದಲ್ಲಿ ಒಂದೇ ಜಾತಿಯ ಪ್ರಾಬಲ್ಯ ಕಡಿಮೆಯಾಗುತ್ತದೆ. ಆಗ ಬೇರೆ ಬೇರೆ ಜಾತಿಯ ಜನಗಳ ಮಧ್ಯೆ ಸೌಹಾರ್ದ ಸಂಬಂಧ ಸ್ಥಾಪಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಮೀಸಲಾತಿಯ ಸೌಲಭ್ಯವನ್ನು ಇನ್ನಾದರೂ ಜಾತಿ ನಿವಾರಣೆಯ ಉದ್ದೇಶಗಳಿಗಾಗಿ ಪುನರ್‌ವಿಮರ್ಶಿಸಬೇಕು. ಅಂತರ್‌ಜಾತಿ ವಿವಾಹ ಮಾಡಿಕೊಳ್ಳುವವರಿಗೆ ಮೀಸಲಾತಿಯಲ್ಲಿ ಇಂತಿಷ್ಟು ಪ್ರಮಾಣ ನಿಗದಿಯಾಗಬೇಕು. 'ಒಬ್ಬರಿಗೆ ಒಂದೇ ಸಲ ಮೀಸಲಾತಿ' ಎಂಬ ತತ್ವವೂ ಜಾರಿಗೆ ಬರಬೇಕು. ಆಗ ಜಾತ್ಯಾತೀತ ಧೋರಣೆಗಳಿಂದ ಮಾತ್ರ ಪ್ರಜಾಪ್ರಭುತ್ವದಲ್ಲಿ ಯಶಸ್ಸನ್ನು ಸಾಧಿಸಲು ಸಾಧ್ಯವೆಂಬುದು ಹೊಳೆಯುತ್ತದೆ.

ಪ್ರೊ॥ ಕೆ. ಆರ್. ದುರ್ಗಾದಾಸ್
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

# ಬಾಗಲಕೋಟೆ ಎದುರಿಸುತ್ತಿರುವ ವೈದ್ಯಕೀಯ ಸಮಸ್ಯೆಗಳು

ಡಾ|| ಸ. ಜ. ನಾಗಲೋಟಿಮಠ

**ಆ**ಲಮಟ್ಟಿ ಅಣೆಕಟ್ಟು ಹಲವಾರು ವಿಧದಲ್ಲಿ ಹೆಸರು ಮಾಡಿದೆ. ಅಡಿಗಲ್ಲು ಇಟ್ಟಮೇಲೆ ಅದು ಪೂರ್ಣಗೊಳ್ಳಲು ಸುಮಾರು ೪೦ ವರ್ಷಗಳೇ ಬೇಕಾದುವು. ಈ ಅವಧಿಯಲ್ಲಿ ಒಂದು ಅಣೆಕಟ್ಟಿಗೆ ಆಗಬೇಕಾದ ಮುದಿತನದ ಬದಲಾವಣೆಗಳು ಈಗಲೇ ಕಂಡಿವೆ. ತಳಪಾಯಕ್ಕೆ ೪೦ ವರ್ಷ ವಯಸ್ಸು. ಮೇಲಿನ ಭಾಗಕ್ಕೆ ಈಗ ಒಂದೇ ವರ್ಷದ ವಯಸ್ಸು. ಕಾರಣ ಈ ಅಣೆಕಟ್ಟು ಹುಟ್ಟುವಾಗಲೇ ವೃದ್ಧಾಪ್ಯ ಪಡೆದು ಹುಟ್ಟಿದೆ. ಕಟ್ಟುವಿಕೆ ಪೂರ್ಣಗೊಂಡ ಮೇಲೆ ಈಗ ಹಿನ್ನೀರಿನ ಆಟ ಪ್ರಾರಂಭವಾಗಿದೆ. ಹಿನ್ನೀರಿನಲ್ಲಿ ಅನೇಕ ಹಳ್ಳಿಗಳು, ಹೊಲಗಳು, ತೋಟ ಪಟ್ಟಿಗಳು ಮುಳುಗಿದುವು. ಇದರಿಂದ ಸಾವಿರಾರು ಜನರು ನಿರ್ಗತಿಕರಾದರು. ಕೆಲಸಗೇಡಿಗಳಾದರು. ಅಣೆಕಟ್ಟಿನ ಶಾಪದಿಂದ ಅನೇಕ ಕುಟುಂಬಗಳು ನಾಶವಾಗಿ ಹೋದುವು.

ಈಗ ಹಿನ್ನೀರು ಬಾಗಲಕೋಟೆ ನಗರದ ಬೆನ್ನು ಹತ್ತಿದೆ. ನಗರದ ಶೇ. ೬೦ ಭಾಗ ಮುಳುಗಿದೆ. ಅಣೆಕಟ್ಟಿನ ಹಿನ್ನೀರಿನಲ್ಲಿ ಇಷ್ಟು ದೊಡ್ಡ ಪಟ್ಟಣ ಮುಳುಗುವುದು ಬಹಳೇ ಕ್ವಚಿತ. ಇಡೀ ಏಷಿಯಾ ಖಂಡದಲ್ಲಿ ಶಹರ ಮುಳುಗುವ ಪ್ರಸಂಗ ಇದು ಎರಡನೆಯದೆಂದು ತಿಳಿದುಬರುತ್ತದೆ.

ಸಾಮಾನ್ಯ ಹೊಲಪಟ್ಟಿಗಳು ಮುಳುಗುವುದು ಅಂಥ ತೊಂದರೆಯ ಮಾತೇನಲ್ಲ. ಆದರೆ ಶಹರದ ಅರ್ಧ ಭಾಗಕ್ಕಿಂತ ಹೆಚ್ಚು ನೀರಲ್ಲಿ ಮುಳುಗಿ ಉಳಿದದ್ದು ಹಾಗೇ ಉಳಿಯುವುದು ದುರ್ದೈವ. ದಂಡೆಯಲ್ಲಿ ವಾಸಿಸುವ ಜನರಿಗೆ ಇದು ಭೂಮಿಯ ಮೇಲಿನ ನರಕವೆಂದೇ ಹೇಳಬೇಕು. ಈ ತೊಂದರೆಗಳನ್ನು ಒಂದೊಂದಾಗಿ ಪರಿಶೀಲಿಸಬೇಕು.

೧. ಅನೇಕರು ಚರ್ಚಿಸುವ ವಿಷಯವೆಂದರೆ ನೀರು ಮಲೆತು ನಿಲ್ಲುವುದು. ಇಂಥ ನೀರಿನಲ್ಲಿ ಸೊಳ್ಳೆಗಳ ಸಾಮ್ರಾಜ್ಯ ಹುಟ್ಟುವುದು. ಈ ಸೊಳ್ಳೆಗಳು ಮಲೇರಿಯಾ ರೋಗವನ್ನು ಪ್ರಸಾರ ಮಾಡುವುವು. ಅ) ನಿಯಂತ್ರಣದಲ್ಲಿ ಬರುತ್ತಿದ್ದ ಮಲೇರಿಯಾ ಮರುಕಳಿಸಿ ಬರಬಹುದು. ಆ) ಮಿತಿಮೀರಿ ಹೆಚ್ಚಬಹುದು. ವಿಚಾರಿಸಿದಂತೆ ಈಗ ಬಾಗಲಕೋಟೆಯಲ್ಲಿ ಮಲೇರಿಯಾ ಹೆಚ್ಚಿದೆ. ಇ) ಮಲೇರಿಯಾದ ವಿವಿಧ ರೂಪಗಳು ಕಾಣುತ್ತಲಿವೆ. ಅದರಲ್ಲೂ ಮಿದುಳಿನ ಮಲೇರಿಯಾ ನಾಲ್ಕು ಪಟ್ಟು ಹೆಚ್ಚಿದೆ. ಈ) ಮರೆಯಾಗುತ್ತಿದ್ದ ಮಲೇರಿಯಾ ಕರುಳು ಬೇನೆ ತಲೆಯೆತ್ತತೊಡಗಿದೆ. ಸೊಳ್ಳೆಗಳು ನೀರಿನಿಂದ ಅಂದಾಜು ೦.೮ ಕಿ.ಮೀ. ದೂರದವರೆಗೂ ಹಾರಿಬಂದು ರೋಗಪ್ರಸಾರ ಮಾಡಬಹುದು.

೨. ಸೊಳ್ಳೆಗಳು ಕೇವಲ ಮಲೇರಿಯಾ ಪ್ರಸಾರ ಮಾಡುತ್ತಿದ್ದರೆ 'ಒಳ್ಳೆಯದಾಗಿತ್ತು.' ಅವು ಇನ್ನೂ ಹಲವಾರು ರೋಗಗಳನ್ನು ಹರಡುತ್ತವೆ. ಅವುಗಳಲ್ಲಿ ಅ) ಜಪನೀಸ್ ಎನ್‌ಸೆಫಲೈಟಿಸ್ ಆ) ಡೆಂಗೂ ಜ್ವರ. ಇನ್ನೂ ಹಲವಾರು ರೋಗಗಳನ್ನು ಸೊಳ್ಳೆಗಳು ಪ್ರಸಾರ ಮಾಡಬಲ್ಲವು.

೩. ಫೈಲೇರಿಯಾ ಅಥವಾ ಆನೆಬಾವು ರೋಗವನ್ನು ಸೊಳ್ಳೆಗಳು ಹರಡುತ್ತವೆ. ಬಾಗಲಕೋಟೆ ಜಿಲ್ಲೆಯಲ್ಲಿ ಫೈಲೇರಿಯಾ ರೋಗ ನೂರಾರು ವರ್ಷಗಳಿಂದ ತೊಂದರೆ ಕೊಡುತ್ತಿದೆ. ಸೊಳ್ಳೆಗಳ ಪ್ರಮಾಣದಲ್ಲಿ ಹೆಚ್ಚುವರಿ ಆದರೆ ಆ ರೋಗವೂ ಹೆಚ್ಚುವುದು. ಇದರ ಮುನ್ಸೂಚನೆಯಂತೆ ಜನರಲ್ಲಿ ಇಯೋಸಿನೋಫಿಲಿಯಾ ಹೆಚ್ಚುತ್ತಿದೆ. ಇದನ್ನು ಬಾಗಲಕೋಟೆಯ ವೈದ್ಯರೆಲ್ಲ ಮನಗಂಡಿದ್ದಾರೆ.

೪. ಹಿನ್ನೀರಿನಲ್ಲಿ ಕೇವಲ ಸೊಳ್ಳೆಗಳು ವೃದ್ಧಿಸುತ್ತವೆ ಎಂಬುದು ನಿಜವಲ್ಲ. ಅಲ್ಲಿ ವೃದ್ಧಿಸುವ ಕೀಟಗಳ ಸಂಖ್ಯೆ ಅಪಾರ. ಈ ಕೀಟಗಳ ಬಗ್ಗೆ ಎಷ್ಟು ಬರೆದರೂ ಕಡಿಮೆ. ನೀರಿನ ಸಮೀಪ ಹೋಗಿ ನಿಂತರೆ ಸಾಕು ಅವು ಕೆಲವೇ ಕ್ಷಣಗಳಲ್ಲಿ ಜನರನ್ನು ಮುತ್ತುತ್ತವೆ ಹಾಗೂ ಕಚ್ಚುತ್ತವೆ. ಕಚ್ಚಿದ ಸ್ಥಳದಲ್ಲಿ ವಿಪರೀತ ಉರಿ ಕಾಣುವುದು. ಅಲರ್ಜಿ ಕಾಣುವುದು. ಬಾವು ಬರುವುದು. ಕೀಟಗಳಿಗೆ ಕೀಟನಾಶಕಗಳನ್ನು ಸಿಂಪಡಿಸಿದರೆ ಯಾವ ಫಲವೂ ಇಲ್ಲ. ಕೀಟಗಳು ಇನ್ನೂ ಜೋರಾಗುತ್ತವೆ ವಿನಾ ನಾಶವಾಗುವುದಿಲ್ಲ. ಇದನ್ನು ವಿಷಯ ತಜ್ಞರೇ ಪರೀಕ್ಷಿಸಿ ನೋಡಿದ್ದಾರೆ.

೫. ಹಿನ್ನೀರಿನ ಸಂಗಡ ಸಾವಿರಾರು ಹಾವುಗಳು ಬಂದಿವೆ. ಚೇಳುಗಳು ಬಂದಿವೆ. ಅವುಗಳ ತೊಂದರೆ ಜನರಿಗೆ ಬೇಕಾದಷ್ಟು ಆಗುತ್ತಲಿದೆ.

೬. ನಗರದ ದಂಡೆಯಲ್ಲಿ ನಿಂತ ನೀರು ಈಗ ನೀರಾಗಿ ಉಳಿದಿಲ್ಲ. ಅದು ವಿಚಿತ್ರ ಆಕಾರವನ್ನು ಪಡೆದಿದೆ. ನೋಡಲು ಅದು ಘನರೂಪ ಪಡೆದಿದೆ. ಅದರಲ್ಲಿ ಮಾನವರ ಮಲ, ದನಗಳ ಸಗಣಿ, ಪ್ರಾಣಿಗಳ ಹಿಕ್ಕೆ, ಲದ್ದಿ ಸುತ್ತಲಿನ ಹೊಲಸು ಸೇರಿಕೊಂಡಿವೆ. ಹಲವಾರು ಸತ್ತ ಪ್ರಾಣಿಗಳ ಕೊಳೆತ ಮಾಂಸ ಇದೆ. ಇವೆಲ್ಲವುಗಳ ಮಲೆಯುವಿಕೆ ಈ ಪದಾರ್ಥಕ್ಕೆ ಒಂದು ಭಯಾನಕ ವಾಸನೆಯನ್ನು ತಂದಿದೆ. ಆ ವಾಸನೆಗೆ ಅನೇಕರು ಉಬ್ಬಳಿಕೆ ತರುತ್ತಾರೆ. ವಾಂತಿ ಮಾಡಿಕೊಳ್ಳುತ್ತಾರೆ. ಸುತ್ತಲೂ ಅಥವಾ ಸಮೀಪದಲ್ಲಿ ವಾಸಿಸುವ ಜನರ ಫಜೀತಿ ಅಸಹನೀಯವಾಗಿದೆ.

ಇವೆಲ್ಲ ಕೇವಲ ಕೆಲವೇ ದಿನಗಳ ಬಳಿಕ ಕಡಿಮೆಯಾಗುವುದು ಎನ್ನುವ ಜನರಿದ್ದಾರೆ. ಅದು ಸಾಧ್ಯವಿಲ್ಲ. ಕಾರಣವೆಂದರೆ ಪ್ರತಿದಿನ ಸಾವಿರಾರು (೬೦ ಸಾವಿರ) ಜನರ ಮಲ ಹರಿದುಬಂದು ಇದೇ ನೀರಿಗೆ ಸೇರುತ್ತದೆ. ಪ್ರಾಣಿಗಳ ಗಂಜಲ ಹಾಗೂ ಹೊಲಸಿನಲ್ಲಿ ಮುಳುಗುವ ಪ್ರಾಣಿಗಳ ಕೊಳೆಯುವಿಕೆ ದುರ್ಗಂಧದ ಶಕ್ತಿಯನ್ನು ಹೆಚ್ಚಿಸಬಹುದೇ ಹೊರತು ಕಡಿಮೆಗೊಳಿಸಲಾರದು. ಈ ವಾಸನೆ ಕುಡಿದು ಬದುಕಿ ಉಳಿಯುವುದು ಅಸಾಧ್ಯ ಎನಿಸುವುದು.

೭. ಕುಡಿಯುವ ನೀರಿನ ರುಚಿ ಹಾಗೂ ವಾಸನೆ ಕೆಡುವಿಕೆ : ಇಂಥ ದುರ್ಗಂಧಮಯ ನೀರು ಅಲ್ಲಿಯೇ ನಿಲ್ಲುತ್ತದೆ ಎಂಬುದು ತಪ್ಪು. ಅದು ನೆಲದಲ್ಲಿ ಹರಿಯುತ್ತದೆ. ಮೊದಲಿದ್ದ ಕೊಳವೆ ಬಾವಿಗಳನ್ನು ತಲುಪುತ್ತದೆ. ಉಳಿದ ಸೇದುವ ಬಾವಿಗಳಲ್ಲಿ ಸೇರುತ್ತದೆ. ಇದರಿಂದ ಕೊಳವೆ ಬಾವಿಗಳ, ಸೇದುಬಾವಿಗಳ ನೀರಿಗೆ ವಾಸನೆ ಬರಲು ಪ್ರಾರಂಭಿಸಿದೆ. ವಾಸನೆಯ ಜೊತೆಗೆ ನೀರಿನ ರುಚಿ ಕೆಟ್ಟಿದೆ. ನೀರಿನ ಹೊಲಸು ಅಲ್ಲದೆ ಭೂಮಿಯಲ್ಲಿಯ ಲವಣಗಳು ವಿಲೀನಿಸಿ ನೀರು ಸಂಪೂರ್ಣವಾಗಿ ಉಪಯೋಗಕ್ಕೆ ಅನರ್ಹವಾಗುತ್ತಲಿದೆ. ಇಂಥ ನೀರನ್ನು ಬಹಳ ದಿನಗಳವರೆಗೆ ಬಳಸಿದರೆ ಎಂತೆಂಥ ತೊಂದರೆಗಳು ಹುಟ್ಟುತ್ತವೆ ಎಂಬುದನ್ನು ಅಳೆಯಲು ಸದ್ಯಕ್ಕೆ ಸಾಧ್ಯವಿಲ್ಲ.

ನೀರಿನ ದಂಡೆಗೆ ತೇಲುತ್ತ ನಿಂತ ಹೊಲಸಿನಲ್ಲಿ ಸಾವಿರಾರು ಪ್ರಕಾರದ ಬ್ಯಾಕ್ಟೀರಿಯಾ, ಸೈರೋಕೀಟಗಳು ಜೀವಿಸಿರುತ್ತವೆ. ಇವು ಇಂದಿನತನಕ ನಮಗೆ ಪರಿಚಯವಿದ್ದ ಜೀವಿಗಳು ಇರಲಿಕ್ಕಿಲ್ಲ. ಸಂಪೂರ್ಣ ಬೇರೆಯಾಗಿರಬಹುದು. ಇಂಥ ಹೊಸ ಜೀವಿಗಳು ಸುತ್ತಲಿನ ಜನರನ್ನು ಪೀಡಿಸಬಲ್ಲವು. ಇವು ಜನರ ಹೊಟ್ಟೆ ಸೇರಿ ಜಠರ ಉರಿಯೂತಣೆ, ಕರುಳು ಉರಿಯೂತಣೆ ತರಬಲ್ಲವು. ಈ ಉರಿಯೂತಣೆ ಬಹಳ ಉಗ್ರವಾಗಿರಲು ಸಾಕು. ಆಗ ವ್ಯಕ್ತಿಗಳು ಜ್ವರ, ಹೊಟ್ಟೆ ನೋವು, ವಾಂತಿ ಭೇದಿಗಳಿಂದ ಬಳಲುವರು. ಭೇದಿಯಲ್ಲಿ ಕೇವಲ ರಕ್ತ ಇರಬಹುದು ಇಲ್ಲವೆ ಆಮ ಹಾಗೂ ರಕ್ತ ಮಿಶ್ರಣವಾಗಿರಬಹುದು. ಕೆಲವು ಸಂದರ್ಭಗಳಲ್ಲಿ ರೋಗಿ ಮರಣ ಹೊಂದಬಹುದು.

ಇಂಥ ಪ್ರಸಂಗಗಳನ್ನು ''ಡ್ಯಾಮ್ ಸೈಟ್ ಭೇದಿ'' ಎಂದು ಕರೆಯುವರು. ಈಗ ಉಳಿದ ರೋಗಗಳನ್ನು ಸೇರಿಸಿ ಈ ಗುಂಪಿಗೆ ''ಡ್ಯಾಮ್ ಸೈಟ್ ಖಾಯಿಲೆಗಳು'' ಎಂದು ಕರೆಯುವರು. ಡ್ಯಾಮ್ ಸೈಟ್ ಖಾಯಿಲೆಗಳು ಕೇವಲ ಮನುಷ್ಯರನ್ನು ಪೀಡಿಸುತ್ತವೆ ಎಂದು ತಿಳಿಯಬಾರದು. ಇವುಗಳಿಂದ ಸಾಕುಪ್ರಾಣಿಗಳೂ ಬಳಲುತ್ತವೆ. ಪ್ರಾಣಿಗಳಿಗೆ ಯಾವುದೇ ತರದ ಮದ್ದುಗಳಿಲ್ಲ.

**೮. ಗೋಡೆಗಳ ಜಂಪು ಹಿಡಿಯುವಿಕೆ :** ಹಿನ್ನೀರು ಬಾವಿ ತಲುಪುತ್ತದೆ ಎಂದು ಎಲ್ಲರಿಗೂ ಈಗ ತಿಳಿದಿದೆ. ಅದೇ ರೀತಿಯಲ್ಲಿ ನೀರು ಸುತ್ತಲಿನ ಕಟ್ಟಡಗಳ ಗೋಡೆಗಳಿಗೂ ಬರುತ್ತದೆ. ಕೆಲವು ಕಟ್ಟಡಗಳಲ್ಲಿ ೨೦೦ ಸೆಂ.ಮೀ. ವರೆಗೂ ಹಸಿಯಾಗಿದೆ. ಈ ಹಸಿ ಗೋಡೆಗಳ ಮೇಲೆ ಕೀಟಗಳ ಹಚ್ಚಡವೇ ತಯಾರಾಗುತ್ತದೆ. ಮನೆಯಲ್ಲಿ ವಾಸಿಸುವುದೇ ದುಸ್ತರವಾಗುತ್ತದೆ. ಕಟ್ಟಡಗಳು ಎಂದು ಕುಸಿಯುವುವೋ ತಜ್ಞರೇ ಹೇಳಬೇಕು. ಮನೆಯವರಂತೂ ಸಾವಿನ ನೆರಳಿನಲ್ಲಿ ಬದುಕಬೇಕು.

**೯. ನಿತ್ಯ ಕೀಟಗಳೇ ಆಹಾರ :** ಕೀಟಗಳ ಸಂಖ್ಯೆ ಎಷ್ಟು ಹೆಚ್ಚಿದೆ ಎಂದರೆ ಸಂಜೆಗೆ ೭ರಿಂದ ಅಲ್ಲಿಯ ಜನ ತಮ್ಮ ಮೂಗು ಬಾಯಿ ಮುಚ್ಚುವಂತೆ ಮುಖಕ್ಕೆ ಬಟ್ಟೆ ಕಟ್ಟಿಕೊಳ್ಳುವರು. ಆ ಪ್ರದೇಶಕ್ಕೆ ಹೋದರೆ ಎಲ್ಲರೂ ಮಿನಿ ಬುರ್ಖಾ ಧರಿಸಿದಂತೆ ಕಾಣುವರು. ಯಾಕೆಂದು ಕೇಳಿದರೆ ''ಸಾಹೇಬ್ರ ! ಬಾಯಿ ತೆರೆದೆವೆಂದರೆ ಒಂದು ನೂರು ಹುಳಗಳು ಬಾಯಿ ಸೇರುತ್ತವೆ, ಮೂಗಿನಲ್ಲಿ ಸೇರುತ್ತವೆ. ಕಾರಣ ಸದಾಕಾಲ ಹೀಗೆ ಅರಿವೆ ಬಿಗಿದುಕೊಂಡು ಅಡ್ಡಾಡಬೇಕಾಗಿದೆ.'' ಮನೆಗಳ ಪರಿಸ್ಥಿತಿ ಇನ್ನೂ ಗಂಭೀರ.

ಮುಂದಿನ ಪುಟಕ್ಕೆ

# ರಾಷ್ಟ್ರೀಯ ಶಿಕ್ಷಣ ನೀತಿ - ೨೦೦೨
## ಸರ್ವೋಚ್ಚ ನ್ಯಾಯಾಲಯದ ತೀರ್ಪು - ಒಂದು ವಿಶ್ಲೇಷಣೆ

ಪ್ರೌಢ ಶಿಕ್ಷಣವನ್ನು ಕುರಿತಂತೆ ಕೇಂದ್ರ ಸರಕಾರ ರೂಪಿಸಿರುವ ರಾಷ್ಟ್ರೀಯ ಪಠ್ಯಕ್ರಮ ವಿವಾದಕ್ಕೊಳಗಾಗಿದ್ದು ಸರ್ವೋಚ್ಚ ನ್ಯಾಯಾಲಯವು ಬಗ್ಗೆ ನೀಡಿರುವ ತೀರ್ಪು ಹೊಸ ವಾದವಿವಾದಗಳಿಗೆ ಎಡೆ ಮಾಡಿಕೊಟ್ಟಂತಾಗಿದೆ. ಜಾತ್ಯತೀತತೆಗೆ ಬದ್ಧವಾಗಿರುವವರಿಗೆ ಈ ತೀರ್ಪಿನಿಂದ ಆಶಾಭಂಗವಾಗಿದೆ.

ಜಾತ್ಯತೀತತೆಯು ನಮ್ಮ ಸಂವಿಧಾನದ ಮೂಲಭೂತ ವೈಶಿಷ್ಟ್ಯಗಳಲ್ಲೊಂದು ಎಂಬುದು ನಿರ್ವಿವಾದ. ಕೇಶವಾನಂದ ಭಾರತಿ ಮೊಕದ್ದಮೆಗೆ ಸಂಬಂಧಪಟ್ಟಂತೆ ಜಾತ್ಯತೀತತೆ ಎಂಬ ಪರಿಕಲ್ಪನೆಗೆ (೨೬೮ನೇ ವಿಧಿಯ ಪ್ರಕಾರ) ಯಾವ ತಿದ್ದುಪಡಿಯನ್ನೂ ಮಾಡಲಾಗದು ಎಂದು ಸರ್ವೋಚ್ಚ ನ್ಯಾಯಾಲಯವೇ ಘೋಷಿಸಿದೆ.

ಪ್ರಸ್ತುತ ಮೊಕದ್ದಮೆಯಲ್ಲಿ ಆಕ್ಷೇಪಕ್ಕೆ ಗುರಿಯಾಗಿರುವ ಶಿಕ್ಷಣ ನೀತಿಯು ಜಾತ್ಯತೀತತೆಯ ಪರಿಕಲ್ಪನೆಗೆ ವಿರುದ್ಧವಾದ ಅಂಶಗಳನ್ನೇನೂ ಒಳಗೊಂಡಿಲ್ಲವೆಂದು ನ್ಯಾಯಾಲಯ ಅಭಿಪ್ರಾಯಪಟ್ಟಿದೆ. ಅದೇ ಸಂದರ್ಭದಲ್ಲಿ ವೈಯಕ್ತಿಕ ಪೂರ್ವಾಗ್ರಹಗಳು ಅಥವಾ ಸಂಕುಚಿತ ಮನೋಭಾವದ ಗ್ರಹಿಕೆಗಳಿಂದ ಈ ಶಿಕ್ಷಣ ನೀತಿಯ ಮೂಲೋದ್ದೇಶಗಳಿಗೆ ಧಕ್ಕೆಯು ಉಂಟಾಗದಂತೆ ಪ್ರಾರಂಭದಲ್ಲಿಯೇ ಸೂಕ್ತ ಕ್ರಮಗಳನ್ನು ಕೈಗೊಳ್ಳುವುದಲ್ಲದೆ ಇದನ್ನು ಅನುಷ್ಠಾನಗೊಳಿಸುವಲ್ಲಿ ಯಾವುದೇ ತತ್ವಾಂಧತೆ ಮತ್ತು ಮೂಢ ನಂಬಿಕೆಗಳ ಪ್ರತಿಪಾದನೆಗೆ ಅವಕಾಶವಿರಬಾರದೆಂದು ನ್ಯಾಯಾಲಯ ಆದೇಶಿಸಿರುವುದು ಗಮನಾರ್ಹ. ಅಧಿಕಾರದಲ್ಲಿರುವವರು ಯಾರೇ ಆಗಿರಲಿ, ಅವರು ತಮ್ಮದೇ ಆದ ನಂಬಿಕೆಗಳಿಗೆ ಅನುಸಾರವಾಗಿ ಶಿಕ್ಷಣ ಕ್ರಮದಲ್ಲಿ ಧಾರ್ಮಿಕ ಬೋಧನೆಯಲ್ಲಿ ನಿರತರಾಗುವ ಅಪಾಯವಿದೆಯಾದ್ದರಿಂದ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಮಟ್ಟದಲ್ಲಿಯೇ ಸರಕಾರವು ಈ ಕುರಿತು ಎಚ್ಚರ ವಹಿಸಬೇಕೆಂಬ ಮಾತುಗಳನ್ನೂ ನ್ಯಾಯಾಲಯ ಹೇಳಿದೆ. ಅಲ್ಲದೆ, ಧರ್ಮದ ಹೆಸರಿನಲ್ಲಿ ಶಾಲಾ ಮಕ್ಕಳ ಅನ್ವೇಷಣಾಶೀಲತೆ ಮತ್ತು ಮುಕ್ತ ಚಿಂತನಾ ಕ್ರಮವನ್ನು ಕುಂಠಿತಗೊಳಿಸಿ ಅವರನ್ನು ತಪ್ಪುದಾರಿಗೆ ಎಳೆಯುವುದಕ್ಕೆ ಅವಕಾಶವಿರದಂತೆ ಶಿಕ್ಷಕರು ಜವಾಬ್ದಾರಿಯಿಂದ ವರ್ತಿಸಬೇಕೆಂದು ನ್ಯಾಯಮೂರ್ತಿ ಧರ್ಮಾಧಿಕಾರಿ ಅವರು ಅಭಿಪ್ರಾಯಪಟ್ಟಿದ್ದಾರೆ.

ಜಾತ್ಯತೀತತೆಯಲ್ಲಿ ನಂಬಿಕೆಯಿಲ್ಲದಿರುವ ಕೇಂದ್ರ ಸರಕಾರದ ಈಗಿನ ಆಡಳಿತಶಾಹಿಯು ತನ್ನದೇ ಆದ ರೀತಿ ನೀತಿಗಳಿಂದ ಹಾಗೂ ಮರೆಮಾಚಿ ನ್ಯಾಯಾಲಯವು ಒತ್ತಿ ಹೇಳಿರುವ ಎಚ್ಚರಿಕೆಯ ಮಾತುಗಳಿಗೆ ತದ್ವಿರುದ್ಧವಾಗಿ, ವರ್ತಿಸುವ ಸಾಧ್ಯತೆಯಿದೆ ಎಂಬ ಜಾತ್ಯತೀತವಾದಿಗಳ ಆತಂಕವನ್ನು ತಳ್ಳಿಹಾಕುವಂತಿಲ್ಲ. ಆಡಳಿತದ ಚುಕ್ಕಾಣಿ ಹಿಡಿದಿರುವ ಈ 'ಮಹನೀಯರು' ತಮ್ಮದೇ ಆದ 'ಮಹದೋದ್ದೇಶಗಳಾದ' ಹಿಂದೂ ರಾಷ್ಟ್ರ, ಸಾಂಸ್ಕೃತಿಕ ರಾಷ್ಟ್ರೀಯತೆ ಮತ್ತು ಏಕಮುಖೀ ಸಂಸ್ಕೃತಿಗಳೆಂಬ ರಾಷ್ಟ್ರ ವಿರೋಧಿ ನೀತಿಗಳನ್ನು ಕಾರ್ಯರೂಪಕ್ಕೆ ತರಹೊರಟರೆ ಜನಸಾಮಾನ್ಯರ ರಕ್ಷಣೆಗೆ ನಿಲ್ಲುವವರಾರು ? ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ರಾಜಕೀಯ ಕ್ಷೇತ್ರದಲ್ಲಿರುವ ಇಂದಿನ ಗೊಂದಲಮಯ ಹಾಗೂ ಬಿಕ್ಕಟ್ಟಿನ ವಾತಾವರಣದಲ್ಲಿ ಬಹಿರಂಗವಾಗಿಯೋ, ಮುಚ್ಚುಮರೆಯಾಗಿಯೋ ಸತತವಾಗಿ ಜರುಗುತ್ತಿರುವ ಕೋಮುವಾದಿ ದುರ್ಬೋಧನೆಗಳಿಗೆ ಮುಗ್ಧ ಮನಸ್ಸಿನ ಎಷ್ಟೋ ಎಳೆಯರು ಬಲಿಪಶುಗಳಾಗುವ ಸಾಧ್ಯತೆಗಳೇ ಹೆಚ್ಚು. ನ್ಯಾಯಾಲಯದ ಆದೇಶಗಳಿಗೆ ಇದರಿಂದ ಸಂಭವಿಸುವ ದುರ್ಗತಿಯು ಏನೆಂಬುದನ್ನು ಇಲ್ಲಿ ವಿವರಿಸುವ ಆವಶ್ಯಕತೆಯಿಲ್ಲ. ಈ ಪ್ರಕ್ರಿಯೆಯಿಂದ ವಿದ್ಯಾರ್ಥಿಗಳು ವೈಜ್ಞಾನಿಕ ಮನೋಭಾವ, ಅನ್ವೇಷಣಾಶೀಲತೆ, ಮುಕ್ತ ಚಿಂತನೆ ಮತ್ತು ಕೋಮುಸಹಿಷ್ಣುತೆಗಳಿಂದ ವಂಚಿತರಾದರೆ ಸಂವಿಧಾನದ ಘನ ಉದ್ದೇಶಗಳು ತಮ್ಮ ಅರ್ಥವನ್ನು ಕಳೆದುಕೊಂಡು ಐಕ್ಯತೆ, ಸಮಗ್ರತೆ ಮತ್ತು ಸಹೋದರತ್ವ ಎಂಬ ನಮ್ಮ ಉದಾತ್ತ ಆಶಯಗಳು ಕೇವಲ ಮರೀಚಿಕೆಗಳಾಗಿ ಉಳಿಯುತ್ತವೆ.

ರಾಷ್ಟ್ರ ಇಂದು ದಿಕ್ಕೆಟ್ಟ ಪರಿಸ್ಥಿತಿಯಲ್ಲಿದೆ. ಗತಕಾಲದ ಹೆಪ್ಪುಗಟ್ಟಿದ ಭಾವನೆಗಳು ಮತ್ತು ಮೌಲ್ಯಗಳನ್ನು ಜಪಿಸುತ್ತಾ ಜಳಪಿಸುತ್ತಾ ಕೋಮುವಾದಿ ಮತ್ತು ಮತೀಯ ಮೂಲಭೂತವಾದಿ ಶಕ್ತಿಗಳು ರಾಷ್ಟ್ರದ ಪ್ರಗತಿಗೆ ಅಡ್ಡಗಾಲು ಹಾಕಿ ತನ್ಮೂಲಕ ರಾಜಕೀಯ ಲಾಭ ಪಡೆಯುವ ಹುನ್ನಾರ ನಡೆಸಿದ್ದಾರೆ. ಈ ಬೆಳವಣಿಗೆಗಳು ಪ್ರಜ್ಞಾವಂತ ಜನರಲ್ಲಿ ಆತಂಕಗಳಿಗೆ ಎಡೆಮಾಡಿಕೊಟ್ಟಿವೆ.

ಪೂರ್ವನಿಯೋಜಿತವಾಗಿ ಹಾಗೂ ಸಂಘಟನಾತ್ಮಕವಾಗಿ ಮತಾಂಧ ಶಕ್ತಿಗಳು ಗುಜರಾತಿನಲ್ಲಿ ಇತ್ತೀಚೆಗೆ ಕೈಗೊಂಡ ನರಮೇಧದಲ್ಲಿ ಅಲ್ಲಿನ ಸರಕಾರದ ಕೈವಾಡ ಎಷ್ಟರಮಟ್ಟಿಗೆ ಇತ್ತೆಂಬುದು ಗುಟ್ಟಾಗಿಯೇನೂ ಉಳಿದಿಲ್ಲ. ಈ ದುರಂತದಲ್ಲಿ ಸರ್ವೋಚ್ಚ ನ್ಯಾಯಾಲಯದ ತೀರ್ಪಿಗೆ ಭಂಗ ತರುವಂಥ ಇಂಗಿತಗಳು ಅಡಕವಾಗಿವೆಯೆಂಬುದನ್ನು ನಾವು ಮರೆಯಲಾಗದು.

ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ದಿನದಿನವೂ ಕ್ಷಿಪ್ರಗತಿಯಲ್ಲಿ ಸಂಭವಿಸುತ್ತಿರುವ ಘಟನೆಗಳಿಗೆ, ಜನತೆಯ ಆತಂಕಗಳಿಗೆ ತುಡಿತಗಳಿಗೆ ಶ್ರೇಷ್ಠ ನ್ಯಾಯಾಲಯ ಆಗಾಗಲೇ ಸ್ಪಂದಿಸಿ ತನ್ನ ದಿಟ್ಟ ನಿಲುವನ್ನು ಪ್ರದರ್ಶಿಸಬೇಕಾಗಿದೆ.

ಏಡ್ಸ್ ರೋಗದಂತೆ ರಾಷ್ಟ್ರಕ್ಕೆ ಮಾರಕವಾಗುತ್ತಿರುವ ವಿಭಜನಾತ್ಮಕ ಶಕ್ತಿಗಳು ಜನರ ಮಧ್ಯೆ ಕಂದರಗಳನ್ನು ಸೃಷ್ಟಿಸಿ ತಮ್ಮ ಅಧಿಕಾರವನ್ನು ಗಟ್ಟಿಗೊಳಿಸಿಕೊಳ್ಳುವ ಸಂಚು ನಡೆಸುತ್ತಿವೆ. ಸಂವಿಧಾನದ ಪ್ರಮುಖ ಆಧಾರ ಸ್ತಂಭಗಳಾದ ಜಾತ್ಯತೀತತೆ, ಐಕ್ಯತೆ ಮತ್ತು ಸಮಗ್ರತೆಗಳನ್ನು ರಕ್ಷಿಸುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ. ಶ್ರೇಷ್ಠ ನ್ಯಾಯಾಲಯವು ಏನೇ ತೀರ್ಪನ್ನು ಇತ್ತರೂ ಅದು ಮತ್ತಿತರ ಪರಿಣಾಮಗಳಿಗೂ ಅವಕಾಶ ಕೊಡುತ್ತದೆ. ಅದು ಸಂವಿಧಾನಾತ್ಮಕ, ರಾಷ್ಟ್ರೀಯ ಮತ್ತು ಸಾರ್ವಜನಿಕ ಆಯಾಮಗಳುಳ್ಳ ಒಂದು ಕ್ರಿಯೆಯೂ ಹೌದು. ಭಾರತ ಒಂದು ಸಾರ್ವಭೌಮ, ಸಮಾಜವಾದಿ, ಜಾತ್ಯತೀತ, ಪ್ರಜಾಪ್ರಭುತ್ವವಾದಿ, ವಿವಿಧ ಭಾಷಾವಾರು ಜನರನ್ನುಳ್ಳ ಮತ್ತು ಬಹುಮುಖೀ ಸಂಸ್ಕೃತಿಯ ಆಧಾರದ ಮೇಲೆ ಅಸ್ತಿತ್ವದಲ್ಲಿರುವ ರಾಷ್ಟ್ರವೆಂಬ ಸ್ಪಷ್ಟ ಚಿತ್ರ ಜನತೆಯಲ್ಲಿ ಮೂಡಿಬರಬೇಕಾದರೆ ರಾಷ್ಟ್ರೀಯ ಶಿಕ್ಷಣ ನೀತಿಯಂತಹ ಗಹನವಾದ ವಿಷಯಗಳು ಈಗಿನ ಸಣ್ಣ ಪೀಠಕ್ಕೆ ಬದಲಾಗಿ ಸರ್ವೋಚ್ಚ ನ್ಯಾಯಾಲಯದ ವಿಸ್ತೃತ ನ್ಯಾಯಪೀಠದ ಪರಿಧಿಯಲ್ಲಿ ಇನ್ನಷ್ಟು ಪರಿಷ್ಕೃತವಾಗುವುದು ಇಂದಿನ ತುರ್ತು ಅಗತ್ಯ.

**ಎಚ್. ಜಿ. ಬಾಲಕೃಷ್ಣ**
ನಿವೃತ್ತ ನ್ಯಾಯಮೂರ್ತಿಗಳು, ೭೭೪, ೧೫ನೇ ಅಡ್ಡರಸ್ತೆ
ಜೆ. ಪಿ. ನಗರ ಮೊದಲನೇ ಫೇಸ್, ಬೆಂಗಳೂರು-೭೮

---

*ಹಿಂದಿನ ಪುಟದಿಂದ*

ಒಂದು ಕಪ್ಪು ಚಹದಲ್ಲಿ ಹತ್ತಿಪ್ಪತ್ತು ಹುಳುಗಳು ಬೀಳುತ್ತವೆ. ಅದನ್ನು ಕುಡಿಯುವುದು ಹೇಗೆ ? ಇನ್ನು ಅಡುಗೆ ಮಾಡಬೇಕಾದರೆ, ರೊಟ್ಟಿ ಬಡಿಯಬೇಕಾದರೆ, ಉಣ್ಣಬೇಕಾದರೆ ಹಾರಾಡುವ ಹೊಲಸಿನ ಹುಳುಗಳನ್ನೇ ತಿನ್ನಬೇಕು. ಇಲ್ಲದೆ ಹೋದರೆ ಬೆಳಕಿರುವಾಗಲೇ ಎಲ್ಲ ಮುಗಿಸಿ ಮಲಗಬೇಕು.

ಮಲಗುವುದೂ ಸರಳ ಕಾರ್ಯವಲ್ಲ, ಹುಳುಗಳು ಮುಖಕ್ಕೆ ಅಪ್ಪಳಿಸುವುವು. ಹೊದಿಕೆಯಲ್ಲಿ ಸೇರುವುವು. ಹಾಸಿಗೆಯಲ್ಲಿ ಮೊದಲು ಅವೇ ಸೇರುತ್ತವೆ.

ಒಟ್ಟಿನಲ್ಲಿ ಅಲ್ಲಿ ವಾಸಿಸುವವರು ನಿತ್ಯ ಹುಳುಗಳನ್ನು ತಿನ್ನಬೇಕು – ಕೀಟಭಕ್ಷಿಗಳಾಗಬೇಕು !

**ಸಾಧ್ಯವಿರುವ ಪ್ರತಿಬಂಧಕೋಪಾಯಗಳು**

೧. **ಧೂಮೋಪಚಾರ** : ಯಂತ್ರದಿಂದ ಹೊಗೆ ಹುಟ್ಟಿಸಿ ನೆಲ-ನೀರು ಸಂಧಿಸುವಲ್ಲಿ ನಿತ್ಯ ಬಿಡಬಹುದು. ಈ ಸಾಧನಕ್ಕೆ ಒಂದು ಮಿತಿ ಇದೆ. ಇದನ್ನು ಕಿ.ಮೀ.ಗಳವರೆಗೆ ಮಾಡಲು ಸಾಧ್ಯವಿಲ್ಲ, ಸದ್ಯಕ್ಕೆ ಈ ವಿಧಾನ ಯಶಸ್ವಿಯಾಗಿಲ್ಲ.

೨. **ಡಿ.ಡಿ.ಟಿ.ಯಂಥ ಕೀಟನಾಶಕಗಳನ್ನು ಸಿಂಪಡಿಸುವುದು.** ಇದೂ ಒಂದು ಮಿತಿಯಲ್ಲಿ ಕಾರ್ಯ ಮಾಡುವುದು. ಮಲೆತು ನಿಂತ ಹಿನ್ನೀರಿನಲ್ಲಿ ಈ ವಿಧಾನ ಯಶಸ್ವಿ ಆಗುವುದಿಲ್ಲ.

೩. **ನೀರಿನ ದಂಡೆಯಲ್ಲಿ ಮಲೆತು ನಿಲ್ಲುವ ಹೊಲಸಿನ ರಾಡಿ ಇರದಂತೆ ನೋಡುವುದು** : ಒಂದುವೇಳೆ ಸುತ್ತಲೂ ವಾಸಿಸುವ ಜನರ ಮಲವು ನೀರನ್ನು ಸೇರದಿದ್ದರೆ ಇದು ಸಾಧ್ಯ. ಅದು ಸಾಧ್ಯವಾಗುವವರೆಗೆ ಈ ತೊಂದರೆಗಳೆಲ್ಲ ಹೆಚ್ಚುವವೇ ವಿನಃ ಕಡಿಮೆಯಾಗಲಾರವು. ಮನುಷ್ಯ ಮಲವು ಹಿನ್ನೀರನ್ನು ಸೇರಬಾರದೆಂದಿದ್ದರೆ ಈ ಹಿನ್ನೀರಿನ ಸುತ್ತಲೂ ಜನವಸತಿ ಇರಬಾರದು. ಅಂದರೆ ಬಾಗಲಕೋಟೆ ಸಂಪೂರ್ಣ ಸ್ಥಳಾಂತರ ಹೊಂದಬೇಕು. ಡಿವಿಜಿಯವರು ಅರ್ಥಪೂರ್ಣವಾಗಿ ಉದ್ಗರಿಸಿದ್ದಾರೆ :

ಪ್ರಕೃತಿಯಿಂ ಪೊರಗಿರುವ ನರನಾರು ಸೃಷ್ಟಿಯಲಿ ?
ಸ್ವಕೃತಿಯೆಂದವನೆನ್ನುವುದವಳಿರದೊಡಿರದು
ಸುಕೃತವೆನಿಸುವುದವಳ ನೀಂ ವಶಕೆ ಕೊಳುವ ನಯ
ವಿಕೃತಿಗೆಡೆಯಾಗದಿರೊ ಮಂಕುತಿಮ್ಮ

**ಡಾ|| ಸ. ಜ. ನಾಗಲೋಟಿಮಠ**
ವೈದ್ಯಕೀಯ ನಿರ್ದೇಶಕರು, ಬ.ವಿ.ವ. ಸಂಘ
ಬಾಗಲಕೋಟ- ೫೮೭೧೦೧

# ಇರಾಕಿನ ಮೇಲೆ ದುರಾಕ್ರಮಣ ನಡೆಸಲು ಅಮೆರಿಕದ ಸಿದ್ಧತೆ

ಇರಾಕಿನ ಮೇಲೆ ದಾಳಿ ನಡೆಸಿ ಅಧಿಕಾರದಲ್ಲಿರುವ ಸದ್ದಾಮ್ ಹುಸೇನ್‌ಅನ್ನು ನಿರ್ನಾಮಗೊಳಿಸಿ ಕೈಗೊಂಬೆ ಸರಕಾರವೊಂದನ್ನು ಅಲ್ಲಿ ಸ್ಥಾಪಿಸುವ ತನ್ನ ಯೋಜನೆಯನ್ನು ಕಾರ್ಯಗತ ಮಾಡುವ ಸನ್ನಾಹದಲ್ಲಿ ಪೂರ್ವಭಾವಿಯಾಗಿ ಅಮೆರಿಕ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ತಾನು ಮಂಡಿಸಿದ್ದ ನಿರ್ಣಯಕ್ಕೆ ಅಂಗೀಕಾರ ಮುದ್ರೆ ಪಡೆದು ಕೊಂಡಿದೆ. ಅಮೆರಿಕ ಮೊದಲಿನಲ್ಲಿ ಮಂಡಿಸಿದ್ದ ಉಗ್ರ ನಿರ್ಣಯದ ಪಾಠ ಬದಲಾಗಿ ನೇರವಾಗಿ ದಾಳಿ ನಡೆಸಲು ಅನುಮತಿ ನೀಡದೇ ಹೋಗಿದ್ದರೂ ಸಾರಾಂಶದಲ್ಲಿ ಅಂಗೀಕಾರವಾಗಿರುವ ನಿರ್ಣಯ ಅಮೆರಿಕಾಗೆ ಬೇಕಾಗಿದ್ದ ನೈತಿಕ ಪರವಾನಗಿ ಒದಗಿಸಿದೆ. ದುರಾಕ್ರಮಣ ನಡೆಸುವ ದಿನ ಸ್ವಲ್ಪ ಮುಂದೆ ಹೋದೀತು ಅಷ್ಟೆ. ಅಮೆರಿಕ ಇರಾಕಿಗೆ ಸಂಬಂಧಿಸಿದಂತೆ ಈ ನಿರ್ಣಯಕ್ಕೆ ಅಂಗೀಕಾರ ಪಡೆಯಲು ಅನುಸರಿಸಿದ ತಂತ್ರ ನಾಗರಿಕ ಜಗತ್ತು ತಲೆತಗ್ಗಿಸುವಂಥದ್ದು. ಅಮೆರಿಕದ ಹಂಚಿಕೆಗಳಿಗೆ ಒತ್ತಾಸೆ ನೀಡಲು ಹಿಂದೆ ಮುಂದೆ ನೋಡುತ್ತಿದ್ದ ಭದ್ರತಾ ಮಂಡಳಿಯ ಖಾಯಂ ಸದಸ್ಯ ರಾಷ್ಟ್ರಗಳಾದ ರಷ್ಯ, ಚೀಣ ಹಾಗೂ ಫ್ರಾನ್ಸ್‌ಗಳ 'ಮನವೊಲಿಸಿಕೊಳ್ಳಲು' ಅಮೆರಿಕ ಬೆದರಿಕೆ ಹಾಕುವ, ಆಮಿಷಗಳನ್ನು ತೋರುವ, ಸಮಜಾಯಿಷಿ ಮಾಡಿ ಕೊಳ್ಳುವ ತಂತ್ರಗಳನ್ನು ಅನುಸರಿಸಿದ್ದು ಪ್ರಪಂಚದ ಮಹಾ ಶಕ್ತಿ ರಾಷ್ಟ್ರ ತನ್ನ ಹಂಚಿಕೆ ಈಡೇರಿಸಿಕೊಳ್ಳಲು ಯಾವ ಮಟ್ಟಕ್ಕೆ ಇಳಿಯುವುದೆಂಬುದನ್ನು ತೋರಿಸಿತು. ತತ್ವಬದ್ಧವಾದ ನಿಲುವನ್ನು ತಳೆಯಲು ಹಿಂಜರಿದು ಅಮೆರಿಕದೊಂದಿಗೆ ರಾಜಿ ಮಾಡಿಕೊಂಡ ರಾಷ್ಟ್ರಗಳ ರೀತಿ ಶೋಚನೀಯ. ಅಮೆರಿಕದ ನಡವಳಿಕೆ ವಿಶ್ವಸಂಸ್ಥೆಯನ್ನು ಯಾವ ಸ್ಥಿತಿಗೆ ತಂದಿದೆ ಎಂಬುದು ಇದರಿಂದ ಬಹಿರಂಗಗೊಂಡಿದೆ.

ಇರಾಕಿನ ಮೇಲೆ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದ ಅಮೆರಿಕ ಕಳೆದ ವರ್ಷ ಸೆಪ್ಟೆಂಬರ್ ೧೧ರ ಘಟನೆಯ ನಂತರ ಭಯೋತ್ಪಾದನೆಯ ವಿರುದ್ಧ ಸಮರ ಸಾರಿದಾಗಿನಿಂದ ಇರಾಕಿನ ಮೇಲೆ ತನ್ನ ಕೆಂಗಣ್ಣು ಹಾಯಿಸಿತು. ಅಲ್‌ಖಾಯ್ದಾ ಭಯೋತ್ಪಾದಕರಿಗೂ, ಅಮೆರಿಕದಲ್ಲಿ ಸಂಭವಿಸಿದ ವಿಷಪೂರಿತ ಆಂಥ್ರ್ಯಾಕ್ಸ್ ಪ್ರಕರಣಗಳಿಗೂ ಇರಾಕಿಗೂ ನಂಟು ಕಲ್ಪಿಸುವ ಪ್ರಯತ್ನ ಮಾಡಿತು. ಅದು ಸಫಲವಾಗದೆ ಹೋಯಿತು. ಅಫ್ಘಾನಿಸ್ತಾನದ ಮೇಲೆ ನಡೆಸಿದ ಆಕ್ರಮಣ ಮುಗಿದ ಮೇಲೆ ಬುಷ್ ಸರಕಾರ ಇರಾಕಿನ ಕಡೆಗೆ ತಿರುಗಿತು. ಇರಾಕ್ ವಿಶ್ವಸಂಸ್ಥೆಯ ನಿರ್ಣಯಗಳನ್ನು ಉಲ್ಲಂಘಿಸಿ ಸಾಮೂಹಿಕ ವಿನಾಶಕಾರಿ ಅಸ್ತ್ರಗಳನ್ನು, ಮುಖ್ಯವಾಗಿ ರಾಸಾಯನಿಕ ಅಸ್ತ್ರಗಳನ್ನು ದಾಸ್ತಾನು ಮಾಡುತ್ತಿದೆ ಎಂಬ ಹಳೆಯ ಆಪಾದನೆಯನ್ನು ಮುಂದೆ ಮಾಡಿ ಪ್ರಚಾರ ಪ್ರಾರಂಭಿಸಿತು. ಇರಾಕ್‌ನಲ್ಲಿ ಸದ್ದಾಮ್ ಹುಸೇನ್ ಸರಕಾರ ಅಸ್ತಿತ್ವದಲ್ಲಿರುವವರೆಗೆ ನಾಗರಿಕ ಜಗತ್ತಿಗೆ ಕ್ಷೇಮವಿಲ್ಲ, ಅಮೆರಿಕಾಗೆ ಅಪಾಯ ತಪ್ಪಿದ್ದಲ್ಲ ಎಂದು ಗುಲ್ಲೆಬ್ಬಿಸಿದ ಬುಷ್ ಸರಕಾರ ಇರಾಕ್- ಇರಾನ್-ಉತ್ತರ ಕೊರಿಯ ''ದುಷ್ಟ ರಾಷ್ಟ್ರಗಳು'' ಎಂದು ಅಬ್ಬರಿಸತೊಡಗಿತು. ಆರ್ಥಿಕ ಹಿಂಜರಿತ, ಬೃಹತ್ ಕಾರ್ಪೊರೇಟ್ ಸಂಸ್ಥೆಗಳ ಅವ್ಯವಹಾರಗಳು, ಮಂದಗತಿಯಲ್ಲಿರುವ ಆರ್ಥಿಕ ಪರಿಸ್ಥಿತಿ, ಬೆಳೆಯುತ್ತಿರುವ ನಿರುದ್ಯೋಗ ಮೊದಲಾದ ಸಮಸ್ಯೆಗಳಿಂದ ಜನರ ಗಮನವನ್ನು ಬೇರೆ ಕಡೆಗೆ ತಿರುಗಿಸಲು ಇರಾಕಿನ ಭೂತವನ್ನು ಎಬ್ಬಿಸಿತು. ಕಳೆದ ಮೂರುನಾಲ್ಕು ತಿಂಗಳಿಂದ ಅಮೆರಿಕದ ಪತ್ರಿಕೆಗಳಲ್ಲಿ, ಮಾಧ್ಯಮಗಳಲ್ಲಿ ಇರಾಕಿನ ಅಧ್ಯಕ್ಷ ಸದ್ದಾಮ್ ಹುಸೇನ್ ವಿರುದ್ಧ ನಡೆಸುತ್ತಿರುವ ಪ್ರಚಾರ, ಅಮೆರಿಕದ ಅಧ್ಯಕ್ಷ ಬುಷ್‌ರ ನಂಜಿನ ಭಾಷಣಗಳು, ಹಾಗೆಯೇ ಅವರ ಅನುಯಾಯಿ ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್‌ನ ಆರ್ಭಟ ಇದಕ್ಕೆ ಸಾಕ್ಷಿ.

ಇರಾಕಿನ ಬಳಿ ಹೇರಳವಾಗಿ ಸಾಮೂಹಿಕ ವಿನಾಶಕಾರಿ ರಾಸಾಯನಿಕ ಅಸ್ತ್ರಗಳ ದಾಸ್ತಾನಿದೆ ಎಂಬ ಅಮೆರಿಕದ ಆರೋಪಕ್ಕೆ ಸಾಕ್ಷ್ಯ ಪುರಾವೆಗಳೇನಿಲ್ಲ. ಬ್ರಿಟನ್ನಿನ ಪ್ರಧಾನಿ ಟೋನಿ ಬ್ಲೇರ್ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಮಂಡಿಸಿದ ಸಾಕ್ಷ್ಯಾಧಾರಗಳು ಅವರ ಪಕ್ಷದ ಸದಸ್ಯರನ್ನೇ ನಂಬಿಸಲು ಸಾಧ್ಯವಾಗಲಿಲ್ಲ. ಸೇಡು ತೀರಿಸಿಕೊಳ್ಳುವ ಏಕೈಕ ಗುರಿಯಿಂದ, ಇರಾಕಿನ ಮೇಲೆ ಆಕ್ರಮಣ ನಡೆಸಿ ಸದ್ದಾಮ್ ಹುಸೇನ್‌ಅನ್ನು ನಿರ್ಮೂಲ ಮಾಡಿ ತನ್ನ ಮರ್ಜಿಗನು ಸಾರವಾಗಿ ನಡೆದುಕೊಳ್ಳುವ ಸರಕಾರವೊಂದನ್ನು ಅಲ್ಲಿ ಸ್ಥಾಪಿಸುವುದೇ ಅಮೆರಿಕದ ಮೂಲೋದ್ದೇಶ. ಇದರ ಜೊತೆಗೆ ತೈಲ ರಾಜಕಾರಣವೂ ಸೇರಿಕೊಂಡಿದೆ. ಇರಾಕನ್ನು ತನ್ನ ಅಧೀನ ಮಾಡಿಕೊಂಡರೆ ಅಲ್ಲಿನ ಅಪಾರವಾದ ತೈಲ ಸಂಪತ್ತು ವಶವಾಗುವುದರೊಂದಿಗೆ ಇಡೀ ಮಧ್ಯ ಪ್ರಾಚ್ಯದ ಮೇಲೆ ನಿಯಂತ್ರಣವನ್ನು ಬಲಪಡಿಸಿಕೊಳ್ಳಲು ಅಮೆರಿಕಾಗೆ ಅವಕಾಶವಾಗುವುದು. ಕಳೆದ ಗಲ್ಫ್ ಯುದ್ಧಾನಂತರ ಹನ್ನೊಂದು ವರ್ಷಗಳಲ್ಲಿ ಅಮೆರಿಕ ವಿಧಿಸಿದ ಆರ್ಥಿಕ ದಿಗ್ಬಂಧನ ಇರಾಕಿನ ಜನಸಾಮಾನ್ಯರನ್ನು ತೀವ್ರವಾಗಿ ಬಾಧಿಸಿತೇ ಹೊರತಾಗಿ ಸದ್ದಾಮ್ ಹುಸೇನ್‌ನನ್ನು ಮಣಿಸಲಾಗಲಿಲ್ಲ. ನಿಧಾನವಾಗಿಯಾದರೂ ಆರ್ಥಿಕ ದಿಗ್ಬಂಧನವನ್ನು ಉಲ್ಲಂಘಿಸಿ ಇತರ ರಾಷ್ಟ್ರಗಳು ಇರಾಕಿನೊಂದಿಗೆ ವ್ಯವಹಾರದಲ್ಲಿ ತೊಡಗಿದ್ದುದು ಅಮೆರಿಕಕ್ಕೆ ನುಂಗಲಾರದ ತುತ್ತಾಗಿತ್ತು. ಅದರಿಂದಾಗಿಯೇ ಈಗ ಇರಾಕನ್ನು ಮುಗಿಸಿಬಿಡಲು ಅಮೆರಿಕ ನಿರ್ಧರಿಸಿದೆ.

ಗಲ್ಫ್ ಯುದ್ಧದ ಸಮಯದಲ್ಲಿ, ಅಫ್ಘಾನಿಸ್ತಾನದ ಮೇಲೆ ದಾಳಿ ನಡೆಸಿದ ಸಮಯದಲ್ಲಿ ಅಮೆರಿಕ ಪ್ರಪಂಚದ ಇತರ ರಾಷ್ಟ್ರಗಳಿಂದ ಪಡೆದುಕೊಂಡ ಬೆಂಬಲ ಈಗ ಲಭ್ಯವಾಗಿಲ್ಲವಾಗಿದೆ. ಇರಾಕಿನ ಮೇಲೆ ದುರಾಕ್ರಮಣಕ್ಕೆ ಬ್ರಿಟನ್ನಿನ ಪೂರ್ಣ ಬೆಂಬಲವನ್ನು ಬಿಟ್ಟರೆ ಇತರ ಯುರೋಪಿನ ರಾಷ್ಟ್ರಗಳಿಂದ ಪ್ರತಿಕ್ರಿಯೆ ಅಮೆರಿಕಾಗೆ ಅನುಕೂಲವಾಗಿಲ್ಲ. ಹಾಗೆಯೇ ಮಧ್ಯ ಪ್ರಾಚ್ಯ ದೇಶಗಳು, ಇತರ ಅಭಿವೃದ್ಧಿಶೀಲ ರಾಷ್ಟ್ರಗಳು ಇರಾಕಿನ ಮೇಲೆ ಆಕ್ರಮಣಕ್ಕೆ ವಿರೋಧ ವ್ಯಕ್ತಪಡಿಸಿವೆ. ಈ ಸಂದರ್ಭದಲ್ಲಿ ಭಾರತ ಅಮೆರಿಕದ ಯೋಜನೆಗೆ ವಿರೋಧ ವ್ಯಕ್ತಪಡಿಸಿರುವುದು ಸ್ವಾಗತಾರ್ಹ. ಯಾರು ಬೆಂಬಲ ನೀಡಲಿ ಬಿಡಲಿ ತಾನು ಏಕಪಕ್ಷೀಯವಾಗಿ ಇರಾಕಿನ ಮೇಲೆ ಕ್ರಮ ತೆಗೆದುಕೊಳ್ಳಲು ಹಿಂಜರಿಯುವುದಿಲ್ಲ ಎನ್ನುವ ಜಾರ್ಜ್ ಬುಷ್ ಹೇಳಿಕೆಯನ್ನು ಈ ಹಿನ್ನೆಲೆಯಲ್ಲಿ ಗಮನಿಸಬೇಕು. ವಿಶ್ವಸಂಸ್ಥೆಗೆ ತುಚ್ಛವಾಗಿ ಬೆದರಿಕೆ ಹಾಕಿದ್ದೂ ಕೂಡ ಇತರ ದೇಶಗಳ ಮೇಲೆ ಒತ್ತಡ ತರುವುದಕ್ಕಾಗಿ. ವಿಶ್ವಸಂಸ್ಥೆ ಸದ್ದಾಮ್ ಹುಸೇನ್‌ನನ್ನು ಎದುರಿಸಲು ಧೈರ್ಯ ತೋರದೇ ಹೋದಲ್ಲಿ, ನಾವೇ ಏಕಪಕ್ಷೀಯವಾಗಿ ಎದುರಿಸುತ್ತೇವೆ ಎಂದು ಜಾರ್ಜ್ ಬುಷ್ ಅಪ್ಪಣೆ ಕೊಡಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಪ್ರಪಂಚದ ಅತ್ಯಂತ ಬಲಿಷ್ಠ ರಾಷ್ಟ್ರವಾಗಿ ಜವಾಬ್ದಾರಿಯುತವಾಗಿ ನಡೆದುಕೊಳ್ಳುವ ವಿವೇಚನೆ ತೋರದೆ ಅಮೆರಿಕ ಇತರ ದೇಶಗಳನ್ನು 'ಬ್ಲಾಕ್ ಮೇಲ್' ಮಾಡಿದೆ. ವಿಶ್ವಸಂಸ್ಥೆಯ ಬಗ್ಗೆ ಅದು ತೋರಿರುವ ಅನಾದರಣೆ ಆ ಸಂಸ್ಥೆಯ ಭವಿಷ್ಯಕ್ಕೇ ವಿಪತ್ಕಾರಿಯಾಗಿದೆ. ಅಮೆರಿಕ ನಡೆದುಕೊಂಡಿರುವ ರೀತಿಯಿಂದ ವಿಶ್ವಸಂಸ್ಥೆಗೆ ಕೂಡ ಲೀಗ್ ಆಫ್ ನೇಷನ್ಸ್‌ಗೆ ಬಂದ ಗತಿಯೇ ಬಂದೀತೆಂಬ ಸಂಶಯ ಬರುತ್ತಿದೆ.

ಅಮೆರಿಕಾ ಇರಾಕಿನ ಮೇಲೆ ಮಾಡಿರುವ ಆಪಾದನೆಯನ್ನು ತಪಾಸಣೆ ಮಾಡಲು ವಿಶ್ವಸಂಸ್ಥೆಯ ಶಸ್ತ್ರಾಸ್ತ್ರ ತನಿಖೆಗಾರರು ಮತ್ತೆ ಇರಾಕಿಗೆ ಹೋಗಿ ವರದಿ ಮಾಡಬೇಕೆಂಬುದೇ ವಿಶ್ವಸಂಸ್ಥೆಯ ನಿರ್ಣಯದ ಸಾರಾಂಶ. ಅದಕ್ಕೆ ಮುವತ್ತು ದಿನಗಳ ಗಡುವು. ಸಾರ್ವಭೌಮ ರಾಷ್ಟ್ರವೊಂದು ತನ್ನ ರಕ್ಷಣೆಗಾಗಿ ಹೊಂದಿರುವ ಶಸ್ತ್ರಾಸ್ತ್ರಗಳನ್ನು ತನಿಖೆಗೊಳಪಡಿಸಬೇಕೆಂಬುದು ಎಷ್ಟು ಸಮರ್ಥನೀಯ ? ಅಮೆರಿಕದಲ್ಲಿ ನಮ್ಮ ಇಡೀ ಭೂಮಂಡಲವನ್ನೇ ಹಲವು ಪಟ್ಟು ಧೂಳೀಪಟ ಮಾಡಬಹುದಾದಷ್ಟು ನ್ಯೂಕ್ಲಿಯರ್ ಅಸ್ತ್ರಗಳ ದಾಸ್ತಾನಿವೆ ಎಂಬುದು ಸರ್ವವಿದಿತ. ಅವನ್ನೂ ಏಕೆ ವಿಶ್ವಸಂಸ್ಥೆಯ ತಪಾಸಣೆಗೊಳಪಡಿಸಕೂಡದು ಎನ್ನುವ ಪ್ರಶ್ನೆ ಸಹಜವಾಗಿ ಏಳುತ್ತದೆ. ಅದೇನೇ ಇರಲಿ ಇರಾಕಿಗೆ ವಿಶ್ವಸಂಸ್ಥೆಯ ಶಸ್ತ್ರಾಸ್ತ್ರ ತನಿಖೆಗಾರರನ್ನು ಕಳಿಸಿಕೊಡುವ ತೀರ್ಮಾನ ನೆಪಮಾತ್ರಕ್ಕೆ ಅಷ್ಟೆ. ಅಮೆರಿಕ ಇರಾಕಿನ ಮೇಲೆ ದಾಳಿ ನಡೆಸುವುದು ಖಚಿತ. ಅದು ಎಂದು ಎನ್ನುವುದು ನಿಶ್ಚಯವಾಗ ಬೇಕಷ್ಟೆ. ಬುಷ್ ಸರಕಾರ ಇರಾಕಿನ ಮೇಲೆ ಆಕ್ರಮಣ ನಡೆಸಲು ಅಮೆರಿಕದ ಉಭಯ ಸದನಗಳ ಸಮ್ಮತಿಯನ್ನು ಪಡೆದು ಕೊಂಡಿದೆ. ಇರಾಕನ್ನು ಆಕ್ರಮಿಸಿಕೊಂಡ ಮೇಲೆ ಮುಂದೇನು ಮಾಡಬೇಕೆಂಬ ಯೋಜನೆಯನ್ನು ಪೆಂಟಗನ್ ಹಾಕಿಕೊಂಡಿದೆ. ಅಫ್ಘಾನಿಸ್ತಾನದಲ್ಲಿನಂತೆ ಸರಕಾರವೊಂದರ ಸ್ಥಾಪನೆ ಒಡನೆಯೇ ಸಾಧ್ಯವಾಗದೆಂಬ ವಿಚಾರವನ್ನು ಗಮನದಲ್ಲಿರಿಸಿಕೊಂಡು ಅಮೆರಿಕದ ಸೇನಾಡಳಿತೆಯೇ ಕೆಲಕಾಲ ಇರುವಂಥ ವ್ಯವಸ್ಥೆಯನ್ನು ಪೆಂಟಗನ್ ಯೋಜಿಸಿದೆ. ಒಟ್ಟಿನಲ್ಲಿ ಅಮೆರಿಕದ ಸೇನೆಯನ್ನು ಇರಾಕಿನಲ್ಲಿ ಖಾಯಂ ಆಗಿ ನಿಯೋಜಿಸುವ ಹಂಚಿಕೆ ಇದೆ. ಇಷ್ಟೆಲ್ಲ ತಯಾರಿ ನಡೆಸಿಯೇ ಅಮೆರಿಕ ಹೆಜ್ಜೆ ಇರಿಸಿದೆ. ಅಮೆರಿಕದ ಈ ಹುಚ್ಚು ಸಾಹಸ ಮುಂಬರುವ ದಿನಗಳಲ್ಲಿ ಇಡೀ ಪ್ರಪಂಚದ ಚಹರೆಯನ್ನೇ ಬದಲಿಸೀತು ಎನಿಸುತ್ತದೆ.

ಸೀಯಾರ್ಕೆ
೮೪೯, ೬ನೇ ಕ್ರಾಸ್, ೧ನೇ ಮೇನ್ ಬನಶಂಕರಿ ೩ನೇ ಹಂತ,
೩ನೇ ಫೇಜ್, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು- ೮೫

# ನವಗ್ರಹ ಪರಿಕಲ್ಪನೆ: ಅಂದು-ಇಂದು

### ಗ್ರಹ ಪದದ ಅರ್ಥ

ವಸ್ತುಗಳ ಭೂರಿ ಸಂತೆಯಲ್ಲಿ ನಮ್ಮ ಲಕ್ಷ್ಯವನ್ನು 'ಹಿಡಿದಿಡುವ' ಕಾಯವೇ ಗ್ರಹ. ಈಗ, ನಭೋ ಮಂಡಲದಲ್ಲಿ ನಿರಂತರ ಪ್ರದರ್ಶನವಾಗುತ್ತಿರುವ ದೃಶ್ಯಗಳ 'ಸಂತೆ'ಯನ್ನು ತುಸು ಚಿಕಿತ್ಸಕವಾಗಿ ಪರಿಶೀಲಿಸೋಣ. ಹಗಲಿನಲ್ಲಿ ಸೂರ್ಯನದೇ ಏಕಚ್ಛತ್ರಾಧಿಪತ್ಯ. ಚಂದ್ರನ ಪೇಲವ ಬಿಂಬ ಪ್ರಕಟವಾಗುವುದು ವಿರಳವಲ್ಲ.

ಇರುಳಿನಲ್ಲಿ ಕಾಣುವುದೇ ನಿಜ ಗಗನ ನಾಟಕ. ಸ್ಥಿರ ನಕ್ಷತ್ರ ಚಿತ್ರಗಳ ಯವನಿಕೆ. ಇದರ ಮೇಲೆ ನಮ್ಮ ಅರಿವಿಗೆ ಬಾರದೆ ಸರಿಯುತ್ತಿರುವಂತೆ ಭಾಸವಾಗುವ ಚಂದ್ರಬಿಂಬ, ಮತ್ತು ೫ ನಕ್ಷತ್ರ ಸದೃಶ ಬೆಳಕಿನ ಚುಕ್ಕಿಗಳು. ಇವನ್ನು ಸುದೀರ್ಘಕಾಲ ಅವಲೋಕಿಸಿ ಮಾಹಿತಿ ಕಲೆ ಹಾಕಿದರೆ ಎರಡು ಮುಖ್ಯ ಸಂಗತಿಗಳು ತಿಳಿಯುತ್ತವೆ: ನಕ್ಷತ್ರಗಳ ಹಾಗೂ ನಕ್ಷತ್ರಚಿತ್ರಗಳ ಸಾಪೇಕ್ಷ ಸ್ಥಾನಗಳು ಸದಾ ಅಚಂಚಲ, ಚುಕ್ಕಿಗಳವಾದರೋ ಸದಾ ಸುಚಂಚಲ. ಎಂದೇ ನಕ್ಷತ್ರಗಳ 'ಭೂರಿ ಸಂತೆಯಲ್ಲಿ' ಬೆಳಕಿನ ೫ ಚುಕ್ಕಿಗಳು 'ನಮ್ಮ ಲಕ್ಷ್ಯವನ್ನು ಹಿಡಿ'ದಿಡುತ್ತವೆ. ಆದ್ದರಿಂದ ಇವು ಗ್ರಹಗಳು.

ಇವುಗಳ ಸುತ್ತ ಕ್ರಮೇಣ ಜಾನಪದ, ನಾಕ್ಷತ್ರಪದ, ಸ್ಥಳೀಯ ಅನುಭವ, ಪುರಾಣ ಮುಂತಾದವು ಬೆಸೆದುಕೊಂಡು ಇವುಗಳಿಗೆ ಬುಧ, ಶುಕ್ರ, ಕುಜ, ಗುರು ಮತ್ತು ಶನಿ ಎಂಬ ಅಂಕಿತನಾಮಗಳು ಪ್ರಾಪ್ತವಾದುವು.

### ಸಪ್ತಗ್ರಹ ತೋರಣ

ಸೂರ್ಯ ಮತ್ತು ಚಂದ್ರ ಕೂಡ ಚಲನಶೀಲ ಕಾಯಗಳು. ಆದ್ದರಿಂದ ಇವನ್ನೂ ಅಂದು (ಇತಿಹಾಸ ಪೂರ್ವ ದಿನಗಳಂದು) ಗ್ರಹಗಳೆಂದು ಪರಿಗಣಿಸಲಾಯಿತು. ಇದು ಅಂದಿನ ಸಪ್ತಗ್ರಹ ಪರಿಕಲ್ಪನೆ. ಸಪ್ತಾಹದಲ್ಲಿ(week) ೭ ದಿವಸಗಳು ಇರುವುದರ ಮತ್ತು ಅವನ್ನು ಇವೇ ಸಪ್ತಗ್ರಹನಾಮಗಳಿಂದ ಸೂಚಿಸಿರುವುದರ ಒಂದು ಕಾರಣವನ್ನಿಲ್ಲಿ ಕಾಣುತ್ತೇವೆ.

ಕಾಲ ಸಂದಂತೆ ಮಾನವ ಇನ್ನೊಂದು ಮಹತ್ತ್ವದ ತಥ್ಯ ಆವಿಷ್ಕರಿಸಿದ : ಸೂರ್ಯನಿಂದ ಶನಿವರೆಗಿನ ಸಪ್ತ ಗ್ರಹಗಳೂ, ಸ್ಥಿರನಕ್ಷತ್ರ ಚಿತ್ರಾಂಕಿತ ಖಗೋಳದ ಮುನ್ನೆಲೆಯಲ್ಲಿ, ನಿಶ್ಚಲ ಭೂಮಿಯ ಸುತ್ತ ಪರಿಭ್ರಮಿಸುತ್ತಿವೆ. ಚಲನದಿಶೆ ಪಶ್ಚಿಮ-ಪೂರ್ವ. ಹೌದು, ವಾಸ್ತವತೆ ಇರುವುದೇ ಹೀಗೆಂದು ತೀರ್ಮಾನಿಸಿದ. ಈ ತೆರನಾಗಿ ಆರಂಭವಾಯಿತು ಭೂಕೇಂದ್ರವಾದ (ಕ್ರಿಪೂ ೪ನೆಯ ಶತಮಾನ). ಮೇಲು ನೋಟಕ್ಕೆ ಕಂಡ ದೃಶ್ಯ ಕುರಿತು ಅಂದಿನ ಮಾನವನ ತಾರ್ಕಿಕ ಮತಿ ಬರೆದ ವ್ಯಾಖ್ಯಾನವಿದು.

### ರಾಹು ಕೇತು ಆವಿಷ್ಕಾರ

ಇಂದಿನಂತೆ ಅಂದು ಕೂಡ ಗ್ರಹಣಗಳು ವಿರಳ ವಿಚಿತ್ರ ವಿನೂತನ ಗಗನ ವಿದ್ಯಮಾನಗಳು. ಅಂದು ಅವನ್ನು ವಿಪತ್ಸೂಚಕಗಳು, ಅರಿಷ್ಟಕಾರಕಗಳು ಎಂದು ಮುಂತಾಗಿ ನಂಬಲಾಗಿತ್ತು. ಆದರೆ ವಾಸ್ತವ ಘಟನೆ (ಸೂರ್ಯ ಅಥವಾ ಚಂದ್ರಗ್ರಹಣ) ಸಂಭವಿಸಿದಾಗ ಬಾನಿನಲ್ಲಿ ಖುದ್ದು ಸೂರ್ಯಚಂದ್ರರಿಗಾಗಲೀ ಭೂಮಿಯಲ್ಲಿ ಜೀವಿಗಳಿಗಾಗಲೀ ಏನೂ ಅಪಾಯ ಕಂಡುಬರದ್ದರಿಂದ ತತ್ಪೂರ್ವ ಇದ್ದ ಭಯ ಆತಂಕಗಳ ಬದಲು ಬೆರಗು ಕುತೂಹಲಗಳು ಮೊಳೆತುವು. ಸಹಜವಾಗಿ ಮಾನವನ ಶೋಧಕ ಪ್ರವೃತ್ತಿ ಜಾಗೃತವಾಯಿತು.

ಕ್ರಮೇಣ ಅನಾವರಣಗೊಂಡ ವಾಸ್ತವತೆ ಗಗನಾಧ್ಯಯನಕ್ಕೆ ನವವೇದಿಕೆ ನಿರ್ಮಿಸಿತು. ಸೂರ್ಯಗ್ರಹಣ ಅಮಾವಾಸ್ಯೆಯಂದು ಮಾತ್ರ, ಅಂತೆಯೇ ಚಂದ್ರಗ್ರಹಣ ಹುಣ್ಣಿಮೆಯಂದು ಮಾತ್ರ ಕಾಣುತ್ತಿದ್ದುವು, ಅಂದ ಮಾತ್ರಕ್ಕೆ ಪ್ರತಿಯೊಂದು ಅಮಾವಾಸ್ಯೆ ಅಥವಾ ಹುಣ್ಣಿಮೆಯಂದು ಅಲ್ಲ. ಇದು ಹೀಗೇಕೆ?

ನಾಕ್ಷತ್ರಿಕ ಯವನಿಕೆ ಮೇಲೆ ಗ್ರಹಣ ಪ್ರಕಟವಾಗುವ ನಿರ್ದಿಷ್ಟ ನೆಲೆಗಳ ಬಗ್ಗೆ ಗಮನ ಹರಿಯಿತು. ಇವು ಕೇವಲ ಎರಡು ಕಾಲ್ಪನಿಕ ಬಿಂದುಗಳು. ಇವನ್ನು ಬೊಟ್ಟಿಟ್ಟು ತೋರಿಸಲು ಅಲ್ಲಿ ಭೌತಕಾರ್ಯಗಳೇನೂ ಇಲ್ಲ! ವೀಕ್ಷಕನನ್ನು (ಭೂಮಿ) ಕುರಿತಂತೆ ಇವು ಎದುರುಬದಿರಾಗಿವೆ. ಸೂರ್ಯ ಮತ್ತು ಚಂದ್ರ ಈ ಯಾವುದೇ ಬಿಂದುವಿನಲ್ಲಿ ಸಂಗಮಿಸಿದಾಗ ಸೂರ್ಯಗ್ರಹಣವೂ (ಆಗ ಅಮಾವಾಸ್ಯೆ ಕೂಡ) ಉಭಯ ಬಿಂದುಗಳಿಗೂ ಹಂಚಿಹೋಗಿರುವಾಗ ಚಂದ್ರಗ್ರಹಣವೂ (ಆಗ ಹುಣ್ಣಿಮೆ ಕೂಡ) ಸಂಭವಿಸುತ್ತವೆ.

ಅಂದಿನ ಮಾನವನ ದೃಷ್ಟಿಯಲ್ಲಿ ಗ್ರಹಣಗಳೆಂದರೆ ರುದ್ರಗಗನ ನಾಟಕಗಳು, ಹೆಬ್ಬಾವುಗಳೋ, ರಾಕ್ಷಸರೋ, ಬೇತಾಳಗಳೋ, ರವಿಶಶಿಯರನ್ನು ನುಂಗುವುದರಿಂದ, ಆದರೆ ಅನಿವಾರಣೀಯವಲ್ಲದ, ಘೋರ ಆಪತ್ತುಗಳು, ಮಾನವ ಪ್ರಯತ್ನವಿಲ್ಲದೇ ಈ ಆಕಾಶದೀಪಗಳಿಗೆ ಪುನರ್ಜನ್ಮ ಲಭಿಸದು, ಎಂದೇ ತಾನು ಡೋಲು ಡಮರು ಬಡಿದು, ಮಂತ್ರ ಮಾಟ ಮಾಡಿ, ಹೋಮ ಧೂಮ ಬೀಸಿ, ಪ್ರಾಣಿ ಬಲಿ ನೀಡಿ ಸೂರ್ಯ ಚಂದ್ರರನ್ನು ರಕ್ಷಿಸಬೇಕು ಎಂಬ ಭಾವನೆ ಪ್ರಬಲವಾಗಿ ತಳ ಊರಿತು.

ಈ ಯಮಳ ರಾಕ್ಷಸರೇ ರಾಹು ಮತ್ತು ಕೇತು. ಇವರಿಗೆ ಭೌತ ಅಸ್ತಿತ್ವವಿರದಿದ್ದರೂ ಗ್ರಹಣಗಳ ಕಾರಣವಾಗಿ 'ನಮ್ಮ ಲಕ್ಷ್ಯವನ್ನು ಹಿಡಿ'ದಿಡುವುದರಿಂದ ಇವರಿಗೂ ಗ್ರಹಗಳೆಂಬ (ಛಾಯಾಗ್ರಹಗಳು) ಎಂಬ ಅಂತಸ್ತು ಒದಗಿತು.

### ನವಗ್ರಹ ಪರಿಕಲ್ಪನೆ ಅಂದು

ನವಗ್ರಹ ಪರಿಕಲ್ಪನೆಯ ತುಣುಕುಗಳು ಆದಿ ಚಿಂತನಶೀಲ ಮಾನವನಲ್ಲಿ ಮೊಳಕೆಯೊಡೆದು (ಅಂದಾಜು ಕ್ರಿಪೂ ೫೦ನೆಯ ಶತಮಾನ), ಭೂಕೇಂದ್ರವಾದವಾಗಿ ಘನಿಸಿ (ಅಂದಾಜು ಕ್ರಿಪೂ ೪ನೆಯ ಶತಮಾನ) ಕ್ರಿಶ ೧೬ನೆಯ ಶತಮಾನದ ವೇಳೆಗೆ ಭದ್ರ ಅಭೇದ್ಯ (?) ಸೌಧವಾಗಿ ವಿಜೃಂಭಿಸಿದುವು. ಸೂರ್ಯನಿಂದ ಶನಿವರೆಗಿನ (ಭೂಮಿ ಸೇರಿರದ ಆದರೆ ಸೂರ್ಯ ಮತ್ತು ಚಂದ್ರ ಸೇರಿರುವ) ೭ ಗ್ರಹಗಳೂ ರಾಹು ಮತ್ತು ಎಂಬ ಎರಡು ಛಾಯಾಗ್ರಹಗಳೂ ಸೇರಿ ಅಂದಿನ ನವಗ್ರಹ ಪರಿಕಲ್ಪನೆ ಮೈದಳೆದು ಶಾಶ್ವತ ಸತ್ಯ ಎಂಬ ಹಿರಿಮೆ ಗಳಿಸಿತು.

ವಾಸ್ತವವಾಗಿ ಖಗೋಳ ವಿಜ್ಞಾನ (astronomy) ಬೆಳೆದು ನಳನಳಿಸಿದ ಪರಿಯೇ ಇದು : ಖಗೋಳ ವೀಕ್ಷಣೆ, ಸಂಗ್ರಹೀತ ಮಾಹಿತಿಗಳ ವಿಶ್ಲೇಷಣೆ, ಇವನ್ನ ಕಾರ್ಯ-ಕಾರಣ ಪಾತಳಿಯಲ್ಲಿ ಸಂಬಂಧಿಸುವ ನಿಯಮಗಳ ಶೋಧನೆ ಮತ್ತು ಇವೇ ನಿಯಮಗಳನ್ನು ವರ್ತಮಾನ ಖಗೋಳಕ್ಕೆ, ಮುಖ್ಯವಾಗಿ ನವಗ್ರಹಗಳಿಗೂ ಗ್ರಹಣಗಳಿಗೂ ಅನ್ವಯಿಸಿ ಇವುಗಳ ಭವಿಷ್ಯ ವರ್ತನೆಯ ನಿರ್ಧರಣೆ. ಇಂಥ ಭವಿಷ್ಯವಾಣಿ ಖಗೋಳದಲ್ಲಿ ಸಾಧುವಾಗದಾಗ ನಡೆದು ಬಂದ ಹಾದಿಯ ಪುನಃಶೋಧನೆ ಕೂಡ ಇದೇ ಚಿಂತನೆಯ ಅವಿಭಾಜ್ಯ ಅಂಗವಾಗಿ ಟಿಸಿಲೊಡೆಯಿತು. ಸಾರತಃ ಇದೇ ವೈಜ್ಞಾನಿಕ ವಿಧಾನ. ಈ ಕಾರಣದಿಂದ ಖಗೋಳ ವಿಜ್ಞಾನವನ್ನು ವಿಜ್ಞಾನಗಳ ಮಾತೆ ಎನ್ನುವುದುಂಟು.

### ಫಲಜ್ಯೋತಿಷದ ಉಗಮ

ಮಾನವಮತಿಯಲ್ಲಿ ಎರಡು ಪ್ರಧಾನ ಧಾರೆಗಳಿವೆ : ವೈಚಾರಿಕತೆ (rationalism), ಅಂಧಶ್ರದ್ಧೆ (superstition). ವಿಜ್ಞಾನದ ತಳಹದಿ ಮತ್ತು ಉಸಿರು ವೈಚಾರಿಕತೆ. ಅರ್ಥಶೂನ್ಯ ವಿಧಿನಿಷೇಧಗಳು ಮತ್ತು ಕುರುಡು ಆಚರಣೆಗಳು ಅಂಧಶ್ರದ್ಧೆಯ ದುಷ್ಫಲಗಳು. ವೈಚಾರಿಕತೆಯ ಪ್ರಥಮ ಪಕ್ವಫಲ ಖಗೋಳವಿಜ್ಞಾನ. ಈ ಹಿಂದೆ ಹೇಳಿದಂತೆ ಇದು ಎಲ್ಲ ವಿಜ್ಞಾನಗಳ ತಾಯಿ. ಅಂಧಶ್ರದ್ಧೆಯ ದುಷ್ಪ ವಿಷಫಲ ಫಲಜ್ಯೋತಿಷ (astrology). ಸೂಕ್ಷ್ಮವಾಗಿ ಹೇಳುವುದಾದರೆ ಯಾವುದೇ ವಿದ್ಯಮಾನವನ್ನು (phenomenon) ಕಾರ್ಯಕಾರಣ ಪಾತಳಿಯಲ್ಲಿ ವಿವರಿಸುವುದು ವಿಜ್ಞಾನ; ಸ್ವಕಪೋಲಕಲ್ಪಿತವಾಗಿ ನಿರ್ಣಯಿಸುವುದು ಅವಿಜ್ಞಾನ, ಇದು ಫಲಜ್ಯೋತಿಷದ ಮೂಲ.

ಹೆಚ್ಚಿನ ವಿವರಣೆ ಬೇಕಾದವರು **'ಹೊಸತು'** ಮಾರ್ಚ್ ೨೦೦೧ರ ಸಂಚಿಕೆಯಲ್ಲಿ ಪ್ರಕಟವಾಗಿರುವ ''ವಿಜ್ಞಾನದ ವಿದ್ಯಾರ್ಥಿ ದೃಷ್ಟಿಯಲ್ಲಿ ಸ್ವಾಮಿ ವಿವೇಕಾನಂದರು'' ಮತ್ತು ಜುಲೈ ೨೦೦೧ರಲ್ಲಿಯ 'ಫಲಜ್ಯೋತಿಷವು ವಿಜ್ಞಾನವೇ?' ಲೇಖನಗಳನ್ನು ಓದಬಹುದು.

ಫಲಜ್ಯೋತಿಷವು ಖಗೋಳ ವಿಜ್ಞಾನದಿಂದ ಗಣಿತ ಗಣನೆಗಳನ್ನು ಪಡೆಯುತ್ತದೆ. ಬಳಿಕ, ಜೋಯಿಸ ಇವುಗಳಿಗೆ ಸ್ವೇಚ್ಛೆಯಂತೆ ವ್ಯಾಖ್ಯಾನ ನೀಡಿ ಜನರ ಅಂಧಶ್ರದ್ಧೆಗೆ ತನಿ ಎರೆದು ಸ್ವಂತ ಉದರಂಭರಣೆಗೈಯುತ್ತಾನೆ : ಉದರನಿಮಿತ್ತಂ ಬಹುಕೃತ ವೇಷಂ ಮತ್ತು ಮೋಸಂ! ಮುಂದೆ ಈ ವಾಮತಂತ್ರವೂ ಒಂದು ವಿಜ್ಞಾನ ಪ್ರಕಾರ ಎಂದು ಘೋಷಿಸುತ್ತಾನೆ. ಆದರೆ ಡಿವಿಜಿಯವರು ಧ್ವನಿಪೂರ್ಣವಾಗಿ ನುಡಿದಿರುವಂತೆ -

ಗ್ರಹಗತಿಯ ತಿದ್ದುವನೆ ಜೋಯಿಸನು ಜಾತಕದಿ?
ವಿಹಿತವಾಗಿಹುದದರ ಗತಿ ಸೃಷ್ಟಿವಿಧಿಯಿಂ
ಸಹಿಸಿದಲ್ಲದೆ ಮುಗಿಯದಾವ ದಶೇ ಬಂದೊಡಂ
ಸಹನೆ ವಜ್ರದ ಕವಚ ಮಂಕುತಿಮ್ಮ

### ಕ್ರಿ.ಶ. ೧೬ನೆಯ ಶತಮಾನದಿಂದೀಚೆಗೆ

ಕ್ರಿ. ಶ. ೧೫-೧೬ನೆಯ ಶತಮಾನಗಳವರೆಗಿನ ಸಮಸ್ತ ಖಗೋಳ ಚಿಂತನೆಗಳು ಭೂಕೇಂದ್ರವಾದವನ್ನು ಆಧರಿಸಿದ್ದುವು. ಇಂದಾದರೂ ಮೇಲು ನೋಟಕ್ಕೆ ಭಾಸವಾಗುವುದು ಇದೇ ದೃಶ್ಯವಲ್ಲವೇ? ಆದರೆ ೧೫-೧೬ನೆಯ ಶತಮಾನ ಸಂಧಿಕಾಲದಲ್ಲಿ ''ಸೋರುತಿಹುದು ಮನೆಯಮಾಳಿಗಿ'' ಸ್ಥಿತಿ ತಲೆದೋರಿತು. ವಾಸ್ತವತೆಯ ನೈಜ ಚಿತ್ರಣ ಭೂಕೇಂದ್ರವಾದವಲ್ಲ ಎಂದು ಖಚಿತವಾಗಿ ತಿಳಿದುಬಂದಿತು — ವೀಕ್ಷಣೆ, ಗಣನೆ ಮತ್ತು ಜ್ಞೇಯನಿಷ್ಠ ಚಿಂತನೆಗಳು ಎರಕಗೊಂಡು, ಆಗ ರಂಗ ಪ್ರವೇಶಿಸಿದ್ದೇ

ಸೂರ್ಯಕೇಂದ್ರವಾದ. ಮುಂದೆ ೧೮ನೆಯ ಶತಮಾನದಲ್ಲಿ ಈ ಚಿತ್ರ ಪೂರ್ಣಗೊಂಡಿತು :

ಸೂರ್ಯ ಎಂಬ ನಕ್ಷತ್ರದ ಸುತ್ತ ಬುಧ, ಶುಕ್ರ, ಭೂಮಿ, ಕುಜ, ಗುರು ಮತ್ತು ಶನಿ ಎಂಬ ೬ ಗ್ರಹಗಳು ವಿವಿಧ ದೂರಗಳಲ್ಲಿ ಪರಿಭ್ರಮಿಸುತ್ತವೆ. ಗ್ರಹ ಕಕ್ಷೆಗಳೆಲ್ಲವೂ ದೀರ್ಘವೃತ್ತಗಳು (ellipses). ಸೂರ್ಯನ ಸ್ಥಾನ ಈ ಎಲ್ಲ ದೀರ್ಘವೃತ್ತ ಕಕ್ಷೆಗಳ ಸಾಮಾನ್ಯ ನಾಭಿ (common focus) — ಕೇಂದ್ರ ಅಲ್ಲ. ಇದರ ಕಾರಣವೂ ತಿಳಿಯಿತು: ಸೌರ ಗುರುತ್ವಾಕರ್ಷಣ ಬಲ. ಚಂದ್ರ ? ಇದು ಭೂಮಿಯ ಉಪಗ್ರಹ - ಗ್ರಹವಲ್ಲ, ಸೂರ್ಯ ? ಇದು ನಕ್ಷತ್ರ — ಗ್ರಹವಲ್ಲ ರಾಹು, ಕೇತು ? ಭೂಮಿಯಿಂದ ಕಾಣುವಂತೆ ಚಾಂದ್ರಕಕ್ಷೆಯು ಸೌರ ಕಕ್ಷೆಯನ್ನು (ಕ್ರಾಂತಿವೃತ್ತ ecliptic) ಛೇದಿಸುವ ಬಿಂದುಗಳು. ಇಲ್ಲೆಲ್ಲ ಅಗಾಧ ನಿಸರ್ಗ ಅದರದೇ ಸೃಷ್ಟಿಯಾಗಿರುವ ಮಾನವನ ಅಲ್ಪಮತಿಯನ್ನು ಸಾಮೂಹಿಕ ವಿಭ್ರಮೆ ದಿಗ್ಭ್ರಮೆಗಳಿಗೆ ಒಳಪಡಿಸಿದೆಯೋ ಎಂಬ ಪರಿಸ್ಥಿತಿ. ದ್ವಾದಶ ರಾಶಿಗಳಿಗೆ (ಮೇಷದಿಂದ ಮೀನದವರೆಗಿನವು) ಭೌತ ಅಸ್ತಿತ್ವವಿಲ್ಲ ಎಂಬ ಅಂಶ ಸ್ಪಷ್ಟವಾಯಿತು.

ಅಲ್ಲಿಗೆ ''ನವಗ್ರಹ ಪರಿಕಲ್ಪನೆ ಅಂದು'' ಪೂರ್ಣ ನಿರ್ನಾಮವಾಯಿತು. ಒಂದಿಗೇ ಫಲಜ್ಯೋತಿಷವೂ ನಿಶ್ಶೇಶವಾಗಬೇಕಾಗಿತ್ತು. ಹಾಗಾಗಲಿಲ್ಲ. ಇವೆರಡು ಕೂಡ ಆಧುನಿಕ ವಿಜ್ಞಾನ ತಂತ್ರ ವಿದ್ಯೆಗಳ ಸಮಸ್ತ ಸೌಕರ್ಯಗಳನ್ನೂ ಸಮೃದ್ಧವಾಗಿ ಭೋಗಿಸುತ್ತ ತಮ್ಮ ಕಬಂಧ ಬಾಹುಗಳನ್ನು ಇನ್ನಷ್ಟು ಆಳವಾಗಿಯೂ ವ್ಯಾಪಕವಾಗಿಯೂ ಚಾಚುತ್ತಿವೆ. ಅಂಧಶ್ರದ್ಧೆಯ ಕ್ರಮವೇ ಹಾಗೆ.

ವಾಸ್ತವದ ನೈಜತೆಗೆ ಕುರುಡಾದ ಮೂರ್ಖರಿಗೆ
ಉತ್ತರಕುಮಾರಗೋತ್ರೋದ್ಭವಕನಸಿಗರಿಗೆ
ಸತ್ಯವನ್ನೆದುರಿಸುವ ಕೆಚ್ಚಿರದ ಹೇಡಿಗಳಿ-
ಗುತ್ತಮ ಶ್ರೀರಕ್ಷೆ ಜಾತಕವೂ ಅತ್ರಿಸೂನು

**ನವಗ್ರಹ ಪರಿಕಲ್ಪನೆ ಇಂದು**

ಸೌರವ್ಯೂಹದ ಗೋಚರಗ್ರಹಗಳ (ಇವು ೬) ಆಚೆಗೆ ಇನ್ನು ೩ ಗ್ರಹಗಳನ್ನು ನವವೀಕ್ಷಣ ತಂತ್ರ ಆಧರಿಸಿ ಆವಿಷ್ಕರಿಸಲಾಯಿತು: ಯುರೇನಸ್ (೧೭೮೧), ನೆಪ್ಚೂನ್ (೧೮೪೬) ಮತ್ತು ಪ್ಲೂಟೋ (೧೯೩೦). ಇನ್ನೂ ಇವೆಯೇ ? ಶೋಧನೆ ನಡೆದಿದೆ. ಎರೆಕಚ್ಚಿಲ್ಲ ಮೀನು (೨೦೦೨).

ಆದ್ದರಿಂದ ಯಜು ನವಗ್ರಹಗಳಿವು (ಸೂರ್ಯನಿಂದ ಆರೋಹೀ ದೂರಾನುಸಾರ) : ಬುಧ, ಶುಕ್ರ, ಭೂಮಿ, ಕುಜ, ಗುರು, ಶನಿ, ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೋ. ಈ ನಿರ್ಜೀವ ಅಗಾಧ ಅತಿದೂರದ ಗ್ರಹಗಳಿಂದ ವ್ಯಕ್ತಿ, ಸಮಾಜ ಅಥವಾ ರಾಷ್ಟ್ರಗಳ ಮೇಲೆ ಏನೂ ಪ್ರಭಾವವಿಲ್ಲ. ವ್ಯಕ್ತಿ ಭವಿಷ್ಯ ಇವುಗಳಲ್ಲಿ ನಿಹಿತವಾಗಿದೆ ಎಂಬುದು ಅಪ್ಪಟ ಸುಳ್ಳು ಮತ್ತು ಮೋಸ.

ಇಂತಿದ್ದರೂ ನವಗ್ರಹಸ್ತುತಿ, ಹರಕೆ, ಹೋಮ ಎಲ್ಲ ನಡೆದೇ ಇವೆಯಲ್ಲ? ಅಂಧಶ್ರದ್ಧೆಯ ವಿಕರಾಳ ಅವತಾರಗಳಿವು. ವೇದಪಾರಂಗತ ವಿಜ್ಞಾನ ಪ್ರಾಧ್ಯಾಪಕ ಆರ್. ಕೆ. ಶ್ರೀಕಂಠಕುಮಾರಸ್ವಾಮಿಯವರು ''ವೈದಿಕ ಜ್ಯೋತಿಷ'' ಲೇಖನದಲ್ಲಿ ಬರೆದಿದ್ದಾರೆ:

''ನಾವು ನವಗ್ರಹಗಳಿಗೆಂದು ಹೇಳುವ ಮಂತ್ರಗಳು ಪರಮ ವಿಪರ್ಯಾಸ ! ಎಲ್ಲಕ್ಕೂ 'ವೇದ' ಅಥವಾ 'ವೈದಿಕ' ಪದ ಜೋಡಣೆಯಿಂದ ಪಾವಿತ್ರ್ಯ ಸಿದ್ಧಿಸುವುದು ಎಂಬುದೊಂದು ಮೂರ್ಖ ನಂಬಿಕೆ. ಇದಕ್ಕೆ ನಿದರ್ಶನವಾಗಿ ನವಗ್ರಹಗಳನ್ನು ಕುರಿತ ಮಂತ್ರಗಳು. ಇವು ವೇದೋಕ್ತವೆಂಬ ಹಂಬಲ ಸಾವಿರಾರು ವರ್ಷಗಳ ಹಿಂದೆಯೇ ಮೂಡಿದೆ. ಇದು ಭ್ರಾಂತಿ. ವೇದಗಳಲ್ಲಿ ಗ್ರಹಗಳ ಉಲ್ಲೇಖವೇ ಇಲ್ಲ! ಅಂದಮೇಲೆ ಅವನ್ನ ಕುರಿತ ಸ್ತೋತ್ರ ಮಂತ್ರಗಳೆಲ್ಲಿಂದ ಬರಬೇಕು ?''

ಆದ್ದರಿಂದ ನಮಗಿರುವ ಮಾರ್ಗ ಒಂದೇ: ಜಡ ಕಾಯಗಳಿಗೆ ದೈವತ್ವ ಆರೋಪಣೆ ಮಾಡದಿರುವುದು, ಅವುಗಳಿಗೆ ಹೆದರದಿರುವುದು, ಮತ್ತು ಅವನ್ನು ವೈಜ್ಞಾನಿಕವಾಗಿ ಅನ್ವೇಷಿಸಿ ವಿಶ್ಲೇಷಿಸಿ ನಮ್ಮ ಅರಿವನ್ನು ಹೆಚ್ಚಿಸಿಕೊಳ್ಳುವುದು. ''ನಿನಗೆ ನೀನೇ ಗೆಳೆಯಾ ! ನಿನಗೆ ನೀನೇ ! ಅವರಿವರ ನಂಬುಗೆಯ ಮಳಲ ರಾಶಿಯ ಮೇಲೆ ಕಟ್ಟದಿರು ಮನೆಯಾ !'' (ಗೋಪಾಲಕೃಷ್ಣ ಅಡಿಗ)

**ಜಿ. ಟಿ. ನಾರಾಯಣರಾವ್**
೮, 'ಅತ್ರಿ', ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ
ಮೈಸೂರು-೫೭೦ ೦೦೯

## ಕರುಳು ಬಳ್ಳಿಯ ಪ್ರೀತಿ

೧

ಆರು ತಿಂಗಳ
ಮುದ್ದು ಮಗು
ಜ್ವರದಿಂದ ಒದ್ದಾಡುತ್ತಿದ್ದಾಗ
ನನ್ನ ಜನಿವಾರವಾಗಲಿ
ಗೆಳೆಯನ ಶಿವದಾರವಾಗಲಿ
ಏನೂ ಮಾಡಲಿಲ್ಲ!

೨

ಹಣೆಗೆ - ಗಲ್ಲಕೆ
ಕಪ್ಪು ಚುಕ್ಕೆ ಇಡೆಂದರು
ಗಾಳಿಯ ಕಾಡಾಟ
ಎಂದುಸುರಿ
ಕೆರಿಯಮ್ಮನ ಕಾಟ
ಎಂದು ಗೊಣಗಿ
ದೇವರಿಗೆ ಮುಡಿಪು
ಕೊಡಲು ಹೇಳಿದರು



೩

ಹೆತ್ತವಳು
ನೂರು ಹೇಳಿಕೆಗಳ ಕೇಳಿ
ಚಡಪಡಿಸಹತ್ತಿದಾಗ
ಅರೆಬರೆ ಜ್ಞಾನದ
ವೈದ್ಯಮಹಾಶಯನೊಬ್ಬ
ಔಷಧಿಯ ಮೇಲೆ ಔಷಧಿ
ಹಣೆಗೆ - ಮೈಗೆ ನೀರಪಟ್ಟಿಯ
ಸಲಹೆ ಕೊಟ್ಟು
ಉದ್ದನೆಯ ಚೀಟಿ ಕೈಗಿತ್ತು
'ವಸೀಲಿ'ಮಾಡಿ ನಡೆದ

೪

ಎಳೆಯ ಮಗುವಿನ
ನರಳುವಿಕೆ
ಹೊಟ್ಟೆಯಲ್ಲಿ
ಕರುಳ ಚಡಪಡಿಕೆ
ಮೊಲೆ ಹಿಡಿಯದ ಮಗು
ಹನಿ ಹಾಲೂ ಕುಡಿಯದಾದಾಗ
ಎದೆಯೊಳಗೆ
ಚರಚರನೆ ಚಾಕು
ಹರಿದಾಡಿದ ಅನುಭವ

೫

ಕಣ್ಣೊಳಗಿನ
ನಿದ್ದೆ ಹಾರಿಸಿ
ಮನದೊಳಗೆ
ನೂರು ಅನುಮಾನಗಳ
ಹುಟ್ಟುಹಾಕಿದ ಮಗು
ಒಂದು ತಾಸು ಮುಲುಗಿ
ಮತ್ತೊಂದು ತಾಸಿಗೆ
ಕಣ್ಣುಬಿಟ್ಟು
ತುಸು ನಕ್ಕು
ಚಣ ಸುಖ ನೀಡಿದರೂ
ಸ್ವರ್ಗ ಕಂಡ ಖುಷಿ !

೬

ನಿಜ ಹೇಳಬೇಕೆಂದರೆ
ಆ ಮಗುವಿಗೆ
ಬೇಕಿದ್ದದ್ದು
ತಾಯ ಕರುಳ ಬಳ್ಳಿಯ ಪ್ರೀತಿ :
ಜೊತೆಗೆ
ವೈದ್ಯನೊಳಗಿನ ಮನುಷ್ಯ !

**ಮಂಡಲಗಿರಿ ಪ್ರಸನ್ನ**
ಎಸ್.ಟಿ.ಆರ್.ಟಿ-೧೯/೬, ೧೮ನೇ
ಅಡ್ಡರಸ್ತೆ, ಅಲ್ಟಾಂ ಕಾಲನಿ, ಶಹಾಬಾದ
- ೫೮೫ ೨೨೯ (ಗುಲ್ಬರ್ಗ ಜಿಲ್ಲೆ)



**ಜಾಗತೀಕರಣ**

*ಮ. ಮಹೇಶನ್*

**ಪುಟ : ೨೦೮** **ಬೆಲೆ : ರೂ. ೯೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

*ವಿಶ್ವವಾಣಿಜ್ಯ ಸಂಘಟನೆ, ಅಂತರರಾಷ್ಟ್ರೀಯ ಹಣಕಾಸು ನಿಧಿ, ವಿಶ್ವದ ಶ್ರೀಮಂತ ಬಂಡವಾಳ ಹೂಡಿಕೆದಾರರು ಸೇರಿ ಜಾಗತಿಕ ಅರ್ಥ ವ್ಯವಸ್ಥೆಯನ್ನು ಸುಗಮಗೊಳಿಸುತ್ತೇವೆಂಬ ಹುಸಿ ಆಶ್ವಾಸನೆಯೊಂದಿಗೆ ಇತ್ತೀಚೆಗೆ ಪ್ರಾರಂಭಿಸಿದ ಒಂದು ಪ್ರಕ್ರಿಯೆ ಜಾಗತೀಕರಣ. ಬಹುರಾಷ್ಟ್ರೀಯ ಕಂಪೆನಿಗಳು ಅಭಿವೃದ್ಧಿಶೀಲ ಬಡರಾಷ್ಟ್ರಗಳ ಮಾರುಕಟ್ಟೆಗೆ ಲಗ್ಗೆ ಹಾಕಿದ್ದು ಇದರ ಪರಿಣಾಮದ ಬಗೆಗೆ ಶ್ರೀ ಮಹೇಶನ್ ತಮ್ಮ ಅಪಾರ ಬುದ್ಧಿಮತ್ತೆಯಿಂದ ವಿಶ್ಲೇಷಿಸಿದ್ದಾರೆ.*

**ವೈಜ್ಞಾನಿಕತೆ**



*ಪ್ರೊ|| ಜಿ. ಆರ್. ಲಕ್ಷ್ಮಣರಾವ್*

**ಪುಟ : ೬೪** **ಬೆಲೆ : ರೂ. ೨೮**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-೫೬೦೦೦೧

*ಭೌತಿಕ ನಿಯಮಗಳಿಗನುಸಾರವಾಗಿ ಪ್ರಯೋಗಿಸಲ್ಪಟ್ಟು ಯಶಸ್ವಿಯಾಗಿರುವ ಸಿದ್ಧಾಂತವನ್ನು ಒಪ್ಪಿಕೊಳ್ಳುವುದೇ ವಿಜ್ಞಾನದ ಪರಿಭಾಷೆಯಾಗಿದ್ದು ಹೇಳಿಕೆಯ ಮಾತುಗಳೊಂದೂ ಇಲ್ಲಿ ಗಣನೆಗೆ ಬರಲಾರವು. ಸಂಪೂರ್ಣವಾಗಿ ವೈಜ್ಞಾನಿಕ ವಿಷಯಗಳಿಗೆ ನಿಷ್ಠನಾಗಿ ವಿಜ್ಞಾನಿ ತಳಿಯಬೇಕಾದ ವೈಜ್ಞಾನಿಕ ಒಲವು ಇರುವಂಥ ಒಂದು ಮನೋಪ್ರವೃತ್ತಿಯನ್ನು ಇಲ್ಲಿ ಪ್ರೊ|| ಜಿ. ಆರ್. ಲಕ್ಷ್ಮಣ ರಾವ್ ಸೂಕ್ಷ್ಮವಾಗಿ ವಿವರಿಸಿದ್ದಾರೆ.*

**ಪ್ರಾಚೀನ ಭಾರತದಲ್ಲಿ ದಾರ್ಶನಿಕ ಸಂಘರ್ಷ ಮತ್ತು ಅದರ ಸಾಮಾಜಿಕ ಮಹತ್ವ**



*ಎಸ್. ಜಿ. ಸರ್ದೇಸಾಯಿ*

**ಪುಟ : ೭೨** **ಬೆಲೆ : ರೂ. ೩೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

*ಪ್ರಾಚೀನ ಭಾರತದ ಹೆಚ್ಚಿನ ತತ್ವಜ್ಞಾನಿಗಳೆಲ್ಲ ಭೌತಿಕ ವಾದಕ್ಕೆ ಬದ್ಧರೂ ಭಾವನಾವಾದದ ವಿರೋಧಿಗಳೂ ಆಗಿದ್ದರೂ ಸಹ ವೇದಾಂತವೇ ಏಕೆ ಪ್ರಬಲ ತತ್ವಶಾಸ್ತ್ರವಾಗಿ ಉಳಿದುಕೊಂಡಿತೆಂಬ ಪ್ರಶ್ನೆಗೆ ಸಹಜವಾಗಿ ವೈದಿಕ ಪುರೋಹಿತಶಾಹಿಯತ್ತ ಗಮನ ಹರಿಯುತ್ತದೆ. ಭಾರತದಲ್ಲಿ ತತ್ವಶಾಸ್ತ್ರವನ್ನು ಧಾರ್ಮಿಕ ನಂಬುಗೆಗಳಿಂದ ಬೇರ್ಪಡಿಸಿ ವೈಚಾರಿಕ ತಿಳಿವನ್ನು ಮೂಡಿಸಲು ಬಹುವಾಗಿ ಹೆಣಗಿದ್ದು ಲೋಕಾಯತರ ಬಹು ದೊಡ್ಡ ಸಾಧನೆ. ಇತ್ತಂಡವಾದ - ಪಂಥೀಯ ಗೊಂದಲಗಳಿಂದ ಘರ್ಷಣೆಗಳೇರ್ಪಡುತ್ತಿದ್ದುದನ್ನು ವಿದ್ವಾಂಸ ಸರ್ದೇಸಾಯಿ ವಿವರಿಸಿದ್ದಾರೆ.*



**ಜಿಜ್ಞಾಸೆ** (ಚಿಂತನೆಗಳು)

*ಎಸ್. ಹಯವದನ ಉಪಾಧ್ಯ*

**ಪುಟ : ೯೮** **ಬೆಲೆ : ರೂ. ೩೬**

ಸು. ಹಾ. ಸಂ., 'ವಾಗ್ದೇವಿ', ಹಯಗ್ರೀವನಗರ ಉಡುಪಿ - ೫೭೬೧೦೨

*ಅತಿಯಾದ ಧಾರ್ಮಿಕ ಚಿಂತನೆ ಹಾಗೂ ಅತಿಯಾದ ಲೌಕಿಕ ಅವಲಂಬನೆ ಈ ಎರಡನ್ನೂ ಬದಿಗಿರಿಸಿ ಎರಡು ಅತಿಗಳ ನಡುವೆ ನಿಂತು ನಡೆಸಿದ ಉತ್ಕೃಷ್ಟ ಚಿಂತನೆಗಳ ಫಲವೇ ಈ ವಿವಿಧ ಲೇಖನಗಳು. ಪಾಶ್ಚಾತ್ಯ-ಪೌರ್ವಾತ್ಯ ಸಾಹಿತ್ಯ ಪುರಾಣೇತಿಹಾಸಗಳನ್ನು ಒಂದು ಹದದಲ್ಲಿ ಅರ್ಥಮಾಡಿಕೊಳ್ಳುವ ಹಾಗೂ ಎಲ್ಲ ಕಡೆಯೂ ಚಿಂತನೆ-ವಿಚಾರಧಾರೆಗಳನ್ನು ತೂಗಿ ನೋಡಿ ಸ್ವೀಕರಿಸುತ್ತಿರುವ ಲೇಖಕರು ತಮಗಾಗಿರುವ ವೈಚಾರಿಕ ತಾತ್ವಿಕ ಗೊಂದಲಗಳನ್ನು ಈ ಪುಸ್ತಕದಲ್ಲಿ ವಿವರಿಸಿದ್ದಾರೆ.*

**ಎತ್ತಣಿಂದೆತ್ತ.....** (ಕಥಾಸಂಕಲನ)



*ಕು. ಗೋ.*

**ಪುಟ : ೨೦೮** **ಬೆಲೆ : ರೂ. ೭೫**

**ಪ್ರೇಮಸಾಯಿ ಪ್ರಕಾಶನ,** ೪ನೇ ಮೈನ್, ವಿಜಯನಗರ, ಬೆಂಗಳೂರು - ೫೬೦ ೦೪೦

*ಈ ಕತೆಗಳ ಹಿಂದೆ ಜೀವನಾನುಭವದ ದಟ್ಟ ನೆರಳು ಹಬ್ಬಿಕೊಂಡಿದೆ. ಯುವಶಕ್ತಿಯ ಉತ್ಸಾಹ, ಆದಮ್ಯ ಜೀವನಾಸಕ್ತಿಗಳನ್ನು ಸಮಯೋಚಿತವಾಗಿ ಬಳಸದೆ ಕಾಣದ ಕೈಯೊಂದು ಅಪಹರಿಸುತ್ತಿರುವ ಬಗೆಗೆ ಜೈ ಶಕ್ತಿಮಾನ್ ಕತೆ ಕಣ್ಣು ತೆರೆಸುವಂಥದು. ಕೆಸರಾಗಿ ಕಲಕಿ ಹೋಗಿರುವ ಸರೋವರವನ್ನು ತಿಳಿಯಾಗುವವರೆಗೂ ಕಾದು ತಿಳಿನೀರನ್ನು ಆಯ್ದುಕೊಳ್ಳುವ ಕು. ಗೋ. ಕತೆಗಳಲ್ಲಿ ಉತ್ತಮವಾದುದನ್ನು ಸ್ವೀಕರಿಸಲು ಮಾರ್ಗದರ್ಶನವಿದೆ. ಕಥಾನಾಯಕರು ವಿವಿಧ ಕಾಲದ ತತ್ವಸಿದ್ಧಾಂತಗಳಿಂದ ಪ್ರಭಾವಿತರಾಗಿ ವಿಭಿನ್ನವಾಗಿ ನಿಲ್ಲುವಂಥವರು.*



**ಬುದ್ಧನ ಧಮ್ಮ ಮತ್ತು ಇತರ ಧರ್ಮಗಳ ಒಂದು ವಿವೇಚನೆ**

*ಡಾ|| ಆರ್. ಓಬಳೇಶಘಟ್ಟಿ*

**ಪುಟ : ೧೮೪** **ಬೆಲೆ : ರೂ. ೭೦**

**ಶಿವಗಂಗಾ ಪ್ರಕಾಶನ,** ತೋರಣಘಟ್ಟ, ಸಕಲೇಶಪುರ

*ಶ್ರೇಷ್ಠ ಧರ್ಮಗಳೆಂದು ಹೇಳಿಕೊಳ್ಳುವ ಒಂದಕ್ಕೊಂದು ಸಾಮರಸ್ಯವಿಲ್ಲದ ಪ್ರಧಾನ ಐದು ಧರ್ಮಗಳನ್ನು ಪ್ರಸ್ತಾಪಿಸುತ್ತ ವೈಚಾರಿಕ-ಮಾನವೀಯ ವಿಮರ್ಶೆಗೆ ಒಳಪಡಿಸಿದ ನಿರ್ಭಿಡೆಯ ವಾದಸರಣಿ ಇಲ್ಲಿದೆ. ಪ್ರಜ್ಞಾವಂತ ಮಾನವ ದುರಾಶೆಯನ್ನು ಹತ್ತಿಕ್ಕಿ ಜಗತ್ತಿನ ಎಲ್ಲ ಜೀವಿಗಳ ಒಳಿತಿಗೆ ಪ್ರಯತ್ನಿಸುವ ಒಂದು ಧರ್ಮ ಎದ್ದಲ್ಲಿ ಅದು ಸ್ವೀಕಾರಾರ್ಹವೆಂಬುದು ಇಲ್ಲಿನ ಧ್ವನಿ. ಹಿಂದೂಧರ್ಮದ ಅತಿರೇಕಗಳ ನಡುವೆಯೂ ನಮ್ಮಲ್ಲಿ ಬುದ್ಧ-ಬಸವಣ್ಣ-ಅಂಬೇಡ್ಕರ್ ಅಂಥವರು ಜನರಿಗಾಗಿ ದುಡಿದ ಕ್ರಾಂತಿಕಾರರು ಗೌರವಾರ್ಹರು.*



**ಮೆಕ್‌ಬೆತ್** (ಷೇಕ್ಸ್‌ಪಿಯರ್‌ನ ನಾಟಕ)

*ಭಗವಾನ್*

**ಪುಟ : ೧೨೭** **ಬೆಲೆ : ರೂ. ೪೦**

**ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ,** ಗೋಕುಲಂ ಮೂರನೆ ಹಂತ, ಮೈಸೂರು - ೫೭೦ ೦೦೨

*ಅಪರೂಪದ ಚಿಂತಕ-ವಿಮರ್ಶಕರಾದ ಶ್ರೀ ಭಗವಾನ್ ಉತ್ತಮ ಅನುವಾದಕರೂ ಹೌದೆಂದು ಇಲ್ಲಿ ಧಾರಾಳವಾಗಿ ಹೇಳಬಹುದು. ಷೇಕ್ಸ್‌ಪಿಯರನ ಇಂಗ್ಲಿಷ್ ನಾಟಕಗಳನ್ನು ಕನ್ನಡದಲ್ಲಿ ಅನುವಾದಿಸಿದ್ದು ಬಹಳಷ್ಟು ಇದ್ದರೂ ಸಹ ಈ ಅನುವಾದಕ್ಕೆ ಹೆಚ್ಚಿನ ಮೆರುಗನ್ನು ಲೇಖಕರು ನೀಡಿದ್ದಾರೆ. ಪ್ರಸ್ತುತ ನಾಟಕ ರಾಜದಂಡ-ರಾಜವಂಶಗಳಿಂದ ಗರ್ವ ತಳೆದು ಕಣ್ಣಿದ್ದೂ ಕುರುಡರಾದ ರಾಜರ ಹಾಗೂ ಶ್ರೀಮಂತ ವರ್ಗಗಳಿಂದ ಜನರ ಪಾಡು ಹೇಗೆ ನಾಯಿಪಾಡಾಗುವುದೆಂದು ಚಿತ್ರಿಸಲಾಗಿದೆ.*

**ಗಾಂಪರ ಮಠದಲ್ಲಿ ಕಳ್ಳತನ**



*ವಿ. ಎಸ್. ಎಸ್. ಶಾಸ್ತ್ರಿ*

**ಪುಟ : ೬೭** **ಬೆಲೆ : ರೂ. ೩೦**

**ಸುಭಾಷ್ ಪಬ್ಲಿಷಿಂಗ್ ಹೌಸ್** , ನಂ. ೧೧೬, ೫ನೇ ಮೇನ್, ೬ನೇ ಕ್ರಾಸ್, ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

*ಕಥೆ ಹೇಳುತ್ತಲೇ ಗಣಿತ-ವಿಜ್ಞಾನವನ್ನು ಮಕ್ಕಳಿಗೆ ಸಹ್ಯವಾಗುವಂತೆ ಅವರಲ್ಲಿ ಕುತೂಹಲ ಉಂಟಾಗುವಂತೆ ವಿವರಿಸುವ ವಿಸ್ಮಯ ವಿಜ್ಞಾನ ಮಾಲಿಕೆಯ ಈ ಪುಸ್ತಕ ಮಕ್ಕಳಿಗೆ ಓದುವ ಹವ್ಯಾಸವನ್ನು ಬೆಳೆಸುವತ್ತ ಪ್ರಯತ್ನಿಸಿದೆ. ಒತ್ತಾಯದ ಓದನ್ನು ಹೇರುತ್ತ ಅವರ ಆಸಕ್ತಿ ಕಡಿಮೆಗೊಳಿಸುವ ಇಂದಿನ ದಿನಗಳಲ್ಲಿ ಮನರಂಜನೆ ಮೂಲಕ ಪಾಠ ಕಲಿಯಲು ನೆರವಾಗಬಲ್ಲುದು. ಮಕ್ಕಳ ಅಮೂಲ್ಯ ಸಮಯವನ್ನು ಒಂದಿಷ್ಟೂ ಹಾಳು ಮಾಡದೆ ಕಲಿಸುವ ಉತ್ತಮ ಶೈಲಿಯ ನಿರೂಪಣೆ.*

**– ಇಂದಿರಾ ಕುಮಾರಿ**



**ಮಾ**ನವ ಅನುಭವದ ಮಟ್ಟದಲ್ಲಿ ಲೋಕದ ಕತೆಯನ್ನೇ ಸಮರ್ಥವಾಗಿ ಹೇಳುತ್ತ, ಪಾಕಿಸ್ತಾನಿ ಆಧುನಿಕ ಸ್ತ್ರೀ ಸಂವೇದನೆಯ ದಟ್ಟ ಅನುಭವ ನೀಡುವ ಕೃತಿ 'ಮೀಟ್‌ಲೆಸ್ ಡೇಸ್': ಲೇಖಕಿ – ಸಾರಾ ಸುಲೇರಿ. ಅದರ ಮೊದಲ ಅಧ್ಯಾಯ 'Excellent Things in Women' ೧೯೮೭ರ ಪುಷ್‌ಕಾರ್ಟ್ ಪುರಸ್ಕಾರವನ್ನು ಗಳಿಸಿತು. ೨೦ ಪುಟಗಳ ಹರವಿನಲ್ಲಿ ಈ ಅಧ್ಯಾಯ ಕಾಣಿಸುವ ಸತ್ಯಗಳು ಮತ್ತು ದಾಟಿಸುವ ಗಾಢ ಅನುಭವ ಮರೆಯಲಾಗದಂಥವು.

ಪಾಕಿಸ್ತಾನಿ ಲೋಕದ, ಅದರಲ್ಲೂ ಪಾಕಿಸ್ತಾನಿ ಸ್ತ್ರೀ ಲೋಕದ ಅಧಿಕೃತ ದಾಖಲೆಯಂತೆ ಸಾಗುತ್ತದೆ ಸಾರಾ ಸುಲೇರಿಯ ಕಥನ. ಪಾಕಿಸ್ತಾನವನ್ನು ಬಿಟ್ಟು ಹೊರಡುವುದೆಂದರೆ ಹೆಣ್ಣುಗಳ ಸಂಘವನ್ನು ತೊರೆದಂತೆಯೇ ಸರಿ ಎಂದು ಪ್ರಾರಂಭವಾಗುತ್ತದೆ ಮೊದಲ ಅಧ್ಯಾಯ. ಗಟ್ಟಿಯಾದ ಭಾಷೆಯಲ್ಲಿ, ಹೆಣ್ಣೊಬ್ಬಳ ವೈಯಕ್ತಿಕ ನೆಲೆಯಿಂದ, ಪಾಕಿಸ್ತಾನಿ ಬದುಕಿನ ಆಂತರಿಕತೆಯ ಸಾಂದ್ರ ಅನುಭವವನ್ನು ನೀಡುತ್ತದೆ ಈ ಕೃತಿ. ಪಾಕಿಸ್ತಾನವನ್ನು ಪ್ರಸ್ತಾಪಿಸುತ್ತ 'a place where the concept of woman was not really part of an available vocabulary' ಎನ್ನುವ ಸಾರಾ, ಅದಕ್ಕೆ ಕೊಡುವ ವಿವರಣೆ, ನಾವು ಬದುಕಿನ ಗಡಿಬಿಡಿಯಲ್ಲಿ ಮುಳುಗಿ ಹೋಗಿದ್ದೆವು, ಸಹೋದರಿ ಅಥವಾ ಹೆಣ್ಣು ಮಗು ಅಥವಾ ಹೆಂಡತಿ ಅಥವಾ ತಾಯಿ ಅಥವಾ ಸೇವಕಿ, ಇಂಥ ಪಾತ್ರಗಳ ಸ್ವರೂಪವೇನು ಎಂಬುದನ್ನು ನಿಖರವಾದ ಸಂಧಾನ ನಡೆಸಿ ಪರಿಹರಿಸಿಕೊಳ್ಳುವುದರಲ್ಲಿ ತಲ್ಲೀನರಾಗಿದ್ದೆವು ಎಂಬುದು. ಒಮ್ಮೊಮ್ಮೆ ಸಹಜವಾಗಿ ನಾವು ಹೆಣ್ಣುಗಳೆಂದು, ನಮ್ಮನ್ನು ನಾವು ಪರಿಗಣಿಸಿದ್ದುಂಟು. ಆದರೆ ಬಹುಶಃ ಹೆಣ್ಣು ದೇಹ ಪಡೆದವರೆಂದು ಕಾಟಾಚಾರಕ್ಕಾಗಿ ಮಾತ್ರ ಅಥವಾ ಹೆಣ್ತನ ಎಂಬುದು ನಮ್ಮ ಬಟ್ಟೆಬರೆಗಳ ನಡುವೆ ಎಲ್ಲೋ ಅಡಗಿಕೊಂಡಿರುವ ವಾಸ್ತವಿಕ ಕುಚೋದ್ಯವೆಂದು ಅರೆ-ಗಂಭೀರ ಕೀಟಲೆಯ ದನಿಯಲ್ಲಿ ಸಾಗುವ ಸಾರಾಳ ಸ್ವ-ವಿವರಣೆ, ಅಧಿಕೃತ ಅನುಭವವೊಂದನ್ನು ನಮ್ಮ ಮುಂದಿರಿಸುತ್ತದೆ.

ಪಾಕಿಸ್ತಾನದ ರಾಜಕೀಯ ಬೆಳವಣಿಗೆಗಳು ಜಿಯಾ ಕುಟುಂಬದ ಆಗುಹೋಗುಗಳೊಂದಿಗೆ ತಳಕು ಹಾಕಿಕೊಂಡಿರುವ ರೀತಿ ಮತ್ತು ನಶಿಸಿಹೋಗುತ್ತಿರುವ ಸಂಸ್ಕೃತಿಯೊಂದರ ಪ್ರತೀಕವಾದ ದಾದಿಯ ಒಳನೋಟಗಳು ಪಾಕಿಸ್ತಾನಿ ಅನುಭವ ಜೀವಂತವಾಗಿ ನಮ್ಮ ಮುಂದೆ ಮೈದಳೆಯುವಂತೆ ಮಾಡಿವೆ ಮತ್ತು ಆ ಇಡೀ ಅನುಭವಕ್ಕೆ ಒಂದು ಸಮಗ್ರ ಗುಣವನ್ನು ತಂದುಕೊಟ್ಟಿವೆ. ಕುಟುಂಬದ ಒಳಗಣ ವಿವಿಧ ಸಂಬಂಧಗಳ ವ್ಯಕ್ತ ಸಮೀಕರಣಗಳೂ ಸೇರಿದಂತೆ, ದಾದಿ ಮತ್ತು ಅವಳ ಮಗ ಜಿಯಾನ ಸಂಬಂಧದ ಏರುಪೇರುಗಳು, ಬಿರುಕುಗಳು, ವಿಮುಖತೆ, ಪಾಕಿಸ್ತಾನಿ ಜನ ಮತ್ತು ಅವರ ದೇಶದ ಬದುಕಿನ ನಡುವಣ ಸಂಬಂಧವನ್ನು ನಿರಂತರವಾಗಿ ಧ್ವನಿಸುತ್ತದೆ.

ಸಾರಾ ರಚಿಸಿರುವ ಸ್ತ್ರೀಲೋಕದ ಚಿತ್ರ 'ದಾದಿ' (ಸಾರಾಳ ತಂದೆಯ ತಾಯಿ)ಯನ್ನು ಒಳಗೊಳ್ಳದೆ ಸಂಪೂರ್ಣವಾಗಲು ಸಾಧ್ಯವೇ ಇಲ್ಲ. ದಾದಿಯೇ ಅಲ್ಲಿಯ ಕೇಂದ್ರ. ೨೦ನೇ ಶತಮಾನದ ಕಡೆಯ ಭಾಗದಲ್ಲಿ ಮೀರತ್‌ನಲ್ಲಿ ಜನಿಸಿದ ದಾದಿಯ ಜನನದ ಸ್ಥಳ ಮತ್ತು ಕಾಲ ಎರಡಕ್ಕೂ ರಾಜಕೀಯ ಮಹತ್ವವಿದೆ. ೧೬ ವರ್ಷಕ್ಕೆ ಮದುವೆಯಾಗಿ ೩೦ಕ್ಕೆ ವಿಧವೆಯಾಗಿ, ಆಗಸ್ಟ್ ೧೯೪೭ರಲ್ಲಿ ಇಂಡಿಯಾ ಇಬ್ಭಾಗವಾದಾಗ ಪಾಕಿಸ್ತಾನದ ಪಂಜಾಬಿಗೆ ನಡೆದವಳು, ಇಂಗ್ಲೆಸ್ತಾನ್ ಅಥವಾ ಇಂಗ್ಲೆಂಡಿಗೆ ತೆರಳಿದ್ದ ಮಗನ ಆಗಮನಕ್ಕಾಗಿ ಕಾದವಳು ದಾದಿ. ಸ್ವಾತಂತ್ರ್ಯ ಅವಳಿಗೆ ಏನೂ ತರಲಿಲ್ಲ, ಒಟ್ಟೊಟ್ಟಿಗೆ ವಾಸಿಸುತ್ತಿದ್ದ ಜನರನ್ನು ದೂರಗೊಳಿಸಿದ ಸ್ವಾತಂತ್ರ್ಯವನ್ನು ದಾದಿ ಅಸಮಾಧಾನದಿಂದಲೇ ಬರಮಾಡಿಕೊಂಡಳು, ತನ್ನ 'ಬಿಳಿ' ಸೊಸೆಯನ್ನು ಬರಮಾಡಿಕೊಂಡಂತೆ.




*ಪುಟಗಳು : ೧೮೬ ಬೆಲೆ : ರೂ. ೨೦೦*
*ಪ್ರಕಾಶನ : ಫ್ಲೆಮಿಂಗೊ/ಕಾಲಿನ್ಸ್, ಲಂಡನ್, ೧೯೮೯*

ಬಾಗು ಬೆನ್ನಿನ, ಪುಟ್ಟ ದೇಹದ, ಅವಸರದ ನಡಿಗೆಯ ನಾಟಕೀಯ ವ್ಯಕ್ತಿತ್ವದ, ಸ್ವಗತಗಳ ದಾದಿಗೆ ಆಹಾರ ಮತ್ತು ದೇವರು ಸಮಾನಪ್ರಿಯ. ಊಟದ ಕೋಣೆಯ ಮೇಜು ಎಂಬ ಗದ್ದುಗೆಯೇರಿ ಕುಳಿತು ಸೈತಾನನ ದೂಷಣೆಗೆ ತೊಡಗುತ್ತಿದ್ದ ದಾದಿಯ ವಾಕ್ಝರಿಗೆ ಪರೋಕ್ಷ ಆಹಾರ ವೇಲ್ಸ್ ಮೂಲದ ಬಿಳಿ ಕಾಲುಗಳ ಸೊಸೆ. ತನ್ನ ಮಗನನ್ನು ಇಂಗ್ಲೆಸ್ತಾನದಲ್ಲಿ ದೀರ್ಘಕಾಲ ಉಳಿಸಿಕೊಂಡು ನ್ಯಾಯವಾಗಿ ತನ್ನದಾಗಬೇಕಿದ್ದ ಹೆಣ್ಣನ್ನು ದೂರಮಾಡಿ, ಬಿಳಿ ಕಾಲಿನ ಹೆಂಡತಿಯನ್ನು ತರುವಂಥ ಬುದ್ಧಿ ಕೊಟ್ಟ ಸೈತಾನ, ತನ್ನ ಒಬ್ಬಳೇ ಮಗಳು ಆಯೆಶಾಳನ್ನು ಪ್ರಸವ ಕಾಲದಲ್ಲಿ ಕೊಂಡೊಯ್ದ ಸೈತಾನ, ತನ್ನ ಕಿರಿಯ ಮಗನನ್ನು ದೂರದ ಸ್ವಾಜಿಲೆಂಡ್ ಅಥವಾ ಸ್ವಿಜರ್‌ಲ್ಯಾಂಡಿಗೆ ಕಳಿಸಿದ ಸೈತಾನನಿಗೆ ಹಿಡಿ ಶಾಪದ ಸುರಿಮಳೆ.

ತೋಟದ ಮಾಲಿ ಮತ್ತು ಮಗ ಇಬ್ಬರ ಕಣ್ಣು ತಪ್ಪಿಸಿ ಯಾವುದಾದರೂ ಹೊಸದಾಗಿ ನೆಟ್ಟ ಅಥವಾ ಚಿಗುರು ಬಿಟ್ಟ ರೆಂಬೆ ಮುರಿದುಕೊಂಡು, ಅಲ್ಲೇ ಕುಳಿತು, ಸಿಪ್ಪೆ ಸುಲಿದು, ಊರುಗೋಲು ತಯಾರಿಸಿಕೊಂಡು ಕೊಂಚ ದೂರದಲ್ಲಿದ್ದ ರಸ್ತೆಗಿಳಿಯುತ್ತಿದ್ದಳು ದಾದಿ. ಮಗ ತಂದು ಕೊಟ್ಟಿದ್ದ ಹಲವು ದುಬಾರಿ ಊರುಗೋಲುಗಳನ್ನು ಕಡೆಗಣಿಸಿ, ಬೀದಿಗಿಳಿಯುತ್ತಿದ್ದ ದಾದಿಗೆ ಮಗನ ಅವಮಾನ ಭಾವನೆ, ಕೋಪತಾಪಗಳು ಲೆಖ್ಖಕ್ಕೇ ಇಲ್ಲ. ಬೀದಿಯಲ್ಲಿ ಸಾಗುತ್ತಿದ್ದ ಕಾರುಗಳು, ಜನರನ್ನು ಕೈಬೀಸಿ ನಿಲ್ಲಿಸಿ, ದೇವರನ್ನು ಕುರಿತು ಅವರೊಂದಿಗೆ ಗೊಡ್ಡು ಹರಟೆಯಲ್ಲಿ ಮುಳುಗುವುದು ದಾದಿಯ ಮುಖ್ಯ ಕಾಲಕ್ಷೇಪ. ಆಹಾರ ಪ್ರಿಯೆ ದಾದಿ ಊಟದ ವೇಳೆಯಲ್ಲಿ ನಡೆಸುವ ಮಕ್ಕಳಾಟದಂಥ ದೃಶ್ಯ, ಕಡಿಮೆ ಬೇಕು ಎನ್ನುವ ಮಾತಿನ ಅರ್ಥವೇ ಅದರ ತದ್ವಿರುದ್ಧವಾದಂಥ ಇಡೀ ವಾತಾವರಣ ಅತ್ಯಂತ ಹಾಸ್ಯಮಯವಾಗಿರುತ್ತಲೇ, ವೃದ್ಧೆಯೊಬ್ಬಳ ಸಂಕೋಚ ಆತ್ಮ ಗೌರವವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ಸಾರಾ ಸುಲೇರಿಯ ಭಾಷೆಯ ಯಶಸ್ಸು ಎಂದು ಪರಿಗಣಿಸಬಹುದು.

ಆಹಾರ ಮತ್ತು ದೇವರು, ಈ ಎರಡರ ನಡುವೆ ದಾದಿಗೆ ಯಾವುದು ಹೆಚ್ಚು ಆಳವಾದ ಖುಷಿಯ ಸಂಗತಿ ಎಂದು ಹೊರಟು, ಸಾರಾ ನೀಡುವುದು ಈದ್ ಎಂಬ ಮುಸ್ಲಿಂ ಹಬ್ಬದ ಚಿತ್ರಣ. (ಉಪವಾಸವನ್ನು ಅಂತ್ಯಗೊಳಿಸುವ ಮೊದಲ ಈದ್ ಅಲ್ಲ – ಅಬ್ರಹ್ಯಾಂ ಕತೆಯನ್ನು ವಿಜೃಂಭಿಸುವ ಎರಡನೆಯ ಈದ್ ಎಂಬ ವ್ಯಾಖ್ಯಾನವೂ ಇದೆ.) ಆಡು ಕುರಿಗಳನ್ನು ಮನೆಗೆ ತಂದು, ಸಾಕಿ, ಕೊಬ್ಬಿಸಿ, ಹಬ್ಬದಂದು ಮನೆಯಲ್ಲಿ ಅವುಗಳನ್ನು ಕೊಚ್ಚಿ ರುಚಿಯಾದ ಅಡುಗೆ ಮಾಡುವ ಪದ್ಧತಿಯ ಸವಿವರವಾದ ವರ್ಣನೆಯಿದೆ. ಇದು ಮುಸ್ಲಿಂ ಜನಾಂಗದ ಯಾವುದೇ ಮನೆಯ ಟಿಪಿಕಲ್ ದೃಶ್ಯವಾಗುತ್ತಲೇ, ಪಾಕಿಸ್ತಾನಿ ವಿವರಗಳಿಂದ ಕೂಡಿ, ಥೇಟ್ ಪಾಕಿಸ್ತಾನಿ ಮನೆಯೊಂದರ ದೃಶ್ಯವೂ ಆಗಿದೆ. ಅಷ್ಟೇ ಅಲ್ಲ, ವಿದೇಶಿ ಸೊಸೆಯನ್ನು ಒಳಗೊಂಡ ಲಿಬರಲ್ ಪಾಕಿಸ್ತಾನಿ ಮನೆತನವೊಂದರ ಸದಸ್ಯರು ತಮ್ಮ ಮನೆಯಂಗಳದಲ್ಲಿ ನಡೆಯುವಂಥ ಪ್ರಾಣಿಹತ್ಯೆಗೆ, ಅದೇ ಉದ್ದೇಶಕ್ಕೆಂದು ತಂದಿದ್ದರೂ, ಒಂದು ರೀತಿಯ ಸಾಕು ಪ್ರಾಣಿ ಹತ್ಯೆಗೆ, ಪ್ರತಿಕ್ರಿಯೆ ತೋರುವ ಮಾದರಿಗಳೂ ಅಡಗಿವೆ.

ಬದಲಾವಣೆಯೊಂದೇ ಸತ್ಯವಾಗಿರುವ ಕಾಲಾವಧಿಯ ಚಿತ್ರಣ ನೀಡುವ ಮೊದಲ ಅಧ್ಯಾಯ, ೨೦ನೇ ಶತಮಾನದ ಕೊನೆಯ ಭಾಗದಿಂದ ಪ್ರಾರಂಭಗೊಂಡು, ಸ್ವಾತಂತ್ರ್ಯ, ವಿಭಜನೆ ಎಲ್ಲ ಘಟ್ಟಗಳನ್ನೂ ಹಾದು ಆಧುನಿಕ ಯುಗದವರೆಗೂ ಬೆಳೆಯುತ್ತದೆ. ಒಂದು ವೃತ್ತ ಪತ್ರಿಕೆಯ ಕತೆ, ಮನೆ ಮಕ್ಕಳ ಬೆಳವಣಿಗೆಯ ಕತೆ, ಪಾಕಿಸ್ತಾನದ ಜನನ ಮತ್ತು ಏರಿಳಿತಗಳ ಕತೆ, ದಾದಿಯ ವಿಲಕ್ಷಣತೆಗಳು ಹೆಚ್ಚು ಹೆಚ್ಚುತ್ತ, ಅವಳನ್ನು ಅಮಾನವೀಯಗೊಳಿಸುವ ಪರಿ, ಎಲ್ಲವೂ ಒಟ್ಟೊಟ್ಟಿಗೆ ಈ ಅಧ್ಯಾಯದಲ್ಲಿ ಹೆಣೆದುಕೊಂಡಿವೆ. ಹಲವು ಬಗೆಯ ಹೆಣ್ಣುಗಳು ಇಲ್ಲಿದ್ದಾರೆ, ಅವರವರ ತಲ್ಲಣಗಳು ಅವರ ಪಾಲಿಗಿವೆ, ಅವರ ಸಂಬಂಧಗಳ ಸ್ವರೂಪ ಬೇರೆಬೇರೆಯಾಗಿದೆ – ಒಂದೇ ಕುಟುಂಬದ ಛಾವಣಿಯ ಅಡಿಯಲ್ಲಿಯೂ ಕಾಣುವ ಈ ಜೀವನ ವೈವಿಧ್ಯ, ಭಾಷೆಯಲ್ಲಿ ಅದನ್ನು ಹಿಡಿದಿಡುವ ಪರಿ. ಈ ಅಧ್ಯಾಯದ ತೀವ್ರ ಯಶಸ್ಸಿಗೆ ಕಾರಣವಾಗಿವೆ.

ಹಲವು ಬಗೆಯ ಒಂಟಿತನಗಳು ಇಲ್ಲಿನ ವಾಸ್ತವ. ಬದಲಾಗುತ್ತ ಹೋಗುವ ಪರಿಸರದಲ್ಲಿ, ಬೆಳೆಯುತ್ತ ಹೋಗುವ ದಾದಿಯ ಒಂಟಿತನ ಒಂದು ಬಗೆಯದು. ವೃದ್ಧಾಪ್ಯದ ಅನುಭವದಲ್ಲಿ ಅವಳು [illegible] ಬಿಸಿಲು

**ಸಿ. ಎಸ್. ಸರ್ವಮಂಗಳಾ**

ಕಾಯಿಸುವಾಗ, ತನ್ನ ಸೂಕ್ಷ್ಮ ಚರ್ಮಕ್ಕೆ ಎಣ್ಣೆ ಲೇಪಿಸುವಾಗ, ತನ್ನ ಗೊಣಗಾಟ ಯಾರೂ ಕೇಳಿಸಿಕೊಳ್ಳದಿದ್ದಾಗ, ಕೈತೋಟದಲ್ಲಿ ತಿರುಗಾಡುವಾಗ, ಪುಟ್ಟ ಚಾಪೆ ಹಾಸಿಕೊಂಡು ಪ್ರಾರ್ಥಿಸುವಾಗ, ಆ ಎಲ್ಲ ಹೊತ್ತಿನಲ್ಲೂ, ಅವಳ ಲೋಕದ ಏಕಮಾತ್ರ ನಿವಾಸಿ ಅವಳು.

ವೇಲ್ಸ್ ಮೂಲದ ಸಾರಾಳ ತಾಯಿಯ ಒಂಟಿತನ ಹೆಚ್ಚುತ್ತ ಹೋಗುವುದು ಇನ್ನೊಂದು ಬಗೆಯಲ್ಲಿ. ಪಾಕಿಸ್ತಾನದ ಬದುಕಿನಲ್ಲಿ ಬೆರೆತು ಹೋಗುವ ಸಾರಾಳ ತಾಯಿ, ಹೆಣ್ಣುಮಕ್ಕಳ ಮದುವೆಯಾಗಿ, ಮೊಮ್ಮಕ್ಕಳ ಆಗಮನದ ನಂತರ ಒಂದು ತೀವ್ರ ಕದಲಿಕೆಯನ್ನು ಅನುಭವಿಸುತ್ತಾಳೆ. ಮೊಮ್ಮಕ್ಕಳಿಗೆ ಇಂಗ್ಲಿಷಿನ ಗಂಧವೇ ಇಲ್ಲದೆ, ಉರ್ದು ಮಾತನಾಡಲು ತನ್ನ ಎಂದಿನ ಹಿಂದೇಟು ಅಡ್ಡ ಬರುತ್ತಿದ್ದ ವಾತಾವರಣದಲ್ಲಿ, ಹೆಚ್ಚಿನ ಪರಕೀಯತೆ ಅನುಭವಕ್ಕೆ ಬರತೊಡಗುತ್ತದೆ. ಮೊಮ್ಮಕ್ಕಳ ಓಡಾಟ, ಎಲ್ಲ ಮಕ್ಕಳು ಮೊಮ್ಮಕ್ಕಳೊಡನಾಟ ಹೆಚ್ಚಿದಂತೆಲ್ಲ, ಅವಳು ತನ್ನ ಖಾಸಗಿ ವಲಯದಲ್ಲಿ ಇನ್ನೂ ಅಡಗಿಕೊಳ್ಳತೊಡಗುತ್ತಾಳೆ. ಹಿರಿಯ ಮಗನನ್ನು ಇಂಗ್ಲೆಂಡಿಗೆ ಕಳಿಸಿ, ಪಾಶ್ಚಿಮಾತ್ಯ ಬದುಕು ಮಕ್ಕಳನ್ನು ಕಬಳಿಸುವ ರೀತಿಯನ್ನು, ಬೇರೆಲ್ಲ ತಾಯಿಯರು ಅಸಹಾಯಕರಾಗಿ ವೀಕ್ಷಿಸುವಂತೇ ತಾನೂ ಸದ್ದಿಲ್ಲದೆ ವೀಕ್ಷಿಸುತ್ತಾಳೆ. ಬರ ಬರುತ್ತ ತನ್ನ ಪಾಲಿನ ಕೌಟುಂಬಿಕ ಕರ್ತವ್ಯಗಳನ್ನು ಉಳಿದಿಬ್ಬರು ಹೆಣ್ಣು ಮಕ್ಕಳಾದ ತಿಲ್ಲತ್ ಮತ್ತು ಸಾರಾ ಇವರಿಗೆ ವಹಿಸುತ್ತ ಬರುತ್ತಾಳೆ. ಬೇಸಿಗೆ ಮಧ್ಯಾಹ್ನದ ತಾಪ ಇಳಿದ ಮೇಲೆ, ಬಿಸಿಲಿಗೆ ಕಾದ ಧೂಳು ನೆಲಕ್ಕೆ ನೀರೆರೆಯುತ್ತ ನಿಲ್ಲುವ ತಾಯಿಯನ್ನು ಸಾರಾ ವರ್ಣಿಸುವ ರೀತಿ ಅದ್ಭುತವಾಗಿದೆ. "She looked like a girl". ಎಲ್ಲ ಎಲ್ಲ ಬಂಧನಗಳನ್ನು ಕಳಚಿಕೊಂಡು ತನ್ನದೇ ಆದ ಲೋಕದಲ್ಲಿ, ಪುಟ್ಟ ಹುಡುಗಿಯಂತೆ, ಮಗಳ ಕಣ್ಣಿಗೆ ಕಾಣುವ ತಾಯಿಯ ಚಿತ್ರವಿದು.

ದೃಷ್ಟಿ ಕಳೆದುಕೊಂಡ ತನ್ನ ವೃದ್ಧ ತಾಯಿಯ ಜೊತೆಯಿರಲು, ಅರ್ಥಾತ್ ಅವಳ ಸಾವಿಗಾಗಿ ಕಾಯಲು ವೇಲ್ಸ್‌ಗೆ ತೆರಳುವ ಸಾರಾಳ ತಾಯಿ, ತನ್ನ ಬಾಲ್ಯ ನಿಶ್ಚಿತವಾಗಿ ಕಳೆದುಹೋದ ಅನುಭವವನ್ನು ಪಡೆಯುತ್ತಾಳೆ. ಮದುವೆಯಾಗಿ ಕುವೈತ್‌ಗೆ ತೆರಳುವ ತಿಲ್ಲತ್ ಮತ್ತು ಅಮೆರಿಕೆಗೆ ತೆರಳುವ ಸಾರಾ, ಒಬ್ಬೊಬ್ಬರದು ಒಂದೊಂದು ದಾರಿ. ಕಡೆಯಲ್ಲಿ ಆ ಮನೆಗೆಲ್ಲ ಉಳಿಯುವ ಹೆಂಗಸರು ಇಬ್ಬರೇ – ದಾದಿ ಮತ್ತು ಅವಳ ವಿದೇಶಿ ಸೊಸೆ.

ರಿಕ್ಷಾವೊಂದರ ಹೊಡೆತಕ್ಕೆ ತುತ್ತಾಗಿ ಸಾವಿಗೀಡಾಗುವ ಸಾರಾಳ ತಾಯಿ ಮಣ್ಣು ಕಾಣುವುದು ಲಾಹೋರಿನ ಧೂಳು ತುಂಬಿದ ಗಡಿಬಿಡಿಯ ಕೇಂದ್ರ ತಾಣವೊಂದರಲ್ಲಿ. ಅದರ ಪಕ್ಕದಲ್ಲಿ ಒಂದು ತುಂಡು ಭೂಮಿಯನ್ನು ಕೂಡಲೆ ಖರೀದಿಸಲು ವ್ಯವಸ್ಥೆ ಮಾಡುತ್ತಾನೆ ಸಾರಾಳ ತಂದೆ. ತಾಯಿಯ ಗೋರಿಕಲ್ಲಿನ ಮೇಲೆ, ಸುಂದರ ಉರ್ದು ಕಾವ್ಯ ಮೂಡುತ್ತದೆ.

ನಡುರಾತ್ರಿಯಲ್ಲಿ ಎದ್ದು ಚಹಾ ಮಾಡಿಕೊಳ್ಳುವ ಯತ್ನದಲ್ಲಿ ಬೆಂಕಿ ಆಕಸ್ಮಿಕಕ್ಕೆ ತುತ್ತಾಗುವ ದಾದಿಯ ಶುಶ್ರೂಷೆಯ ಕತೆಯೇ ಒಂದು ದಟ್ಟ ಕಥನ. ದಾದಿಯ ದೇಹದ ನಿರಂತರ ಶುಶ್ರೂಷೆಗೆ ತೊಡಗುವ ಸಾರಾ ಆಶ್ಚರ್ಯಕರ ರೀತಿಯಲ್ಲಿ ಬದುಕುಳಿಯುವ ದಾದಿಯ ಸುಟ್ಟ ದೇಹದ ಗಾಯಗಳು ವಾಸಿಯಾಗುವ ಕ್ರಮದಲ್ಲಿ ಆ ವಯಸ್ಸಿನಲ್ಲೂ ಜೈವಿಕ ಚಟುವಟಿಕೆಯ ಮೂಲಕ ತನ್ನನ್ನು ತಾನು ಮತ್ತೆ ಸ್ಥಾಪಿಸಿಕೊಳ್ಳುವ ದೇಹದ ಚೈತನ್ಯ ಕಂಡು ಬೆರಗಾಗುತ್ತಾಳೆ. ಆ ಸಂದರ್ಭದ ಆಸೆ-ನಿರಾಸೆಯ ಅನುಭವವನ್ನು ಪ್ರೇಮದ ಅನುಭವದೊಂದಿಗೆ ಹೋಲಿಸುತ್ತಾಳೆ ಸಾರಾ. ದಾದಿಯ ಜೈವಿಕ ದೇಹ ಮತ್ತು ಸಾರಾಳ ನಡುವಣ ಮಾನಸಿಕ ಸಂಬಂಧ ಮತ್ತು ಅವಳಲ್ಲಿ ಉಂಟಾಗುವ ಬೆರಗು, ಈ ಎಲ್ಲವನ್ನೂ ಭಾಷೆಯ ಮೂಲಕ ಕಟ್ಟಿಕೊಡುವ ಸಾರಾ ಸುಲೇರಿಯ ಯಶಸ್ಸು ತಲೆದೂಗುವಂತಿದೆ. ಯಥಾಸ್ಥಿತಿಗೆ ಮರಳುವ ದಾದಿ ತನ್ನ ಜೀವನದ ಅವಿಭಾಜ್ಯ ಅಂಗವಾದ ಪ್ರಾರ್ಥನೆಯನ್ನು ಮರೆಯುತ್ತಾಳೆ. ವಿಚಿತ್ರವೆಂದರೆ ಪ್ರಾರ್ಥನೆಯ ಅಭ್ಯಾಸವನ್ನು ತ್ಯಜಿಸಿದ್ದ ಪ್ರಗತಿಶೀಲ ಜಿಯಾ, ಮತ್ತೆ ಪ್ರಾರ್ಥನೆಯ ಅಭ್ಯಾಸ ರೂಢಿಸಿಕೊಳ್ಳುತ್ತಾನೆ. ಮಕ್ಕಳು ದಂಗಾಗುತ್ತಾರೆ, ಹೆಂಡತಿ ಯಾವ ಆಶ್ಚರ್ಯವನ್ನೂ ದಾಖಲಿಸದೆ ಸುಮ್ಮನೆ ಉಳಿಯುತ್ತಾಳೆ. 'Like a woman looking down and then away' ಎಂಬ ತಾಯಿಯನ್ನು ಕುರಿತ ಸಾರಾಳ ವರ್ಣನೆ, ಬದುಕಿನ ಆಗುಹೋಗುಗಳನ್ನು ಮಮ್ಮ ತನ್ನದು ಮಾಡಿಕೊಂಡ ಬಗೆಯನ್ನು ಅತ್ಯಂತ ಅಡಕವಾಗಿ ಹೇಳುವ ಅದ್ಭುತ ಯತ್ನವಾಗಿದೆ. ದಾದಿಯ ನಿರಂತರ ಆಟಾಟೋಪಗಳಿಂದ ಸದಾ ಬೇಸತ್ತ ಮಗ ಜಿಯಾ, ತಾಯಿ ಪ್ರಾರ್ಥನೆ ಮರೆತ ಘಟ್ಟದಲ್ಲಿ ಅತ್ಯಂತ ನಿಷ್ಠೆಯಿಂದ ಪ್ರಾರ್ಥನೆಗೆ ತೊಡಗುತ್ತಾನೆ. ಪಾಕಿಸ್ತಾನದ ಇಸ್ಲಾಮೀಕರಣಕ್ಕೂ ಈ ಮನೆಯ ಜನರ ಧಾರ್ಮಿಕ ಆಚರಣೆಗಳ ಕತೆಗೂ ನೇರ ಸಂಬಂಧವಿದೆ. ಜಿಯಾ ಪ್ರಾರ್ಥನೆ ಕೈಗೊಳ್ಳುವುದಕ್ಕೂ ಪಾಕಿಸ್ತಾನದ ಜನಜೀವನದಿಂದ ಇಸ್ಲಾಂ ಕಾಲ್ತೆಗೆಯುವುದಕ್ಕೂ ಅಂತೆಯೇ. ರಾಜಕೀಯದ ಮಂದಿ ಇಸ್ಲಾಂ ಧರ್ಮವನ್ನು ಬೀದಿಗೊಯ್ದು, ಗಂಟಲು ಹರಿಯುವಂತೆ ಧರ್ಮದ ಬಗ್ಗೆ ಮಾತಾಡತೊಡಗಿದ ಕೂಡಲೆ ಧರ್ಮ ಮತ್ತು ಜನರ ನಡುವಣ ಸುಂದರ ಸಂಬಂಧದ ಅಂತ್ಯವೇ ಸರಿ. ದೇವರು ಮನೆಯನ್ನು ತೊರೆದು ಸರ್ಕಾರವನ್ನು ಸೇರಿದ ಎಂಬ ಮಾತೊಂದು ದಾದಿ ಪ್ರಾರ್ಥನೆಯನ್ನು ಮರೆತ ಸಂದರ್ಭದಲ್ಲಿ ಕಂಡುಬರುತ್ತದೆ. ೧೯೭೧ರ ಯುದ್ಧದ ಹೇಳತೀರದ ನೋವು ಅಗಲಿಕೆಗಳು ಮನೆಮನೆಯಲ್ಲೂ ಪಾಕಿಸ್ತಾನದಲ್ಲಿ ಅನುಭವಕ್ಕೆ ಬಂದಿದ್ದ ಕಾಲವದು.

ಸಾರಾಳ ತಾಯಿಯ ಅಂತ್ಯದ ವೇಳೆಗೆ ಭುಟ್ಟೋ ಜೈಲುವಾಸದಲ್ಲಿರುತ್ತಾನೆ. ಜನರಲ್ ಜುಲು ಪಾಕಿಸ್ತಾನದ ಇಸ್ಲಾಮೀಕರಣದ ಅಧ್ಯಕ್ಷತೆ ವಹಿಸಿರುತ್ತಾನೆ. ದಾದಿಯ ಸಾವು ಭುಟ್ಟೋನ ನೇಣು ಶಿಕ್ಷೆ ಎರಡೂ ಒಂದೇ ವಾರದಲ್ಲಿ ನಡೆಯುವ ಘಟನೆಗಳು. ಹಿಂದೆಂದೂ ಇರದಿದ್ದ ಒಂದು ಬಗೆಯ ಅಸ್ಪಷ್ಟ ಗೋಪ್ಯತೆ ಪಾಕಿಸ್ತಾನದಲ್ಲಿ ನೆಲೆಸುತ್ತದೆ. ಘಟನೆಯೊಂದಿಗೆ ಪಾಕಿಸ್ತಾನದೊಂದಿಗಿನ ಆತ್ಮೀಯತೆ ಕಡಿದಂತಹ ಅನುಭವವಾಗುತ್ತದೆ ಉಳಿದವರಿಗೆ. ಚರಿತ್ರೆಗೆ ಇನ್ನೊಂದು ಹೆಸರು ದುಃಖ ಎನ್ನುವಂಥ ಅನುಭವ ಪಾಕಿಸ್ತಾನದ್ದು.

ದಾದಿಯ ಸಾವು ಹೆಚ್ಚು ಆರ್ಭಟವಿಲ್ಲದೆ ನಡೆದು ಹೋಗುತ್ತದೆ. ಸಾವಿನ ಸಮಯದಲ್ಲಿ ಎಷ್ಟು ಬೇಡವೆಂದುಕೊಂಡರೂ ಸೇರಿಹೋಗುವ ಅಬ್ಬರದ ಅನುಭವ ತಪ್ಪಿಸಿಕೊಂಡು ಮರೆವಿನ ವಲಯಕ್ಕೆ ಸದ್ದಿಲ್ಲದೆ ನುಸುಳಿ ಹೋದ ದಾದಿಯ ಸಾವಿಗೆ ದುಃಖಿಸುವುದನ್ನು ಎಲ್ಲ ಮೊಮ್ಮಕ್ಕಳು ಮರೆಯುತ್ತಾರೆ.

ಅಪರೂಪಕ್ಕೊಮ್ಮೆ ಮೊಮ್ಮಕ್ಕಳೊಂದಿಗೆ ಮಾತುಕತೆ, ಆಟದಲ್ಲಿ ಭಾಗಿಯಾಗುತ್ತಿದ್ದ ದಾದಿ, ಅಷ್ಟೇ ಅಪರೂಪವಾಗಿ ತನ್ನ ಬಗ್ಗೆ, ತನ್ನ ಜೀವನದ ವಿವರಗಳ ಬಗ್ಗೆ ತೆರೆದುಕೊಳ್ಳುತ್ತಾಳೆ. 'ಅಜ್ಞಾನ ಕವಿದ ಗಂಡಸಿನ ಮನಸ್ಸಿಗಿಂತ ಹೆಚ್ಚು ಒಳ್ಳೆಯತನ ಒಂದು ಹೆಣ್ಣಿನ ಕಿರುಬೆರಳಿನಲ್ಲಿದೆ' ಎನ್ನುತ್ತಾಳೆ ದಾದಿ ಒಮ್ಮೆ. 'ಸ್ವರ್ಗ ಎನ್ನುವುದು ಹೆಂಗಸರ ಪಾದದ ಅಡಿಯಲ್ಲಿ ಇರುವಂಥದು' ಎನ್ನುವ ಸಂತ ಮೊಹಮ್ಮದನ ಮಾತನ್ನು ಉಲ್ಲೇಖಿಸುತ್ತಾಳೆ ದಾದಿ. ಸ್ತ್ರೀವಾದಿ ನೆಲೆಯೊಂದರಿಂದ ಹುಟ್ಟಬಹುದಾದಂಥ ಗಟ್ಟಿ ಮಾತುಗಳನ್ನು ದಾದಿ ತನ್ನ ಎದುರಿನ ಅನುಭವದ ನೆಲೆಯಿಂದ ಸಹಜವಾಗಿ ಹೇಳುತ್ತಿದ್ದಾಳೆ.

ಮೆದುಳು ಜ್ವರದಿಂದ ನರಳಿ ಚೀರುತ್ತ ಒಂದು ಮಗು ಸಾವನ್ನಪ್ಪಿದ ರಾತ್ರಿಯೇ ಇನ್ನೊಂದು ಮಗುವಿಗೆ ಜನ್ಮವಿತ್ತ ದಾದಿ ಹೀಗಾದ್ದಕ್ಕೆ ದುಃಖಿಸಲೇ ಅಥವಾ ಸಂಭ್ರಮಪಡಲೇ? ಎಂದು ಕೇಳುತ್ತಾಳೆ. ಬದುಕಿನ ಇಂಥ ವೈರುಧ್ಯಗಳು, ಒಂದಕ್ಕೊಂದು ಸಂಬಂಧವಿರದ ಬದುಕಿನ ಸತ್ಯಗಳು, ಅಸಂಗತ ಅಂಶಗಳು, ವ್ಯಂಗ್ಯಗಳು, ಸಣ್ಣ - ಪುಟ್ಟ, ಸೂಕ್ಷ್ಮ ನೋವು-ನಲಿವು ತಲ್ಲಣಗಳು, ಇವೆಲ್ಲ ಸಾರಾ ಸುಲೇರಿಯ ಕೃತಿಯಲ್ಲಿ ಹೇರಳವಾಗಿವೆ.

ಭುಟ್ಟೋಗೆ ನೇಣು ಶಿಕ್ಷೆಯಾದ ವಾರದಲ್ಲೇ ದಾದಿಯ ಸಾವೂ ಬರುತ್ತದೆ. ಭುಟ್ಟೋನ ಸಾರ್ವಜನಿಕ ಮತ್ತು ಚಾರಿತ್ರಿಕ ಸಾವನ್ನು ಕುರಿತು ಹೆಚ್ಚು ಮಾತನಾಡದಂತೆ ಪಾಕಿಸ್ತಾನ ಮಾಡಿದ ಶೀಘ್ರ ವ್ಯವಸ್ಥೆಯ ಭಾಗವೋ ಎಂಬಂತೆ, ದಾದಿಯ ಸಾವಿನ ವಿಷಯವೂ ಹೆಚ್ಚು ಮಾತು, ಚರ್ಚೆಯಿಲ್ಲದೆ ನಡೆದುಹೋಗುತ್ತದೆ. ಇಂಗ್ಲೆಂಡಿನಲ್ಲಿ, ಭುಟ್ಟೋ ಮಾತುಕತೆಯಲ್ಲಿ ನಿರತನಾದ ದಾದಿಯ ಮಗ ಜಿಯಾನ ವಿಮಾನ ತಪ್ಪಿಹೋಗಿ ಅಂತಿಮ ಸಂಸ್ಕಾರಕ್ಕೆ ಬರಲಾಗದ ಪರಿಸ್ಥಿತಿ ಉಂಟಾಗುತ್ತದೆ. ಮನೆಯಲ್ಲಿದ್ದ ಮೊಮ್ಮಗ ಈರ್ಫಾನ್ ದಾದಿಗೆ ಗೋರಿ ಕಾಣಿಸುತ್ತಾನೆ.

ಮುಂದಿನ ವರ್ಷದಲ್ಲಿ ಬೇಸಿಗೆಯ ಒಂದು ಮಾರ್ಚ್ ರಾತ್ರಿ ಸಾರಾಳ ತಂಗಿ ಈಫತ್ ಕಾರೊಂದರ ಅಡಿಯಲ್ಲಿ ಸಿಲುಕುತ್ತಾಳೆ. ತಾಯಿಯ ಗೋರಿಯ ಪಕ್ಕ ತಂದೆ ಕಾದಿರಿಸಿಕೊಂಡಿದ್ದ ಸ್ಥಳವನ್ನು ಈಫತ್ ಆಕ್ರಮಿಸಿಕೊಳ್ಳುತ್ತಾಳೆ. 'ಮಕ್ಕಳು (ಅವಸರವಾಗಿ) ಎಲ್ಲವನ್ನೂ ತಮ್ಮದಾಗಿಸಿಕೊಂಡುಬಿಡುತ್ತಾರೆ' ಎಂಬ ಮನಕಲಕುವ ನುಡಿಯನ್ನು ಸಾರಾ ಓದುಗರ ಮುಂದಿಡುತ್ತಾಳೆ.

ಸಾವಿನ ಛಾಯೆಯೂ ದೀರ್ಘವೇನಲ್ಲ. ಒಂದಾದ ಮೇಲೊಂದರಂತೆ ಪಾಕಿಸ್ತಾನದಲ್ಲಿ ಉಂಟಾದ ಸಮೃದ್ಧ ಸುಗ್ಗಿಗಳು ಭುಟ್ಟೋ ಸುದ್ದಿಯನ್ನು ಹಳತು ಮಾಡುತ್ತವೆ. ಮಮ್ಮ ಮತ್ತು ಈಫತ್ ರೂಢಿ ಮರೆತ ಆಕರ್ಷಕ ಹೆಸರುಗಳಾಗುತ್ತಾರೆ.

ವಾಸ್ತವ್ಯ, ಮರೆವು, ಚರಿತ್ರೆ, ಮನೆ, ತೃತೀಯ ಜಗತ್ತು, ಹೆಣ್ಣು ಇಂಥ ಪರಿಕಲ್ಪನೆಗಳು, ಅವುಗಳ ನಡುವಣ ಸಂಬಂಧಗಳು ಮತ್ತು ಪರಸ್ಪರ ಕ್ರಿಯೆಗಳು ಅಂಥ ಸಂಬಂಧಗಳು ನಿರ್ಧರಿಸುವ ವ್ಯಾಖ್ಯಾನ, ಈ ಎಲ್ಲ ಸೂಕ್ಷ್ಮಗಳು ಸಾರಾ ನಿರೂಪಣೆಯಲ್ಲಿದೆ, ಸಾರಾ ಭಾಷೆಯಲ್ಲಿದೆ. ಹೀಗಾಗಿ ಈ ಕೃತಿಯಲ್ಲಿನ ಅಧಿಕೃತ ಸ್ತ್ರೀ ನೆಲೆಯ ಚಿತ್ರಣ ಪಾಕಿಸ್ತಾನಿ ಅನುಭವವನ್ನು ತೆರೆದಿಡುತ್ತಾ ಹೋಗುತ್ತದೆ.

ಪಿ.ಎಸ್. ಸರ್ವಮಂಗಳಾ
೧೦೨೩, ೬ನೇ ಕ್ರಾಸ್, ಅಶೋಕನಗರ
ಬನಶಂಕರಿ ಮೊದಲ ಹಂತ, ಬೆಂಗಳೂರು – ೫೬೦ ೦೫೦



# ಹರಿದ್ವಾರದ ಪ್ರಾಚ್ಯಾವಶೇಷಗಳು

**ಭಾ**ರತದ ಪವಿತ್ರ ತೀರ್ಥಸ್ಥಳಗಳಲ್ಲಿ ಒಂದಾದ ಹರಿದ್ವಾರವು ಅಪೂರ್ವ ರೀತಿಯಲ್ಲಿ ವೇಗವಾಗಿ ಬೆಳೆದು ಸುಂದರವೂ ಮತ್ತು ಸುಸಜ್ಜಿತವೂ ಆಗಿದೆ. ಈ ಬೆಳವಣಿಗೆಗೆ ಕಾರಣ ಇಲ್ಲಿನ ಭೌಗೋಳಿಕತೆ ಮತ್ತು ಪ್ರಾಕೃತಿಕತೆ. ಹಿಮಾಲಯಕ್ಕೆ ಪ್ರವೇಶ ದ್ವಾರವಾಗಿರುವ ಇಲ್ಲಿ ಶಿವಾಲಿಕ್ ಬೆಟ್ಟ ಶ್ರೇಣಿ ಹರಿದುಹೋಗುತ್ತದೆ. ಅಲ್ಲದೆ ಗೋಮುಖದಲ್ಲಿ ಜನ್ಮತಳೆದ ಗಂಗೆ ಇಲ್ಲಿ ಹರಿದು ಬರುವಾಗ ಕವಲು ಕವಲುಗಳಾಗಿ ಮುನ್ನಡೆಯುತ್ತದೆ. ಇಲ್ಲಿನ ಬ್ರಹ್ಮಕುಂಡ ಅಥವಾ ಹರ್‌ಕಿ ಪಾಡಿ ಎಂಬ ಸ್ಥಳದಲ್ಲಿ ಪುಟ್ಟ ಸ್ವಾಭಾವಿಕ ದ್ವೀಪವು ರೂಪುಗೊಂಡು ಧಾರ್ಮಿಕ ಮತ್ತು ಸಾಮಾಜಿಕ ವಿಕಾಸಕ್ಕೆ ಅನುಕೂಲ ಮಾಡಿಕೊಟ್ಟಿದೆ. ಶೈವ, ವೈಷ್ಣವ, ಶಾಕ್ತ ಮತಗಳ ನೆಲೆ ಬೀಡಾಗಿರುವ ಇಲ್ಲಿ ಇತ್ತೀಚೆಗೆ ಆದಿ ಇತಿಹಾಸ ಕಾಲಕ್ಕೆ ಸೇರುವ ಶಿವ ಮಂದಿರ, ಶಿವಲಿಂಗಗಳು ಕಂಡುಬಂದಿವೆ. ಕ್ರಿ. ಶ. ಏಳನೆಯ ಶತಮಾನಕ್ಕಾಗಲೇ ಇಲ್ಲಿ ಕುಂಭಮೇಳವನ್ನು ಆಯೋಜಿಸಲಾಗುತ್ತಿತ್ತು ಎಂಬುದನ್ನು ಹ್ಯುಯೆನ್‌ತ್ಸಾಂಗ್ ಪ್ರತ್ಯಕ್ಷವಾಗಿ ನೋಡಿ ತನ್ನ ಬರೆವಣಿಗೆಯಲ್ಲಿ ಉಲ್ಲೇಖಿಸಿದ್ದಾನೆ. ವೇಗವಾಗಿ ಆಧುನಿಕ ರೀತಿಯಲ್ಲಿ ಬೆಳೆದಿರುವ ಹರಿದ್ವಾರದಲ್ಲಿ ಪ್ರಾಚ್ಯಾವಶೇಷಗಳ ಕುರುಹುಗಳ ಹುಡುಕಾಟ ತುಸು ಕಷ್ಟವೇ ಆದರೂ, ಈವರೆಗೆ ದೊರೆತಿರುವ ಪ್ರಾಚ್ಯಾವಶೇಷಗಳನ್ನು ಇಲ್ಲಿನ ಗುರುಕುಲಕಾಂಗಡಿ ವಿಶ್ವವಿದ್ಯಾಲಯದ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಸಂಗ್ರಹಿಸಿ ಇಡಲಾಗಿದೆ.

ಈ ಜಿಲ್ಲೆಯ ಆದಿ ಶಿಲಾಯುಗ, ಮಧ್ಯ ಶಿಲಾಯುಗ, ಸೂಕ್ಷ್ಮ ಶಿಲಾಯುಗದ ಕುರುಹುಗಳು ಲಭ್ಯವಾಗಿಲ್ಲವಾದರೂ, ಆನಂತರದ ಶಿಲಾ ತಾಮ್ರ ಯುಗದ (ಕಾಲ ಕ್ರಿ. ಪೂ. ೩೦೦೦ ದಿಂದ ಕ್ರಿ. ಪೂ. ೮೦೦ವರೆಗೆ) ಆಯುಧಗಳಾದ ಒಂದು ಅಡಿ ಎತ್ತರದ ತಾಮ್ರದ ಬಿಚ್ಚುಗತ್ತಿ, ಮುಳ್ಳಿನ ಮೊನಚುಗಳುಳ್ಳ ಬರ್ಚಿ, ಖಡ್ಗ, ಕೊಡಲಿಗಳು ಮತ್ತು ಅರಗಳು ಹತ್ತಿರದ ನಾಸಿರ್‌ಪುರದಲ್ಲಿ ದೊರೆತಿವೆ. ನಂತರದ ಬೃಹತ್ ಶಿಲಾಯುಗ. ಇತಿಹಾಸದ ಆದಿಕಾಲದ ಕೆಂಪು ಮಣ್ಣಿನ ಮಡಕೆಗಳ ಭಾಗವೂ ಇಲ್ಲಿ ದೊರೆತಿವೆ.

ಕ್ರಿ. ಶ. ಎಂಟರಿಂದ ಒಂಬತ್ತನೆಯ ಶತಮಾನದಲ್ಲಿ ನಿರ್ಮಿತವಾದ ವಾಸ್ತುಶಿಲ್ಪ, ಮೂರ್ತಿ ಶಿಲ್ಪಗಳ ಅವಶೇಷದ ಕುರುಹುಗಳು ಲಭ್ಯವಾಗಿದ್ದು ಅವು ಶೈವ, ವೈಷ್ಣವ, ಶಾಕ್ತ, ಬೌದ್ಧ, ಜೈನ ಧರ್ಮದವುಗಳಾಗಿವೆ. ಇವುಗಳಿಂದಾಗಿ ಪ್ರಾಚೀನ ಹರಿದ್ವಾರವು ಬೌದ್ಧ ಮತ್ತು ಜೈನರ ನೆಲೆವೀಡೂ ಆಗಿದ್ದಿತೆಂದು ತಿಳಿದುಬರುತ್ತದೆ.

ಇಲ್ಲಿನ ಮಾಯಾಪುರ ಎಂಬಲ್ಲಿ ಕ್ರಿ.ಶ. ಒಂಬತ್ತರಿಂದ ಹತ್ತನೇ ಶತಮಾನದ ಬುದ್ಧನ ಪ್ರತಿಮೆಯು ದೊರೆತಿದ್ದು ಮತ್ತಷ್ಟು ಕುರುಹುಗಳು ಲಭ್ಯವಾಗಬೇಕಾಗಿವೆ. ಇದೇ ಕಾಲಕ್ಕೆ ಸೇರುವ ಸರ್ವತೋಭದ್ರಿಕಾ ಪ್ರತಿಮೆ ಎಂಬ ಜೈನ ಮೂರ್ತಿ ಶಿಲ್ಪವು ಇಲ್ಲಿನ ಆಮ್‌ಸ್ರೋತ ಎಂಬಲ್ಲಿ ದೊರೆತಿದ್ದು, ಚೌಕಾಕಾರದ ನಾಲ್ಕು ಪಾರ್ಶ್ವಗಳಲ್ಲಿ ಜಿನ ಶಿಲ್ಪಗಳ ಕೆತ್ತನೆ ಇದೆ. ಇಲ್ಲಿಯೇ ಶ್ರವಣನಾಥ ಮಠ ಎನ್ನುವ ಪ್ರಾಚೀನ ಜೈನ ಮಠವಿದ್ದು ಈಗ ಅದು ಪಶುಪತಿ ದೇವರ ವಾಸಸ್ಥಾನವಾಗಿದೆ. ಇಲ್ಲಿಯೇ ನಾಗರೀ ಲಿಪಿಯ ಎರಡು ಶಾಸನಗಳಿವೆ. ಇಂದಿಗೂ ಸಹ ಜೈನ ಮಂದಿರಗಳು ಉಳಿದುಬಂದಿವೆಯಾದರೂ ಬೌದ್ಧ ಧರ್ಮಗಳ ಆರಾಧನಾ ಸ್ಥಳಗಳು ಇಲ್ಲವಾಗಿವೆ.

ಕ್ರಿಸ್ತಶಕ ಒಂಬತ್ತರಿಂದ ಹತ್ತನೇ ಶತಮಾನಕ್ಕೆ ಸೇರುವ ದುರ್ಗೆಯ ಶಿಲ್ಪಗಳು ಕುಬೇರನ ಪ್ರತಿಮೆ, ಚತುರ್ಮುಖ ಬ್ರಹ್ಮ, ಶಿವಲಿಂಗಗಳು, ವಿಪುಲವಾಗಿ ದೊರೆತಿದ್ದು ಅವು ಹಿಂದೂ ಸಂಸ್ಕೃತಿಯ ಕುರುಹುಗಳಾಗಿವೆ.

ಕ್ರಿಸ್ತಶಕ ಹದಿನಾರನೇ ಶತಮಾನದಲ್ಲಿ ಅಕ್ಬರ್ ನಿರ್ಮಿಸಿದ ರಾಜಾ ಮಾನ್‌ಸಿಂಗ್ ಛತ್ರಿ ಎಂಬ ಸ್ಮಾರಕದ ನಿರ್ಮಾಣವೂ ಹರಕಿ ಪಾಡಿ ಬಳಿಯಲ್ಲಿದೆ. ಸತಿಕುಂಡ್ ಎಂಬುವ ಸ್ಥಳದಲ್ಲಿ ಗುಪ್ತರ ಕಾಲಕ್ಕೆ ಸೇರಿದ ಮಂದಿರದ ಇಟ್ಟಿಗೆಗಳು, ಶಿವಲಿಂಗ ಆಮಲಕಗಳಂಥ ಅವಶೇಷಗಳು ಲಭ್ಯವಿವೆ. ಪುರಾಣಕ್ಕೆ ಅನ್ವಯಿಸುವ ಸ್ಥಳವಾದ ದಕ್ಷಪ್ರಜಾಪತಿ ದೇವಾಲಯದ ಬಳಿ ಕ್ರಿಸ್ತಶಕ ಸುಮಾರು ಹತ್ತನೆಯ ಶತಮಾನಕ್ಕೆ ಸೇರುವ ನಂದಿ ಮೂರ್ತಿಗಳು, ಶಿವಲಿಂಗಗಳು ಉಳಿದುಬಂದಿವೆ. ಶಾಕ್ತ ಧರ್ಮಕ್ಕೆ ಸಂಬಂಧಿಸಿದಂತೆ ಮನ್ಸಾದೇವಿ, ಚಂಡಿದೇವಿ, ಮಾಯಾದೇವಿ ಎಂಬ ಮಂದಿರಗಳು ಮತ್ತು ಅವುಗಳಲ್ಲಿನ ದುರ್ಗೆಯ ಮೂರ್ತಿಗಳು ಇದ್ದು ಅವು ಕ್ರಿಸ್ತಶಕ ಹತ್ತನೆಯ ಶತಮಾನದಷ್ಟು ಪ್ರಾಚೀನವಾಗಿದೆ.

ಈ ಸ್ಥಳಕ್ಕೆ ಸಂಬಂಧಿಸಿದಂತೆ ಶಾಸ್ತ್ರೀಯ ರೂಪದ ಪ್ರಾಗೈತಿಹಾಸಿಕ ಮತ್ತು ಐತಿಹಾಸಿಕ ಅಧ್ಯಯನ, ಅನ್ವೇಷಣೆ ನಡೆದು ಅದು ಜನಸಾಮಾನ್ಯರಿಗೂ ವಿದ್ವಾಂಸರಿಗೂ ಲಭ್ಯವಾಗುವ ಅವಶ್ಯಕತೆ ಇದೆ.

**ಮುತ್ತುರಾಜು**
ನಂ. ೩೩೩೩, ೪೦ ಅಡಿ ಮುಖ್ಯರಸ್ತೆ, ಕುಮಾರಸ್ವಾಮಿ ಬಡಾವಣೆ, ಎರಡನೇ ಹಂತ, ಬೆಂಗಳೂರು-೭೮

## ಸಾದರ ಸ್ವೀಕಾರ

**ಗುರುಗಳಾಗಿ ತಾಯಿ-ತಂದೆ**
*(ಕನ್ನಡ ಮತ್ತು ಇಂಗ್ಲಿಷಿನಲ್ಲಿ)* *ಕೆ. ಟಿ. ಗಟ್ಟಿ*
**ಪುಟ** : ೧೮೪ ಬೆಲೆ : ರೂ. ೧೧೦

**ನಮ್ಮ ಶರೀರ ೨೦೦ ಪ್ರಶ್ನೆಗಳು** *(ವೈದ್ಯಕೀಯ)*
*ಡಾ|| ಸಿ. ಆರ್. ಚಂದ್ರಶೇಖರ್*
**ಪುಟ** : ೧೧೨ ಬೆಲೆ : ರೂ. ೪೫
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಜ್ಯೋತಿಷ್ಯಕ್ಕೆ ಸವಾಲು ಹತ್ತು ಲಕ್ಷ ರೂಪಾಯಿ**
*(ವೈಚಾರಿಕ)* *ಎ. ಎಸ್. ನಟರಾಜ್*
**ಪುಟ** : ೪೦೮ ಬೆಲೆ : ರೂ. ೨೫೦
**ರಾಜ್ ವೈಚಾರಿಕ ವೇದಿಕೆ**, ನಂ. ೪೩, ರೋಹಿಣಿ, ೫ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು - ೭೦

**ಗೋಪಾಲಕೃಷ್ಣ ಗೋಖಲೆ** *(ಪರಿಚಯ)*
*ಡಾ|| ಎಂ. ಪಿ. ಭುವನೇಶ್ವರ ಪ್ರಸಾದ್*
**ಪುಟ** : ೮೮ ಬೆಲೆ : ರೂ. ೬೦
**ಪ್ರಜ್ಞಾ ಪ್ರಕಾಶನ**, ಸಿದ್ದನಹಳ್ಳಿ, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ಕನಸುಗಳು ಜೀವಂತ** *(ಕವನ ಸಂಕಲನ)*
*ಜೆ. ಪ್ರೇಮಾನಂದ*
**ಪುಟ** : ೬೪ ಬೆಲೆ : ರೂ. ೩೫
**ಶ್ರೀ ರಾಘವೇಂದ್ರ ಪ್ರಕಾಶನ**, ಅಂಕೋಲಾ, ಉತ್ತರ ಕನ್ನಡ

**ಒಲಿದಂತೆ ಹಾಡುವೆ** *(ಲೇಖನಗಳು)*
*ಬಿ. ಶರಣಪ್ಪ ಸತ್ಯಂಪೇಟೆ*
**ಪುಟ** : ೪೮ ಬೆಲೆ : ರೂ. ೪೦
**ಅನನ್ಯ ಪ್ರಕಾಶನ**, ಸತ್ಯಂಪೇಟೆ, ಸುರಪುರ - ೫೮೫ ೨೨೪

**ಭಾವಾಂತರಂಗ** *(ಚುಟುಕು ಸಂಕಲನ)*
*ವಿ. ಎಚ್. ವೀರಣ್ಣ ಮಂಠಾಳಕರ್*
**ಪುಟ** : ೬೪ ಬೆಲೆ : ರೂ. ೨೫
**ಹುವಪ್ಲೋರ್ ಪ್ರಕಾಶನ**, ಮಂಠಾಳ - ೫೮೫ ೪೧೯, ಬಸವಕಲ್ಯಾಣ ತಾ., ಬೀದರ ಜಿಲ್ಲೆ.

**ಘಮಘಮಿಸುವ ವನಸುಮ ಡಿ.ವಿ.ಜಿ.** *(ಲೇಖನಗಳು)*
*ಪ್ರೊ|| ಎಚ್. ಎಸ್. ಲಕ್ಷ್ಮೀನಾರಾಯಣಭಟ್ಟ*
**ಪುಟ** : ೫೦
**ಭಾರತೀಯ ಸ್ಟೇಟ್ ಬ್ಯಾಂಕ್**, ಸ್ಥಳೀಯ ಪ್ರಧಾನ ಕಚೇರಿ, ಅಧಿಕೃತ ಭಾಷಾ ವಿಭಾಗ, ಬೆಂಗಳೂರು -೧

**ತಳಿರು ತೋರಣ** *(ಭಾವಗೀತೆಗಳ ಸಂಕಲನ)*
*ಹಂಸಾ ಆರ್.*
**ಪುಟ** : ೭೪ ಬೆಲೆ : ರೂ. ೫೦

**ಚೈತ್ರದಂಗಳದಲ್ಲಿ** *(ಭಾವಗೀತೆಗಳ ಸಂಕಲನ)*
*ಹಂಸಾ ಆರ್.*
**ಪುಟ** : ೭೬ ಬೆಲೆ : ರೂ. ೨೫
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು,*
**ಉತ್ತಮ ಪ್ರಕಾಶನ**, ೫೦೦, ೧೭ನೇ ಅಡ್ಡರಸ್ತೆ, ೪ನೇ ಹಂತ, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

**ನಿತ್ಯ ಆನಂದ ವಚನ** *ಶಿಮುಂಜೆ ಪರಾರಿ*
**ಪುಟ** : ೩೪ ಬೆಲೆ : ರೂ. ೨೫
**ಮನುಕುಲ ಪ್ರಕಾಶನ**, ೧೭, ಉಪಕ್ರಮ್, ಲಿಬರ್ಟಿ ಗಾರ್ಡನ್, ಮಲಾಡ್ (ಪ) ಮುಂಬೈ - ೪೦೦ ೦೬೪

**ಪ್ರೀತಿ ಪ್ರೇಮ ಕಾಮ** *(ಸೂಕ್ತಿ ಸಂಗ್ರಹ)*
*ಸಂ. ಟಿ. ವಿ. ವೆಂಕಟರಮಣಯ್ಯ*
**ಪುಟ** : ೧೬೦ ಬೆಲೆ : ರೂ. ೬೦

**ಜೀವನ ಬದುಕು ಬಾಳು** *(ಸೂಕ್ತಿ ಲೇಖನ ಸಂಗ್ರಹ)*
*ಸಂ. ಟಿ. ವಿ. ವೆಂಕಟರಮಣಯ್ಯ*
**ಪುಟ** : ೧೩೬ ಬೆಲೆ: ರೂ. ೪೦
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು,*
**ಟಿ. ವಿ. ವೆಂಕಟರಮಣಯ್ಯ**, ಇಡಬ್ಲ್ಯುಎಸ್. ೨೧೮, ಕೆ. ಎಚ್. ಬಿ. ಕಾಲೋನಿ, ೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರನಗರ, ಬೆಂಗಳೂರು - ೭೯

# ದೈನ್ಯತೆಯನ್ನು ದೂರ ತಳ್ಳಿದ ಧೀರರು

ಅಂಗವಿಕಲ ಎಂದ ತಕ್ಷಣ, ಅವರು ಕೈ ನೀಡಿ ಬೇಡುವ ಚಿತ್ರವನ್ನು ಕಲ್ಪಿಸಿಕೊಳ್ಳುತ್ತೇವೆ. ಜನಸಂದಣಿಯ ಸ್ಥಳಗಳಲ್ಲಿ, ನಿಂತ ವಾಹನಗಳಲ್ಲಿ, ಚಲಿಸುವ ರೈಲುಗಳಲ್ಲಿ, ಬೀದಿಯ ಬದಿಯಲ್ಲಿ ಕೈನೀಡಿ ಬೇಡುವ ಅಂಗವಿಕಲರನ್ನು ಕಂಡಿದ್ದೇವೆ. ಅಪರೂಪಕ್ಕೆ ಕೆಲವೊಮ್ಮೆ ಕೈ ನೀಡಿ ಬೇಡದೆ, ಸ್ವಾಭಿಮಾನದಿಂದ ತಮ್ಮ ಶ್ರಮಕ್ಕೆ ಮಾತ್ರ ಪ್ರತಿಫಲ ಕೇಳಿ ಬೆರಗುಗೊಳಿಸುವ ಅಂಗವಿಕಲರನ್ನು ಕಂಡಿದ್ದೇವೆ. ಇಂತಹವರಲ್ಲಿ ಸ್ವಾಭಿಮಾನ ಕರಗದ ಬೆಟ್ಟದಷ್ಟಿರುತ್ತದೆ. ಕೈಕಾಲು ಗಟ್ಟಿಯಾಗಿದ್ದೂ, ದುಡಿಯುವ ಶಕ್ತಿ ಇದ್ದೂ, ಬೇಡುವ ಸೋಮಾರಿಗಳು ಇಂತಹ ಸ್ವಾಭಿಮಾನಿಗಳ ಮುಂದೆ ನಾಚಿ ನೀರಾಗಬೇಕಾಗುತ್ತದೆ.

ಹುಟ್ಟಿನಿಂದಲೇ ಅಂಗವಿಕಲರಾದವರು, ಎಳೆತನದಿಂದಲೂ ತಾಯಿ, ತಂದೆ, ಸೋದರ, ಸೋದರಿಯರ ನೆರವಿನಿಂದ ಬೆಳೆದು, ಬೆಳೆಯುತ್ತಾ ಸ್ವಾಭಿಮಾನಿಗಳಾಗಿ ತಮ್ಮ ಕಾಲಮೇಲೆ ತಾವು ನಿಲ್ಲುವುದನ್ನು ಕೇಳಿ ಬಲ್ಲೆವು. ಹೊರಕಣ್ಣು ಕಾಣದ, ಹಲವಾರು ಸಂಗೀತಗಾರರ ಅದ್ಭುತ ಪ್ರತಿಭೆಯ ಬಗ್ಗೆ ಕೇಳಿ ತಿಳಿದಿದ್ದೇವೆ. ಕೆಲವು ಪ್ರತಿಭಾವಂತ ಅಂಧ ಗಾಯಕರನ್ನು ನೋಡಿದ್ದೇವೆ. ಅವರ ಗಾನಸುಧೆಯನ್ನು ಸವಿದು ಆನಂದಿಸಿದ್ದೇವೆ. ಇತ್ತೀಚೆಗೆ ನೃತ್ಯಕಲೆಯಲ್ಲೂ ಪರಿಣತಿ ಪಡೆಯಲು ಶ್ರಮಿಸುವ ಅಂಧ ಗೆಳೆಯರ ಗುಂಪನ್ನು ಕಂಡಿದ್ದೇವೆ. ಇಂತಹವರಿಂದ, ಸ್ವಾಭಿಮಾನ್ಯ ಶೂನ್ಯರಾದ, ಮೈಗಳ್ಳತನವೇ ಮೈವೆತ್ತು ನಿಂತ ಆಜಾನುಬಾಹುಗಳು ಕಲಿಯಬೇಕಾದ್ದು ಬಹಳ.

ಯಾವುದೇ ಕಚೇರಿಯಲ್ಲಿ ಆಗಾಗ್ಗೆ ಏನೇನನ್ನೋ ಮಾರುವವರ ದಾಂಧಲೆ ನಡೆಯುತ್ತಿರುತ್ತದೆ. ಇದು ಯಾವುದೇ ಒಂದು ಕಚೇರಿಗೆ ಮಾತ್ರ ಸಂಬಂಧಿಸಿದ ಕಥೆಯಲ್ಲ. ಎಲ್ಲ ಕಚೇರಿಗಳಲ್ಲೂ ಮಾರಾಟಗಾರರ ದಾಂಧಲೆ ಇರುತ್ತದೆ. ನಮ್ಮ ಕಚೇರಿಗೆ ಒಂದು ಮಧ್ಯಾಹ್ನ ಬಾಗಿಲನ್ನು ತಡವುತ್ತಾ ಗಟ್ಟಿಮುಟ್ಟಾದ ಯುವಕರೊಬ್ಬರು ಪ್ರವೇಶಿಸುತ್ತಿದ್ದಂತೆಯೇ, ಅವರಿಗೆ ಕಣ್ಣು ಸರಿಯಾಗಿ ಕಾಣಿಸುವುದಿಲ್ಲ ಎಂದು ನಾನು ತಿಳಿದೆ. ಬಹುತೇಕ ಅವರು ಯಾರೋ ಸಹಿ ಹಾಕಿದ ಅಂಗವಿಕಲತೆಯ ಸರ್ಟಿಫಿಕೇಟ್ ಹಿಡಿದು, ನೆರವು ಕೇಳಲು ಬಂದಿರಬೇಕು ಎಂದು ಮಾಮೂಲಿನಂತೆ ಊಹಿಸಿದೆ. ಆದರೆ, ಬಂದ ವ್ಯಕ್ತಿ ಸರ್ಟಿಫಿಕೇಟ್ ತೆಗೆಯಲಿಲ್ಲ; ಬದಲಿಗೆ ಒಳ್ಳೆ ಹೊಲಿಗೆಯ, ಗಟ್ಟಿಮುಟ್ಟಾದ ಕೆಲವು ಬ್ಯಾಗ್‌ಗಳನ್ನು ತೆಗೆದು, 'ದಯವಿಟ್ಟು ಕೊಂಡು ಸಹಾಯ ಮಾಡಿ' ಎಂದರು. ನನಗೆ ಆಶ್ಚರ್ಯವಾಯಿತು. ಐದೋ, ಹತ್ತೋ ಕೊಟ್ಟು 'ಭಿಕ್ಷೆ ಬೇಡಬಾರದು' ಎಂದು ಬುದ್ಧಿ ಹೇಳಿ ಕಳುಹಿಸಬೇಕೆಂದಿದ್ದವನು ಸುಸ್ತಾಗಿ ಕುಳಿತೆ. ಹಾಗೆ ಪರಿಚಯವಾದವರು ಶ್ರೀ ಕೆ. ಎಂ. ಗೋಪಾಲ್.

ಶ್ರೀ ಗೋಪಾಲ್ ಹುಟ್ಟಿನಿಂದ ಅಂಗವಿಕಲರಲ್ಲ. ಮಂಡ್ಯದ ಪಿ.ಇ.ಎಸ್. ಕಾಲೇಜಿನಲ್ಲಿ ಎರಡನೆಯ ಪಿ.ಯು.ಸಿ. ತರಗತಿಯಲ್ಲಿ ಓದುತ್ತಿದ್ದಾಗ ನರದೋಷದಿಂದ ಅರೆದೃಷ್ಟಿ ಮಾಂದ್ಯತೆಗೆ ಬಲಿಯಾದ ಗೋಪಾಲ್ ಮಂಡ್ಯ ಜಿಲ್ಲೆಯ ಎಸ್.ಐ. (ಸರ್ವೆ ಇನಾಮತಿ) ಕೋಡಿಹಳ್ಳಿಯ ಮುತ್ತರಾಯ ಶೆಟ್ಟರ ಎರಡನೆಯ ಮಗ. ತಂದೆ ಮತ್ತು ತಾಯಿ ಊರಿನಲ್ಲೇ ಇದ್ದಾರೆ. ಗೋಪಾಲ್‌ಗೆ ಒಬ್ಬ ಅಣ್ಣ ಇದ್ದಾರೆ. ತಮಗೆ ಅರೆಕುರುಡು ಎಂದು ಖಚಿತವಾದ ನಂತರ ಇನ್ನು ತಾವು ಬದುಕಿ ಪ್ರಯೋಜನವಿಲ್ಲ, ತಾವು ಬೇರೆಯವರಿಗೆ ಹೊರೆಯಾಗಿರಬೇಕು ಎಂಬ ಹತಾಶ ಭಾವನೆಯಿಂದ 'ನನ್ನ ಸಾವಿಗೆ ಯಾರೂ ಕಾರಣರಲ್ಲ' ಎಂದು ಪತ್ರ ಬರೆದಿಟ್ಟು, ನೇಣು ಹಾಕಿಕೊಳ್ಳಲು ಪ್ರಯತ್ನಿಸಿದರೆ, ಹಗ್ಗವೇ ಕಡಿದುಹೋಯಿತಂತೆ. ಜೊತೆಗೆ ಯಾರೋ 'ಹೇಡಿ, ಆತ್ಮಹತ್ಯೆ ಸರಿಯಲ್ಲ' ಎಂದು ಹೇಳಿದಂತಾಯಿತಂತೆ. ಪ್ರಾಣ ಕಳೆದುಕೊಳ್ಳುವ ಆಲೋಚನೆಯಿಂದ ದೂರವಾಗಿ, ಬೆಂಗಳೂರಿನಲ್ಲಿ, ಹೊಸೂರು ರಸ್ತೆಯಲ್ಲಿರುವ ಅಂಗವಿಕಲ ಪುನರ್ವಸತಿ ಕೇಂದ್ರದಲ್ಲಿ ಸ್ವಉದ್ಯೋಗ ತರಬೇತಿ ಪಡೆದರು. ಅಲ್ಲಿ ತಮಗೆ ಬದುಕಲು ಕಲಿಸಿದ ಶ್ರೀ ನಾಗರಾಜ್ ಎಂಬ ಉಪಾಧ್ಯಾಯರ ಬಗ್ಗೆ ಗೋಪಾಲ್‌ಗೆ ಬಹಳ ಗೌರವ. ಅಂಗವಿಕಲ ಪುನರ್ವಸತಿ ಕೇಂದ್ರದಲ್ಲಿ ಗೋಪಾಲ್ ತರಬೇತಿ ಪಡೆದದ್ದು ಟೆಲಿಫೋನ್ ಆಪರೇಟರ್ ಕೆಲಸಕ್ಕೆ. ಅಲ್ಲೇ ಅದೇ ವೃತ್ತಿಗೆ ತರಬೇತಿ ಪಡೆಯುತ್ತಿದ್ದ ಒಬ್ಬ ಅಂಗವಿಕಲ ಹೆಣ್ಣುಮಗಳು ನಾಗರತ್ನ ಎನ್ನುವವರನ್ನು ಗೋಪಾಲ್ ಮದುವೆಯಾಗಿದ್ದಾರೆ. ತರಬೇತಿ ಪಡೆದ ನಂತರ ಗೋಪಾಲ್‌ಗೆ ಬದುಕಿನಲ್ಲಿ ಭರವಸೆ ಮೂಡಿತು.

ಒಮ್ಮೆ ಗೋಪಾಲ್‌ಗೆ ಗೆಳೆಯ ಮೋಹನ್ ಎನ್ನುವವರ ಮೂಲಕ ಮೂರು ವರ್ಷಗಳ ಹಿಂದೆ ಚಂದ್ರಕಾಂತ್ ಅವರ ಪರಿಚಯವಾಯಿತು. ಅಂಗವಿಕಲರಿಗೆ ಸಹಾಯ ಮಾಡುವುದು ಚಂದ್ರಕಾಂತ್ ಅವರ ಪ್ರವೃತ್ತಿ. ಅವರು ತಮ್ಮ ತಂದೆಯ ಕಾಲದಿಂದಲೂ ಬೆಂಗಳೂರಿನ ಜನಜಂಗುಳಿಯ ಮೆಜೆಸ್ಟಿಕ್ ಪ್ರದೇಶದಲ್ಲಿ (ಅಂಬಿಕಾ ಬ್ಯಾಗ್ಸ್, ಪೂರ್ಣಯ್ಯ ಛತ್ರಂ ರಸ್ತೆ, ಬಳೇಪೇಟೆ ಕ್ರಾಸ್) ಬ್ಯಾಗ್ ಹೊಲಿದು ಮಾರುವ ವ್ಯಾಪಾರ ಮಾಡುತ್ತಿದ್ದಾರೆ. ಅವರ ಒಬ್ಬ ತಮ್ಮನೂ (ಶಂಕರ್) ಅಂಗವಿಕಲ. ಅವರ ಒಂದು ಕಾಲು ಮತ್ತು ಒಂದು ಕೈ ಪೋಲಿಯೋಗೆ ತುತ್ತಾಗಿ ಊನವಾಗಿದೆ. ತಮ್ಮನಿಗೆ, ತನ್ನ ಕಾಲ ಮೇಲೆ ತಾನು ನಿಲ್ಲಲು ಸಹಾಯ ಮಾಡಿದ ಚಂದ್ರಕಾಂತ್, ತನಗೆ ಗುರುತಾದ ಯಾವ ಅಂಗವಿಕಲರಿಗೇ ಆದರೂ, ತಮ್ಮ ಕೈಲಾದ ನೆರವು ನೀಡುವ ಜಾಯಮಾನದವರು. ಹೀಗಾಗಿ ಗೋಪಾಲ್‌ಗೆ ಚಂದ್ರಕಾಂತ್‌ರ ಸಹಾಯ ಲಭಿಸಿತು. ತಾವೇ ಬ್ಯಾಗ್ ಸಿದ್ಧಪಡಿಸಿ ಕೊಡುವುದಲ್ಲದೆ, ಬ್ಯಾಗ್ ಹೊಲಿಯಲು ತಾವೇ ತರಬೇತಿ ನೀಡಿ, ಬ್ಯಾಗ್ ತಯಾರಿಸಲು ಬೇಕಾದ ಕಚ್ಚಾವಸ್ತುಗಳನ್ನೂ ಚಂದ್ರಕಾಂತ್ ಒದಗಿಸುತ್ತಾರೆ.

ಗೋಪಾಲ್‌ರ ಮೂಲಕ ಚಂದ್ರಕಾಂತ್ ಅವರಿಗೆ, ಇನ್ನೂ ಹಲವು ದೃಷ್ಟಿಹೀನರ ಪರಿಚಯವಾಗಿದೆ. ಅವರಲ್ಲಿ ಶಿವಲಿಂಗಯ್ಯ, ರಮೇಶ್, ರೇಣುಕಯ್ಯ, ಮುನಿಸ್ವಾಮಿ, ಮಂಜುನಾಥ ಅಲ್ಲದೆ, ಮಮತಾ ಮತ್ತು ಮೀನಾಕ್ಷಿ ಎಂಬ ಮಹಿಳೆಯರೂ ಇದ್ದಾರೆ. ಗೋಪಾಲ್‌ಗೆ ನೆರವು ನೀಡುವಂತೆಯೇ ಚಂದ್ರಕಾಂತ್, ಉಳಿದವರಿಗೂ ನೆರವು ನೀಡುತ್ತಾರೆ. ಗೋಪಾಲ್ ಅವರ ಸ್ನೇಹಿತರಲ್ಲಿ ಕೆಲವರು ಬೆಂಗಳೂರಿನಿಂದ ಮೈಸೂರಿನವರೆಗೂ ಪ್ರಯಾಣ ಮಾಡಿ ಬ್ಯಾಗ್ ವ್ಯಾಪಾರ ಮಾಡುತ್ತಾರೆ. ಅವರಿಗೆ ಗೋಪಾಲ್‌ಗಿಂತಲೂ ಹೆಚ್ಚು ವ್ಯಾಪಾರ ಆಗುತ್ತದಂತೆ; ಆದರೆ ಅದರಿಂದ ಗೋಪಾಲ್‌ಗೆ ಅಸಮಾಧಾನವಿಲ್ಲ; ಅಸೂಯೆ ಇಲ್ಲ. ತಮ್ಮ ಜೊತೆಯವರು ತಮಗಿಂತ ಚೆನ್ನಾಗಿರಬೇಕು ಎಂಬ ಆಸೆ ಗೋಪಾಲ್‌ಗೆ.

ಗೋಪಾಲ್ ಮದುವೆಯಾದದ್ದು ಐದು ವರ್ಷಗಳ ಹಿಂದೆ. ಅವರ ಹೆಂಡತಿ ಊದುಬತ್ತಿ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಾರೆ. ಅವರಿಗೆ ತಿಂಗಳಿಗೆ ಸುಮಾರು ಎಂಟು ನೂರು ರೂಪಾಯಿ ಸಂಬಳ. ಗೋಪಾಲ್‌ರ ಸಂಪಾದನೆ ತಿಂಗಳಿಗೆ ಸುಮಾರು ಎರಡು ಸಾವಿರದಿಂದ ಮೂರು ಸಾವಿರ ರೂಪಾಯಿಗಳು. ಓಕಳೀಪುರದಲ್ಲಿ ತಮ್ಮ ಗಳಿಕೆಯ ಹಣದಿಂದಲೇ ಭೋಗ್ಯಕ್ಕೆ ಮನೆಯೊಂದನ್ನು ಪಡೆದು, ಅದರಲ್ಲಿ ಗಂಡ ಮತ್ತು ಹೆಂಡತಿ ಸ್ವಂತ ಉದ್ಯೋಗದ ಕನಸು ಕಾಣುತ್ತಾ ಸುಖವಾಗಿ ಸಂಸಾರ ಮಾಡುತ್ತಿದ್ದಾರೆ.

ತಮಗೆ ಯಾರಾದರೂ ಕರುಣೆ ತೋರಿದರೆ ಭಾವುಕರಾಗುವ ಗೋಪಾಲ್, ತಮ್ಮ ಶ್ರಮಕ್ಕೆ ತಕ್ಕ ಬೆಲೆ ಮತ್ತು ಗೌರವ ಸಿಕ್ಕರೆ ಸಾಕು ಎಂಬ ಮನೋಭಾವದವರು. ತಾವು ದೃಷ್ಟಿಹೀನರು ಎಂಬ ಕಾರಣದಿಂದ, ಕೆಲವರು ತಮಗೆ ಮತ್ತು ತಮ್ಮ ಗೆಳೆಯರಿಗೆ ಮೋಸ ಮಾಡುವುದನ್ನು ಅವರು ತಿಳಿದಿದ್ದಾರೆ. ತಮ್ಮಂತಹವರು ಬೀದಿಬೀದಿಗಳಲ್ಲಿ ಸುತ್ತಿ, ದೂರ ದೂರ ಪ್ರಯಾಣ ಮಾಡಿ ವ್ಯಾಪಾರ ಮಾಡುವುದು ಕಷ್ಟವಾಗುತ್ತದೆ. ಆದ್ದರಿಂದ ಸರ್ಕಾರ ಈ ನಿಟ್ಟಿನಲ್ಲಿ ಅಂಗವಿಕಲರ ಕೈಹಿಡಿದರೆ ಅನುಕೂಲ ಎಂಬ ಅಭಿಪ್ರಾಯ ಗೋಪಾಲ್ ಅವರದು.

ಗೋಪಾಲ್ ಮತ್ತು ಅವರ ಇನ್ನೂ ಹಲವು ಸ್ನೇಹಿತರಿಗೆ ಸಹಾಯ ಮಾಡುವ ಚಂದ್ರಕಾಂತ್‌ರ ಮಗ ಸತೀಶ್‌ಗೂ ತಂದೆಯದೇ ಗುಣ. ಅಂಗವಿಕಲರ ವ್ಯಾಪಾರಕ್ಕೆ ಒಂದು ಒಳ್ಳೆಯ ಮತ್ತು ಸಮರ್ಪಕ ವ್ಯವಸ್ಥೆ ಆಗಬೇಕು ಎಂಬುದು ತಂದೆ ಮತ್ತು ಮಕ್ಕಳ ಆಸೆ.



*ಗೋಪಾಲ್ ಅವರೊಂದಿಗೆ ಸಂದರ್ಶಕ* ಚಿತ್ರ : ಕೆ. ಪಿ. ಸ್ವಾಮಿ

ಸಂದರ್ಶಕ : **ಡಾ|| ಎಚ್. ಎಸ್. ಗೋಪಾಲ ರಾವ್**
'ಸ್ವಸ್ತಿಶ್ರೀ ಸ್ಕಂದ', ಅರಿಶಿನ ಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ತಾಲ್ಲೂಕಿನ ಬೆಗಳ್ಳಿಯಲ್ಲಿ ಕಳೆದ ೨೫ ವರ್ಷಗಳಿಂದಲೂ ಈಚೆಗೆ ಎಣ್ಣೆ ಇಲ್ಲದೆ ಮೂರು ದೀಪಗಳು ಉರಿಯುತ್ತಿವೆ ಎಂದು ಪ್ರಚಲಿತವಾಗಿದೆ. ಈ ದೀಪಗಳು ಉರಿಯಲು ಆರಂಭಿಸಿದ ದಿನಗಳನ್ನು ಮತ್ತೆ ನೆನಪಿಸಿಕೊಳ್ಳುವುದು ಪ್ರಸ್ತುತವೆನಿಸುತ್ತದೆ.

೧೯೭೯ರಲ್ಲಿ ಶಾರದಮ್ಮ ಎಂಬ ಮಹಿಳೆ ಬೆಳಕಿಗಾಗಿ ಮನೆಯಲ್ಲಿ ಹಚ್ಚಿಟ್ಟ ಲಾಂದ್ರಗಳು ಮತ್ತೆ ಆರಲೇ ಇಲ್ಲವಂತೆ. ಬೆಗಳ್ಳಿಯ ಗಿರಿಮಲ್ಲೇಶ್ವರ ಮಠದ ಸಿದ್ಧಾಪುರ ಚನ್ನಬಸವ ಶಾಸ್ತ್ರಿಗಳು ಒಮ್ಮೆ ತಮ್ಮ ಪ್ರವಚನದ ೧೭ನೇ ದಿನ ಊರಿನ ಪ್ರತಿಯೊಬ್ಬರೂ ತಮ್ಮ ತಮ್ಮ ಮನೆಯಲ್ಲಿ ಊಟ ಹಾಕಬೇಕೆಂದು ಸೂಚಿಸಿದರಂತೆ. ಶಾರದಮ್ಮ ಬಡತನದ ಕಾರಣದಿಂದ ಅನ್ನ ಹಾಕಲಾರದೆ ಪ್ರವಚನಕ್ಕೆ ಹೋದಳು. ಹೋಗಬೇಕಾದರೆ ಲಾಂದ್ರವೊಂದನ್ನು ಹಚ್ಚಿಟ್ಟಳು. ಪ್ರವಚನ ಮುಗಿಸಿ ಮನೆಗೆ ಮರಳಿ ಮಲಗುವಾಗ ಅದನ್ನು ಆರಿಸಲು ಪ್ರಯತ್ನಿಸಿದರೆ ಅದರಿಂದ ದೊಡ್ಡ ಶಬ್ದ ಕೇಳಿತಂತೆ. ಆರಿಸಲು ಪ್ರಯತ್ನಪಟ್ಟಷ್ಟೂ ಅದು ಉರಿಯುತ್ತಲೇ ಇತ್ತು. ಶಾರದಮ್ಮ ಈ ವಿಷಯವನ್ನು ಇತರರಿಗೆ ತಿಳಿಸಿದಾಗ ಅವರು ಬಂದು ದೀಪ ಆರಿಸಲು ಪ್ರಯತ್ನಿಸಿದಾಗ ಅದು ಕ್ಯಾರೆ ಅನ್ನಲಿಲ್ಲ. ಮುಂದಿನೆರಡು ವರ್ಷಗಳಲ್ಲಿ ಮತ್ತೆ ಹಚ್ಚಿದ ದೀಪಗಳು ಕೂಡ ಹಿಂದಿನ ದೀಪದಂತೆ ಆರಲೇ ಇಲ್ಲವಂತೆ.

ಬೆಗಳ್ಳಿ ಬಿಟ್ಟರೆ ಹೊರಗಿನ ಜನರಿಗೆ ಈ ವಿಷಯ ತಿಳಿದಿರಲಿಲ್ಲ. ಒಮ್ಮೆ ವಾರಪತ್ರಿಕೆಯೊಂದು ಈ ವಿಷಯವನ್ನು ಮುಖಪುಟ ಸುದ್ದಿಯನ್ನಾಗಿ ಪ್ರಕಟಿಸಿತು. ಆ ಪತ್ರಿಕೆಯಂತೂ ಒಂದಿಷ್ಟೂ ವಿಚಾರ ಮಾಡದೇ ನಿಷ್ಠಾವಂತ ಭಕ್ತನಂತೆ, ಓದುಗರು ಅದನ್ನು ಪವಾಡವೆಂದು ನಂಬಲೇ ಬೇಕಾಗುವಂತೆ ಮತ್ತೆ ಮತ್ತೆ ಉಚ್ಚರಿಸಿತು. ಸರಿ, ಊರ ಪರವೂರ ಮಂದಿ ಭಕ್ತರಾದರು. ಸೀಮೆ ಎಣ್ಣೆ ಪರಿಮಳ ಬಂದಾಗಲೂ ಅದು ಸುಳ್ಳು ಎನ್ನುವ ಮಟ್ಟಕ್ಕೆ ಹೋದರು. ಈಗ ಬೆಗಳ್ಳಿ ಮತ್ತೆ ಸುದ್ದಿಯಲ್ಲಿದೆ. ಮೂರು ದೀಪ ಆರಿ ಹೋಗಿದೆ ಎಂದಲ್ಲ ! ಆರಿಹೋಗುವ ಸ್ಥಿತಿಯಲ್ಲಿದೆ ಎಂದು ! ಅದು ವಿಚಾರವಾದಿಗಳ ಕೈಗೆ ಸಿಕ್ಕಿದೆ ಎಂದು !

೧೯೯೪ರ ಮೇ ೧೨ರಂದು ಶಾರದಮ್ಮ ಸತ್ತು ಹೋದಾಗ (ಕೆಲವರು ಹೇಳುತ್ತಾರೆ ದೀಪದ ಪಾದ ಸೇರಿದ್ದು ಎಂದು) ಆ ದೀಪದ ಮೇಲ್ವಿಚಾರಣೆ (ಎಣ್ಣೆ ಹೊಯ್ಯುವುದು) ನಾಗರತ್ನ ಮತ್ತು ವೆಂಕಟೇಶರಾಯ್ಕರ್ ದಂಪತಿಗಳಿಗೆ ಸೇರಿತು.

ನಂತರದ ಬೆಳವಣಿಗೆಗಳು ಬಹಳ ಶೀಘ್ರವಾಗಿ ಜರುಗಿದವು. ಹಲವಾರು ಮಠಾಧೀಶರುಗಳು ಭೇಟಿ ನೀಡಿದರು. ಭಾರೀ ಕೈಗಾರಿಕಾ ಸಚಿವ ಆರ್. ವಿ. ದೇಶಪಾಂಡೆ ಭೇಟಿ ನೀಡಿ ಈ ಕ್ಷೇತ್ರವನ್ನು ಅಭಿವೃದ್ಧಿ ಪಡಿಸುವಂತೆ ಅಧಿಕಾರಿಗಳಿಗೆ ಹೇಳಿ ಹೋದದ್ದು ಒಂದು ವಿಶೇಷ. ಹೊಸ ವರ್ಷದ ದಿನ ಭೇಟಿ ನೀಡಿದ ದಲೈಲಾಮಾ ೫೦ ಸಾವಿರ ರೂಪಾಯಿಗಳನ್ನು ದೇಣಿಗೆ ನೀಡಿ ಸಂದರ್ಶಕರ ಪುಸ್ತಕದಲ್ಲಿ 'ಈ ಸ್ಥಳಕ್ಕೆ ಭೇಟಿ ನೀಡಿದ್ದು ನನಗೆ ಸಂತೋಷ ತಂದಿದೆ. ಈ ಲಾಂದ್ರಗಳು ಅಜ್ಞಾನವನ್ನು ತೊಡೆದುಹಾಕುತ್ತವೆ' ಎಂದು ಬರೆದರು. ಈ ದೀಪಗಳು ಅಜ್ಞಾನದ ಗೂಡನ್ನು ಸೃಷ್ಟಿಸಿವೆ ಎಂಬುದು ಈ ಲಾಮಾನಿಗೆ ತಿಳಿದಿರಲಿಲ್ಲವೇನೋ ಅಥವಾ ತಿಳಿದು ಕೊಳ್ಳಲು ಇಷ್ಟವಿರಲಿಲ್ಲವೇನೋ!

ದೀಪಗಳು ಎಣ್ಣೆಯಿಂದಲೇ ಉರಿಯುತ್ತವೆ ಎನ್ನುವುದು ಸಾಮಾನ್ಯ ಜ್ಞಾನ. ಲಾಂದ್ರದ ಹೊಗೆ ಗಾಜಿಗೆ ಅಂಟಿಕೊಂಡಿರುವುದು ಸ್ಪಷ್ಟವಾಗಿ ಕಾಣಿಸುತ್ತದೆ. ಅದು ಹೊಗೆ ಬಿಡುತ್ತದೆ ಎಂದಾಗ ಅದರಲ್ಲಿ ಇಂಧನ ಇರಲೇಬೇಕೆನ್ನುವುದು ಸ್ಪಷ್ಟ. ಅದು ಇಂಧನ ಇಲ್ಲದೇ ಉರಿಯುತ್ತದೆ ಎಂದಾದರೆ ಭಾರತದಂಥ ರಾಷ್ಟ್ರಕ್ಕೆ ಬಹಳಷ್ಟು ಲಾಭ ಇದೆ. ಇಂಧನ ಇಲ್ಲದೆ ವಾಹನ ಓಡಿಸಬಹುದು, ಅನಿಯಮಿತ ವಿದ್ಯುತ್ ತೊಂದರೆಯನ್ನು ನಿವಾರಿಸಬಹುದು. ಇಷ್ಟೇ ಏಕೆ, ದೊಡ್ಡ ಕ್ರಾಂತಿಯನ್ನೇ ಮಾಡಬಹುದು.

ಲಾಮಾ, ದೇಶಪಾಂಡೆ, ಪೇಜಾವರರೂ ಬಂದದ್ದು ನಿಜ. ಜೊತೆಗೆ ವಿಜ್ಞಾನಿಗಳೂ ಬಂದಿದ್ದಾರೆ ಎನ್ನುತ್ತಾರೆ ಊರ ಜನ. ವಿಜ್ಞಾನಿಗಳ ಅಭಿಪ್ರಾಯಗಳೇನಾಗಿತ್ತೆಂಬುದು ಆ ಜನಕ್ಕೆ ಗೊತ್ತಿಲ್ಲ. ಅದನ್ನು ಮುಟ್ಟಿದರೆ ತಾನೇ ಪರೀಕ್ಷೆ ಮಾಡಲು ಸಾಧ್ಯ? ವಿಚಾರವಾದಿಗಳು ಅದನ್ನು ಪರೀಕ್ಷೆ ಮಾಡುತ್ತೇವೆ ಎಂದಾಗ ನಾಗರತ್ನ ದಂಪತಿಗಳು ''ನೀವು ಪರೀಕ್ಷೆ ಮಾಡಿ, ಆದರೆ ದೀಪವನ್ನು ಮುಟ್ಟುವ ಹಾಗಿಲ್ಲ. ಅದು ಪವಿತ್ರವಾದ ದೀಪ. ಅದನ್ನು ಮುಟ್ಟಿದರೆ ಅಶುದ್ಧ ವಾಗುತ್ತದೆ. ದೀಪದ ತಳಭಾಗವನ್ನು ನೋಡುವ ಭಾಗ್ಯ ಭಕ್ತರಿಗಿಲ್ಲ'' ಎಂದರಂತೆ. ಅದು ಹಾಗಿರಲಿ, ದೀಪದ ಕಾರುಬಾರು ಹೀಗೇ ಮುಂದುವರಿದರೆ ಮುಂದೆ ದೊಡ್ಡ ದೊಂದು ಕಂದಕ ಸೃಷ್ಟಿಯಾಗುವುದಂತೂ ಗ್ಯಾರಂಟಿ. ಈ ಮಾಹಿತಿ ತಂತ್ರಜ್ಞಾನ ಯುಗದಲ್ಲಿ ಬೆಗಳ್ಳಿ ಮೂಢನಂಬಿಕೆ ಯಿಂದ ಕೂಡಿದ ಪ್ರವಾಸೋದ್ಯಮ ತಾಣವಾದರೆ ಆಶ್ಚರ್ಯವಿಲ್ಲ.

ಬಿದ್ದರೂ ಮುಂಡಾಸು ಮಣ್ಣಾಗಿಲ್ಲ ಎಂಬಂತೆ ಕೆಲವು ಮಹಾನ್ ಭಕ್ತರು ಧರ್ಮದ ಹೆಸರಿನಲ್ಲಿ ಬೆಗಳ್ಳಿ ದೀಪಗಳ ಪರ ವಕಾಲತ್ತ ವಹಿಸಲು ಮುಂದಾದರು. ಪವಾಡ ಬಯಲು ಮಾಡುವವರು ಬಂದಾಗ ನೀವು ಹಿಂದುಗಳಿಗೆ ಸವಾಲು ಹಾಕುತ್ತೀರಿ. ಉಳಿದ ಧರ್ಮ ದವರಿಗೆ ಸವಾಲು ಹಾಕುತ್ತಿಲ್ಲ ಎಂದು ಮೈ ಪರಚಿ ಕೊಂಡರು. ಪೇಜಾವರರು ಇವರಂತೆಯೇ ಪತ್ರಿಕಾ ಗೋಷ್ಠಿಯೊಂದರಲ್ಲಿ ಅನಂತಮೂರ್ತಿ ಬರೆದ ಪತ್ರಕ್ಕೆ ಪ್ರತಿಕ್ರಿಯಿಸಿ 'ವಿಚಾರವಾದಿಗಳು ನಮಗೆಲ್ಲ ಪತ್ರ ಬರೆಯುತ್ತಾರೆ, ಮುಸ್ಲಿಂ ಮೂಲಭೂತವಾದಿಗಳಿಗೆ ಮಾತ್ರ ಪತ್ರ ಬರೆಯುವುದಿಲ್ಲ' ಎಂದು ಹೌಹಾರಿದ್ದು ಬೇರೆ ವಿಷಯ. ಪೇಜಾವರರು ಬೆಗಳ್ಳಿ ದೀಪವನ್ನು ಪರೀಕ್ಷೆಗೊಳಪಡಿಸಬೇಕೆಂದು ಬೇರೊಂದು ಸಂದರ್ಭ ದಲ್ಲಿ ಹೇಳಿದ್ದು ಅವರಿಗೇ ನೆನಪಿಸಬೇಕಾಗಿದೆ.

ಇತ್ತೀಚಿನ ಬೆಳವಣಿಗೆಯ ಪ್ರಕಾರ, ದಕ್ಷಿಣ ಕನ್ನಡ ಜಿಲ್ಲಾ ವಿಚಾರವಾದಿ ಸಂಘ, ಉತ್ತರ ಕನ್ನಡದ ಕೆಲವು ಎಡಪಂಥೀಯ ಸಂಘಟನೆಗಳು, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನವರೂ ಸೇರಿ ಉತ್ತರ ಕನ್ನಡ ಜಿಲ್ಲಾಧಿಕಾರಿಗೆ ದೀಪದ ತಪಾಸಣೆಗಾಗಿ ಅನುಮತಿ ಕೋರಿ ಪತ್ರ ಬರೆದಿದ್ದಾರೆ. ಈಗೇನೋ ಅನುಮತಿ ಇದೆಯಂತೆ. ಕಡೆಗೂ ಸಮಿತಿಯೊಂದು ರಚನೆಯಾಗಿದೆ. ಸೂಕ್ತ ಪೊಲೀಸ್ ಭದ್ರತೆಯೊಂದಿಗೆ ಪೂರ್ವನಿರ್ಧಾರಿತವಲ್ಲದ ದಿನ ಪರೀಕ್ಷೆ ನಡೆಸಲು ಸಿದ್ಧತೆಯಾಗಲಿದೆ.

ದೇವರ ಹೆಸರಿನಲ್ಲಿ ನಡೆಯುವ ಈ ಮೂಢನಂಬಿಕೆಯ ಪ್ರಕ್ರಿಯೆಗೆ ತೆರೆ ಬೀಳಲಿದೆ. ರಾಯ್ಕರ್ ದಂಪತಿ ಬೀದಿಗೆ ಬರಲಿದ್ದಾರೆ.

**ಇತ್ತೀಚಿಗೆ ಬೆಳವಣಿಗೆ**

ಕಳೆದ ಮೇ ೧೪ರಂದು ಬೆಳಿಗ್ಗೆ ಮಂಗಳೂರಿನ ನರೇಂದ್ರನಾಯಕ್ ಅವರೂ ಸೇರಿದಂತೆ ಅವರ ಐದು ಜನರ ತಂಡ ಬೆಗಳ್ಳಿಯ ಮಾಯಾ ಲಾಂದ್ರದ ಸ್ಥಳಕ್ಕೆ ಬಂದಾಗ ನಾಗರತ್ನ ದೀಪವನ್ನು ಅವರಿಗೆ ತೋರಿಸಲು ಒಪ್ಪಲಿಲ್ಲ. ಊರಿನವರು ನಾಗರತ್ನಳ ಮೇಲೆ ಒತ್ತಡ ತಂದರೂ ಆಕೆ ಬಿಡಲಿಲ್ಲ.

ಊರಿನವರ ಈ ಬೆಳವಣಿಗೆಗಳಿಂದ ಇತ್ತೀಚೆಗೆ ಬೆಗಳ್ಳಿಯ ನಾಗರಿಕರಿಗೂ ವೈಜ್ಞಾನಿಕ ಮನೋ ಭಾವನೆ ನಿಧಾನವಾಗಿ ಮೂಡಿಬರುತ್ತಿದೆ. ಮುಂಡ ಗೋಡದ ನಾಗರಿಕರಿಗೆ ಬೆಗಳ್ಳಿ ಅಮರವಾಗಬೇಕು ಇಲ್ಲವೇ ದೀಪದ ನಿಜ ಬಣ್ಣ ಬಯಲಾಗಬೇಕು ಎಂಬ ಕಳಕಳಿ ಇದೆ. ಇದೀಗ ಬಹಳಷ್ಟು ಜಾಗೃತಗೊಂಡಿರುವ ಗ್ರಾಮಸ್ಥರು ನಾಗರತ್ನ ಮತ್ತು ಅವರ ಮನೆಯವರ ವರ್ತನೆಯಿಂದ ಅನುಮಾನಪಡಲು ಆರಂಭಿಸಿದ್ದಾರೆ, ಸಂಶಯಗಳು ತಲೆ ಎತ್ತಿವೆ. ನಾಗರತ್ನ ದಂಪತಿಗಳು ಅನಾಯಾಸವಾಗಿ ಹಣ ಸಂಗ್ರಹಿಸುತ್ತಿರುವ ವಿಷಯ ಈಗ ಬಯಲಾಗುತ್ತಿದೆ.

ಶ್ರೀ ನರೇಂದ್ರನಾಯಕ್ ಹೇಳುವಂತೆ, ಇದೊಂದು ಸುಳ್ಳು ಪವಾಡ. ದೀಪವನ್ನು ಹತ್ತಿರದಿಂದ ನೋಡಿದಾಗ ಎಣ್ಣೆಯ ಜಿಡ್ಡು ಕಾಣಸಿಕ್ಕಿದೆ. ಮಾತ್ರವಲ್ಲದೆ ಕೆಲವು ವಾರಗಳ ಹಿಂದೆ ದೀಪವೊಂದು ಆರಿಹೋಗಿದ್ದನ್ನು ದೀಪ ಸಮಿತಿಯವರೇ ಒಪ್ಪಿಕೊಳ್ಳುತ್ತಾರೆ. ನಂತರ ಅದನ್ನು ಕಡ್ಡಿ ಮೂಲಕ ಹಚ್ಚಿರುವುದನ್ನು ಅವರೇ ಒಪ್ಪಿಕೊಳ್ಳುತ್ತಾರೆ. ಹೀಗೆಲ್ಲ ಇರಬೇಕಾದರೆ ಬೆಗಳ್ಳಿಯ ವಿವಾದ ಮುಗಿಯುವ ಹಂತಕ್ಕೆ ಬಂದಿದೆ.

# ಬೆಗಳ್ಳಿ ದೀಪ ಬೀದಿಗೆ ಬಂದಿದೆ

ಎ. ರಾಧಾಕೃಷ್ಣ
ಆನೆಗುಂಡಿ, ಕೈರಂಗಳ ಅಂಚೆ, ಬಂಟ್ವಾಳ - ೫೭೪೧೫೩

## ತುಳಿತ

'ತುಳಿ' ಎಂಬ ಕ್ರಿಯಾಪ್ರಕೃತಿಗೆ 'ತ' ಭಾವಾರ್ಥದ ಕೃತ್ಪ್ರತ್ಯಯ ಸೇರಿ 'ತುಳಿತ' ಎಂಬ ಕೃದಂತ ಭಾವನಾಮವಾಗುತ್ತದೆ. ಈ ತುಳಿತ ಎಂಬ ಶಬ್ದದ ಅರ್ಥವ್ಯಾಪ್ತಿಯನ್ನು ಹುಡುಕುತ್ತ ಹೋದ ಹಾಗೆ ಮೆಟ್ಟು, ಅದುಮು, ಒದೆ, ಸದೆ, ಹತ್ತಿಕ್ಕು, ಹಿಂಸೆ, ತೊಂದರೆ, ಘಟ್ಟಿಸು ಎಂಬ ನಾನಾ ಅರ್ಥವನ್ನು ಕೊಡುತ್ತಾ ಹೋಗಬಹುದು. ಈ ತುಳಿತ ಎಂಬ ಶಬ್ದವು ಬರಿ ಶಬ್ದದ ಅರ್ಥಕ್ಕೆ ಇಲ್ಲವೆ ವ್ಯಾಕರಣ ಪ್ರಯೋಗಕ್ಕೆ ಮಾತ್ರ ಸೀಮಿತವಾಗಿರದೆ ಇದು ನಮ್ಮ ಕ್ರಿಯಾಪ್ರಪಂಚದ ಮೇಲೆ ಮತ್ತು ಭಾವ ಪ್ರಪಂಚದ ಮೇಲೆ ಅಗಾಧವಾದ ಕೆಲಸವನ್ನು ಮಾಡುತ್ತದೆ. ಈ ಕುರಿತು ವಿಶ್ಲೇಷಿಸಿದಾಗ ನಮ್ಮ ಜೀವನದ ಕ್ರಿಯೆ ಆರಂಭವಾಗುವುದು ತುಳಿತದ ಮೂಲಕ ಇಲ್ಲವೆ ಮೆಟ್ಟುವುದರ ಮೂಲಕ. ತುಳಿತವಿಲ್ಲದೆ ದಾರಿಯನ್ನು ಕ್ರಮಿಸಲು ಸಾಧ್ಯವಿಲ್ಲ. ತುಳಿತವಿಲ್ಲದೆ ಜೀವನದ ಮುನ್ನಡೆಯಿಲ್ಲ. ಜಡ ವಸ್ತುವೆ ಆಗಲಿ ಚೇತನವೇ ಆಗಲಿ ತುಳಿಯುವುದರಿಂದಲೇ ಅದಕ್ಕೆ ಸಾಕಾರ ರೂಪ ಬರುತ್ತದೆ. ಉದಾಹರಣೆಗೆ, ಸುಂದರವಾದ ಮಣ್ಣಿನ ಗೋಡೆಯನ್ನು ನಿರ್ಮಿಸುವಾಗ ನೀರನ್ನು ಹಾಕಿ ಮಣ್ಣನ್ನು ಹದ ಮಾಡಿ ತುಳಿಯುವುದರಿಂದಲೇ ಅದು ಪಕ್ವವಾಗಿ ಅದಕ್ಕೊಂದು ವಿಶಿಷ್ಟವಾದ ಬಣ್ಣ ಬಂದು ಸಾಕಾರವಾದ ಗೋಡೆಯ ನಿರ್ಮಾಣಕ್ಕೆ ಕಾರಣವಾಗುತ್ತದೆ. ಮಣ್ಣಿನ ಪ್ರತಿಮೆಯೂ ಅಷ್ಟೆ. ಹಾಗೆಯೆ ಗಿಡ ನೆಡುವಾಗ ಅದರ ಬುಡದಲ್ಲಿ ಚೆನ್ನಾಗಿ ಮೆಟ್ಟುವುದರಿಂದಲೇ ಗಾಳಿಯಿಂದ ರಕ್ಷಣೆ ಪಡೆದು ಬಲಿಷ್ಠವಾದ ಬೇರನ್ನು ಬಿಟ್ಟು ಸದೃಢವಾಗಿ ಕಂಗೊಳಿಸುವುದಿಲ್ಲವೆ ? ಎಲ್ಲದಕ್ಕೂ ತುಳಿತವೇ ಮೂಲ ಪ್ರೇರಣೆ; ಬಲ ಶಕ್ತಿಯನ್ನು ಕೊಡುತ್ತದೆ ಎಂದಾಯಿತು. ಈ ಕ್ರಿಯಾ ಪ್ರಪಂಚದಿಂದ ಸರಿದು ಈ ತುಳಿತವು ನಮ್ಮ ಭಾವ ಪ್ರಪಂಚದಲ್ಲಿ ಒಳನುಸುಳಿದಾಗ ಪ್ರತ್ಯಕ್ಷ ಪರೋಕ್ಷವಾಗಿ ತನ್ನ ತುಳಿತವನ್ನು ಪ್ರಾರಂಭಿಸುತ್ತದೆ. ಅದು ಸಾಹಿತ್ಯಕ್ಷೇತ್ರ ಇರಲಿ, ಸಂಗೀತವಿರಲಿ, ವಿಮರ್ಶಾ ರಂಗವಿರಲಿ, ರಾಜಕೀಯ, ಶೈಕ್ಷಣಿಕ ಯಾವುದೇ ವ್ಯಾವಹಾರಿಕ ಕ್ಷೇತ್ರ ತೆಗೆದುಕೊಂಡರೂ ತನ್ನ ವಿಶಿಷ್ಟವಾದ ಛಾಪನ್ನು ಒತ್ತುತ್ತದೆ. ಹೇಗೆ ? ಏಕೆ ? ಎಂಬ ಪ್ರಶ್ನೆಗಳು ಬಂದಾಗ ಅವೆಲ್ಲವೂ ಅನುಭವವೇದ್ಯವಾದ ವಿಚಾರಗಳು, ತಮ್ಮೊಳಗೆ ಪ್ರಶ್ನಿಸಿಕೊಂಡಾಗ ಸಮಂಜಸವಾದ ಉತ್ತರ ಸಿಕ್ಕೀತು ಎಂದೆನ್ನಬಹುದು.



ಇದೇ ತುಳಿತವು ಶೋಷಣೆಯತ್ತ ಮುಖ ಮಾಡಿದಾಗ ಆ ಸತ್ಯದ ಮುಖದಲ್ಲಿ ಹೇಗೆ ಅನಾವರಣಗೊಳ್ಳುತ್ತದೆ ಎಂಬುದನ್ನು ಕವಿ 'ವಿ. ಗ. ನಾಯಕ'ರ ಕವನದ ಮೂಲಕ ವ್ಯಕ್ತಪಡಿಸಬಹುದು.

*ಪಾಪದ ಚೆಂಡುಗಳು / ಯಾರ್‍ಯಾರದೋ / ಕಾಲ್ತುಳಿತಕ್ಕೆ*
*ಸಿಕ್ಕಿ ಮುದ್ದೆ / ಚರ್ಮವಾಗಿ ಹೋಗುತ್ತವೆ / ಆದರೂ / ಅದೇ*
*ಜನ ಮತ್ತೆ / ಬರುತ್ತಾರೆ ಗಾಳಿ ಹಾಕುತ್ತಾರೆ / ಅಷ್ಟಕ್ಕೆ ಅವು*
*ಎಲ್ಲ ಮರೆತು / ನಗುತ್ತವೆ / ಮೈ / ದುಂಬಿಕೊಳ್ಳುತ್ತವೆ / ಯಥಾ*
*ಪ್ರಕಾರ ಒದೆತಕ್ಕೆ ಬಲಿ / ಆಗುತ್ತವೆ / ಆಗುತ್ತಲೇ ಇರುತ್ತವೆ /*

ಕವಿ ಬಳಸುವ ವಸ್ತು ಸಾಮಾನ್ಯ ತರದ್ದು. ಈ ಮೂಲಕ ಬೀಸುವ ಅರ್ಥ ಭಾವ ಗಂಭೀರ ಸ್ವರೂಪದ್ದು. ಕಾಲ್ಚೆಂಡಿನ ಆಟದಲ್ಲಿ ಆಡುವವರ ಕಾಲಿನಿಂದ ಒದೆಸಿಕೊಳ್ಳುವುದು ಆ ಚೆಂಡುಗಳ ಪಾಪದ ಬದುಕು. ಆಡುವವರು, ನೋಡುವವರು ಮಜಾಧಾರಿಗಳಾಗಿ ಇರುತ್ತಾರೆ. ಆಟ ಒಮ್ಮೆಗೆ ಕೊನೆಗೊಳ್ಳುವುದಿಲ್ಲ. ಒದೆತ ತಿಂದು ಚಪ್ಪಟೆಯಾದಾಗ ಗಾಳಿ ತುಂಬುತ್ತಾರೆ. ಒದೆತವನ್ನು ತಿಂದು ಮತ್ತೆ ಹಿಗ್ಗಿಕೊಳ್ಳುತ್ತದೆ. ಒದೆತ ತಿಂದು ಅಭ್ಯಾಸವಾದ ಚೆಂಡು ಇದೇ ತನ್ನ ಬದುಕು ಎಂದುಕೊಳ್ಳುತ್ತದೆ. ಈ ಸಮಾಜದ ವ್ಯವಸ್ಥೆಯಲ್ಲಿ ಸತ್ಯ, ಧರ್ಮ, ದೇವರು, ನ್ಯಾಯ, ನೀತಿಯ ಆಚರಣೆಯಲ್ಲಿ, ಈ ಕ್ರೂರ ಶೋಷಣೆಗೆ ತತ್ತರಿಸುವ ಪಾಪದವರನ್ನು ಕವಿ ಪಾಪದ ಚೆಂಡುಗಳು ಎಂದು ಸಂಕೇತಿಸಿ ಅರ್ಥಪೂರ್ಣವಾದ ಈ ಪ್ರತಿಮೆಯಿಂದ ಸ್ಫುರಿಸುವ ಭಾವ ಪರಿಣಾಮಕಾರಿಯಾದುದು. ಕವಿಯ ಕನಿಕರ ಇಲ್ಲಿ ಮಡುಗಟ್ಟಿದೆ.

ಇದೇ ತುಳಿತವು ಪಾರಮಾರ್ಥಿಕ ಹಾದಿಯನ್ನು ತುಳಿದ ಸಂತ, ಮಹಾಪುರುಷರ ಜೀವನವನ್ನು ಪ್ರವೇಶಿಸಿದಾಗ ಅವರು ತನ್ನಲ್ಲಿರುವ ದುರ್ಗುಣಗಳನ್ನು ದುಷ್ಟ ಗುಣಗಳನ್ನು ತುಳಿದು ಒಳಗಿನ ಕೊಳೆಯನ್ನು ತೊಳೆದು ಮಾದರಿಯಾಗಿ ನಿಲ್ಲುತ್ತಾರೆ. ಸಂತ ಕವಿ ಶಿಶುನಾಳ ಶರೀಫರು 'ಹಾವು ತುಳಿದೆನೇ ಮಾನಿನೀ ಹಾವು ತುಳಿದೆನೇ' ಎಂಬ ಪ್ರತಿಮೆಯ ಮೂಲಕ ತುಳಿಯುವುದು ಯಾವುದು ಎಂದು ಅರ್ಥಪೂರ್ಣವಾಗಿ ವಿವರಿಸುತ್ತಾರೆ.

ಇಲ್ಲಿ ನಾವು ತುಳಿಯಬೇಕಾದದ್ದು ಶ್ರೀಸಾಮಾನ್ಯರನ್ನಲ್ಲ. ನಮ್ಮ ಒಳಗಿನ ಕೊಳೆಯನ್ನು ತುಳಿಯುವ ಕೆಲಸವಾಗಬೇಕು. ಆತ್ಮದಿಂದಲೇ ಆತ್ಮದ ಉದ್ಧಾರವಾಗಬೇಕು. ಬೇಕಾದವರನ್ನು ಎತ್ತುವ ಬೇಡವಾದವರನ್ನು ತುಳಿಯುವ ಕೆಲಸ ನಿಲ್ಲಬೇಕು. ಪರಸ್ಪರರು ಅರ್ಥೈಸಿಕೊಂಡು ನಡೆದಾಗ ಬದುಕು ಅರ್ಥಪೂರ್ಣವಾಗುತ್ತದೆ.

**ನಾರಾಯಣ ಹೆಗಡೆ**
ಅಧ್ಯಾಪಕರು, ಶ್ರೀಸೀತಾರಾಘವ ಪದವಿಪೂರ್ವ ವಿದ್ಯಾಲಯ, ಅಂಚೆ : ಪೆರ್ನಾಜೆ - ೫೭೪ ೨೨೩

---

## ಅಸಂತೋಷ

"ಅಸಂತೋಷಃ ಶ್ರಿಯೋ ಮೂಲಂ" (ಅತೃಪ್ತಿಯೇ ಸಂಪತ್ತಿಗೆ ಕಾರಣ) ಎಂಬುದೊಂದು ಸೂಕ್ತಿ. ಮಹಾಭಾರತದಲ್ಲಿ ಬರತಕ್ಕದ್ದು. ಕನ್ನಡ ನವೋದಯದ ಆಚಾರ್ಯ 'ಶ್ರೀ' ಯವರು ತಮ್ಮೊಂದು ಭಾಷಣದಲ್ಲಿ ಉದ್ಗರಿಸುತ್ತಾರೆ : "ನನಗೆ ಯಾವ ಬ್ರಹ್ಮರಾಕ್ಷಸನು 'ಸ್ವಲ್ಪಕ್ಕೆ ತೃಪ್ತನಾಗಬೇಡ' – 'ಅಸಂತೋಷಃ ಶ್ರಿಯೋ ಮೂಲಂ' ಎಂದು ಕಿವಿಯಲ್ಲಿ ಊದಿ ಹೋದನೋ ಕಾಣೆ." ಕನ್ನಡದ ಕೆಲಸವನ್ನು 'ಶ್ರೀ' ಯವರಿಂದ ಅಷ್ಟೊಂದು ಅದ್ಭುತವಾಗಿ ಮಾಡಿಸಿದ್ದು ಪ್ರಾಯಃ ಈ ಅತೃಪ್ತಿಯೇ. ಅದೇ ಪ್ರಗತಿ ಮಂತ್ರ; ಪರಿಪೂರ್ಣತೆಯ ಸೂತ್ರ. 'ನಾಲ್ಪೇ ಸುಖಮಸ್ತಿ, ಭೂಮೈವ ತತ್ಸುಖಂ" (ಅಲ್ಪದಲ್ಲಿ ಸುಖವಿಲ್ಲ, ಭೂಮದಲ್ಲಿದೆ) ಎನ್ನುತ್ತದೆ, ಉಪನಿಷತ್ತು. ಮನುಷ್ಯ ಅಲ್ಪತೃಪ್ತನಾಗದೆ, ಭೂಮಕ್ಕೆ ಗುರಿಯಿಡಬೇಕು. ಬೆಟ್ಟವನ್ನು ಗುರಿಯಾಗಿಟ್ಟುಕೊಂಡರೆ, ಕಡೆಗೆ ಗುಡ್ಡವನ್ನಾದರೂ ಸಾಧಿಸಬಹುದು. ಸದಾ ಮುಂದುಮುಂದಕ್ಕೆ ಸಾಗುತ್ತಿರುವುದೇ ಜೀವಂತ ಬದುಕಿನ ಲಕ್ಷಣ. ಒಂದರ್ಥದಲ್ಲಿ ಅಸಂತುಷ್ಟಿಯೇ ಬದುಕು; ಸಂತುಷ್ಟಿಯೆ ಸ್ಥಗಿತತೆ, ಸಾವು!

ಸ್ವಾರಸ್ಯವೆಂದರೆ, "ಅಸಂತೋಷಃ ಶ್ರಿಯೋ ಮೂಲಂ" ಎಂಬ ಮಾತನ್ನು ಮಹಾಭಾರತದಲ್ಲಿ ಆಡುವವನು ದುರ್ಯೋಧನ! (ಅದರಿಂದ ಅದನ್ನು 'ಸೂಕ್ತಿ' ಎಂದು ಕರೆಯಲು ಹಿಂಜರಿಯಬೇಕಾಗುತ್ತದೆ!) ಅದು ಅವನ ಸ್ವಭಾವಕ್ಕೆ, ಹುಟ್ಟುಗುಣಕ್ಕೆ ಅನುಗುಣವಾಗಿದೆ. ರಾಜಸೂಯ ಯಾಗ ಸಂದರ್ಭದಲ್ಲಿ ಪಾಂಡವರ ಏಳಿಗೆಯನ್ನು ಕುರಿತ ತನ್ನ ಅಸೂಯೆಯನ್ನು ಸಮರ್ಥಿಸಿಕೊಳ್ಳುವುದಕ್ಕೆ ಅವನು ಹಾಗೆ ಹೇಳುತ್ತಾನೆ. ಅಷ್ಟೇ ಅಲ್ಲ, "ರಾಜರು ಯಾವಾಗಲೂ ಸ್ವಾರ್ಥವನ್ನು ಚಿಂತಿಸಬೇಕು", "ಹಗೆಗಳ ವಿಷಯದಲ್ಲಿ ಅಸೂಯೆ ಪಡೆದವನು ಅಧಮ" ಎಂದೂ ನಂಬಿದವನು, ದುರ್ಯೋಧನ! ಅವನ ಅತ್ಯಾಶೆ, ಅಸೂಯೆ, ಅಸಹನೆ, ಸ್ವಾರ್ಥಗಳೇ ಅವನನ್ನು ಮುಂದೆ ಬಲಿ ತೆಗೆದುಕೊಂಡ ದುರಂತ ಯಾರಿಗೆ ತಿಳಿಯದು ?

ಈ ಹಿನ್ನೆಲೆಯಲ್ಲಿ ನೋಡಿದಾಗ, ಜೀವನದಲ್ಲಿ ಅತೃಪ್ತಿ ಬೇಕೆ, ಬೇಡವೇ ? ದುರ್ಯೋಧನನಲ್ಲಿದ್ದಂತಹ ಅತೃಪ್ತಿ ಖಂಡಿತ ಬೇಡ; ಆದರೆ 'ಶ್ರೀ' ಯವರು ಸೂಚಿಸುವಂಥ ಅತೃಪ್ತಿ ಬೇಕು. ಎಂದರೆ, ಅತೃಪ್ತಿ ಒಳ್ಳೆಯದಿರಬಹುದು, ಕೆಟ್ಟದ್ದಿರಬಹುದು; ಇತ್ಯಾತ್ಮಕವಾದುದಿರಬಹುದು, ನೇತ್ಯಾತ್ಮಕವಾದುದಿರಬಹುದು. ಒಳ್ಳೆಯ ಇತ್ಯಾತ್ಮಕ ನೆಲೆಯ ಅತೃಪ್ತಿಯಿಂದ ಬಾಳಿಗೆ ಏಳಿಗೆ, ಹಿತ; ಕೆಟ್ಟ ಅತೃಪ್ತಿಯಿಂದ ಅನರ್ಥಸರಣಿ. ನಮ್ಮ ಅಸಂತೋಷ ಇನ್ನೊಬ್ಬರ ಅಭ್ಯುದಯವನ್ನು ಕುರಿತ ಹೊಟ್ಟೆಕಿಚ್ಚಾಗಬಾರದು ; ಕೊನೆಗಾಣದ ಲೋಭವಾಗಿ ಪರಿಣಮಿಸಬಾರದು.

ಇಲ್ಲಿ ಗಮನಿಸಬೇಕಾದ ಇನ್ನೊಂದು ಸತ್ಯವಿದೆ. ವ್ಯಷ್ಟಿ ಜೀವನದಲ್ಲಿ ಅತೃಪ್ತಿ ಕೆಲವೊಮ್ಮೆ ಇಷ್ಟವಿರಬಹುದು, ಕೆಲವೊಮ್ಮೆ ಅನಿಷ್ಟವಿರಬಹುದು; ಆದರೆ ಸಮಷ್ಟಿ ಜೀವನದಲ್ಲಿ ಅದು ಯಾವಾಗಲೂ ಅತ್ಯಗತ್ಯ; ಶ್ರೇಯಸ್ಕರ. ಒಂದು ಸಮಾಜ, ಒಂದು ದೇಶ ಸಮೃದ್ಧವಾಗುವುದು, ಸಂಪದ್ಭರಿತವಾಗುವುದು ಅಸಂತೃಪ್ತಿಯಿಂದಲೇ. ರಾಷ್ಟ್ರದ ಮುನ್ನಡೆಗೆ ಕಡೆ ಎಂಬುದಿಲ್ಲ.

"ಸಂತುಷ್ಟೋ ಯೇನಕೇನ ಚಿತ್", "ಹಾಸಿಗೆಯಿದ್ದಷ್ಟು ಕಾಲು ಚಾಚು" ಮುಂತಾದ ನುಡಿಗಳನ್ನು ಮರೆಯಬೇಕಿಲ್ಲ; ಆದರೆ ಆ ನಿಲುವನ್ನು ಮೀರಬೇಕಾದ ಸಂದರ್ಭಗಳು ಇರುತ್ತವೆ. ಒಟ್ಟಿನಲ್ಲಿ ಅತೃಪ್ತಿ ಆರೋಗ್ಯಕರವಾಗಿದ್ದು ಅಮೃತತ್ವಕ್ಕೊಯ್ಯಬೇಕು; ವಿಷ ವೃಕ್ಷವಲ್ಲ. ಇನ್ನೊಬ್ಬರ ಸುಖಕ್ಕೆ ಕಲ್ಲು ಹಾಕುವ, ಅಂತಿಮವಾಗಿ ಆತ್ಮನಾಶಕ್ಕೆ ಕಾರಣವಾಗುವ ಅಸಂತೋಷ ಯಾರಿಗೂ ಆದರ್ಶವಾಗಬಾರದು.

"ಸಂತೋಷಂ ಜನಯೇತ್ ಪ್ರಾಜ್ಞಃ" (ಬಲ್ಲವನು ಸಂತೋಷವನ್ನುಂಟು ಮಾಡಬೇಕು) ಎಂಬ ಸೂಕ್ತಿಯೂ ಸ್ಮರಣೀಯ. ವ್ಯಕ್ತಿ ತಾನೂ ಸಂತೋಷ ಪಡಬೇಕು, ಇತರರಿಗೂ ಸಂತೋಷ ಕೊಡಬೇಕು. ಅದೇ ಈಶ್ವರ ಪೂಜೆ. ಈ ರಹಸ್ಯವನ್ನರಿಯದೆ ಹಾಳಾದವನು ದುರ್ಯೋಧನ. (ಆದರೆ ತಾನು ಮಾಡುತ್ತಿರುವುದು ತಪ್ಪು ಎಂಬುದು ಅವನಿಗೆ ಚೆನ್ನಾಗಿ ಗೊತ್ತಿತ್ತು!) ಯಾರೂ ಅವನ ಹಾದಿಯನ್ನು ಹಿಡಿಯಬಾರದು.

**ಡಾ|| ಸಿ. ಪಿ. ಕೃಷ್ಣಕುಮಾರ್**
ಮೈಸೂರು

**HOSATHU** Kannada Monthly / December 2002 Rs. 10

RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14

ಕನ್ನಡದಲ್ಲೊಂದು ಅಪೂರ್ವ ಸಾಧನೆ

ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ

# ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ

ಜ್ಞಾನ-ವಿಜ್ಞಾನ ತಂತ್ರಜ್ಞಾನದ ಸರಳ ಸಚಿತ್ರ ನಿರೂಪಣೆ

ಪ್ರಧಾನ ಸಂಪಾದಕರು
ಪ್ರೊ॥ ಎಂ. ಎ. ಸೇತುರಾವ್
ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್

ಜನಪ್ರಿಯ ಎರಡನೇ ಮುದ್ರಣ

ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ 1

ಡೆಮ್ಮಿ ¼ ಆಕಾರದ 740 ಪುಟಗಳು
(ವಿಷಯ ಸೂಚಿ ಸೇರಿ)

ಸಲಹಾ ಮಂಡಳಿ ಸದಸ್ಯರು : ಪ್ರೊ॥ ಜಿ. ಆರ್. ಲಕ್ಷ್ಮಣರಾವ್, ಪ್ರೊ॥ ಅಡ್ಯನಡ್ಕ ಕೃಷ್ಣಭಟ್ ಶ್ರೀ ಕೊಳ್ಳೇಗಾಲ ಶರ್ಮ, ಡಾ॥ ಕೆ. ವಿ. ವೆಂಕಟರಾಮು, ಶ್ರೀ ಸಿ. ಆರ್. ಕೃಷ್ಣರಾವ್

ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ 2

ನಾಲ್ಕು ಸಂಪುಟಗಳಲ್ಲಿ... 33 ಪರಿಣತ ವಿಜ್ಞಾನ ಲೇಖಕರ

- 824 ಲೇಖನಗಳು
- 1,586 ವರ್ಣಚಿತ್ರಗಳು
- 150 ವಿಜ್ಞಾನಿಗಳ ಪರಿಚಯ
- 328 ಮಾಹಿತಿ ಅಂಕಣಗಳು
- 31 ನಿಮಗೆ ತಿಳಿದಿರಲಿ ಅಂಕಣಗಳು
- ನೊಬೆಲ್ ಪ್ರಶಸ್ತಿ ವಿಜೇತರು

**ಹೊಸತು**
ಮಾಸಪತ್ರಿಕೆಗೆ ಮೂರು ವರ್ಷದ ಚಂದಾ ಹಣ ರೂ. 250/- ನೀಡಿ ಜ್ಞಾನ-ವಿಜ್ಞಾನ ಕೋಶದ ಬೆಲೆಯ ಮೇಲೆ 20% ರಿಯಾಯಿತಿ ಪಡೆಯಿರಿ




4 ಸಂಪುಟಗಳ
ಒಟ್ಟು ಬೆಲೆ : ರೂ. 1800

ಕೆಲವು ಅಭಿಪ್ರಾಯಗಳು

ಅನೇಕ ಶ್ರೇಷ್ಠ ಕೃತಿಗಳನ್ನು ಕನ್ನಡಕ್ಕೆ ಕೊಟ್ಟಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆ ಈಗ ಭಾರತ ಸ್ವಾತಂತ್ರ್ಯದ ಸುವರ್ಣೋತ್ಸವದ ನೆನಪಿಗಾಗಿ ಇನ್ನೊಂದು ದೊಡ್ಡ ಯೋಜನೆಯನ್ನು ಕಾರ್ಯರೂಪಕ್ಕೆ ತಂದಿದೆ. ಅದೇ ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ. ಕರ್ನಾಟಕದ ಮಟ್ಟಿಗಂತೂ ಖಾಸಗಿ ನೆಲೆಯಲ್ಲಿ ಇದು ಪ್ರಥಮ ಪ್ರಯತ್ನ. -ಕರ್ಮವೀರ, 10-5-98

ವಿಜ್ಞಾನ ಮಾಹಿತಿಗಳ ವಾಹಿನಿಯ ನಡುವೆ ಅಲ್ಲಲ್ಲಿ ನೀಡಿರುವ 'ನಿಮಗೆ ತಿಳಿದಿರಲಿ' ವಿಭಾಗವು ಅನೇಕ ಸಾರ್ವತ್ರಿಕ ಆಸಕ್ತಿಯ ವಿಷಯಗಳ ಪರಿಚಯ ನೀಡುವುದರ ಜೊತೆಗೆ ಆ ವಿದ್ಯಮಾನಗಳ ಹಿಂದೆ ಅಡಗಿರುವ ಮೂಲ ವೈಜ್ಞಾನಿಕ ತತ್ವಗಳನ್ನು ತಿಳಿಸಿಕೊಡುತ್ತದೆ. ಇದು ವಿದ್ಯಾರ್ಥಿಗಳಿಗೂ, ಸಾಮಾನ್ಯ ಓದುಗರಿಗೂ ಆಸಕ್ತಿದಾಯಕ. -ಕನ್ನಡಪ್ರಭ, 26-4-98

ಇದೊಂದು ಮರಿ ವಿಶ್ವಕೋಶ. ಕನ್ನಡದಲ್ಲಿ ವಿಜ್ಞಾನ ವಾಙ್ಮಯ ಸಾಕಷ್ಟು ಪ್ರೌಢ ಸ್ಥಿತಿ ಐದಿರುವುದಕ್ಕೆ ಮಾನಕ.... ಕನ್ನಡದ ಹಿರಿಮೆ ಗರಿಮೆ ಬಗ್ಗೆ ಕೃತಾರ್ಥತೆ, ನವಕರ್ನಾಟಕದವರ ಬಗ್ಗೆ ಕೃತಜ್ಞತೆ. - ಜಿ. ಟಿ. ನಾರಾಯಣರಾವ್, ವೆಬ್‌ಸೈಟ್‌ನಲ್ಲಿ

ಈ ಶತಮಾನದ ಮಹತ್ವದ ಪ್ರಕಟಣೆಗಳಲ್ಲಿ ಮೈಲುಗಲ್ಲಾದ ನಿಮ್ಮ ಪ್ರಯತ್ನವನ್ನು ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು ಅಭಿನಂದಿಸುತ್ತದೆ ಮತ್ತು ಶುಭ ಹಾರೈಸುತ್ತದೆ. - ಡಾ॥ ಡಿ. ಕೆ. ಮಹಾಬಲರಾಜು, ಡಾ॥ ಎ. ಟಿ. ಪಾಟೀಲ್




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ : 5159, ಬೆಂಗಳೂರು - 560 001
e-mail : nkp@bgl.vsnl.net.in
ದೂರವಾಣಿ/ಫ್ಯಾಕ್ಸ್ : 2203580/81/82
website : www.navakarnatakabooks.com
ಶಾಖೆಗಳು : ಬೆಂಗಳೂರು - ಮಂಗಳೂರು - ಮೈಸೂರು - ಗುಲ್ಬರ್ಗಾ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published ... Centre, Crescent Road, P. B. 5159, Bangalore-560 001. Chief Editor : Dr. G. Ramakrishna